ಅಂತರ ಭಾರತೀಯ ಪುಸ್ತಕ ಮಾಲೆ

# ಬೇಡಿ ಬಂದ ಭಾಗ್ಯ

(ಪೇಕ ಮೇಡಲು ಎಂಬ ತೆಲುಗು ಕಾದಂಬರಿಯ ಕನ್ನಡ ಅನುವಾದ)

ಮುಪ್ಪಾಳ ರಂಗನಾಯಕಮ್ಮ

ಅನುವಾದ

ಯು. ಜಿ. ಭೀಮರಾವ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ISBN 81-237-1946-9

---

ಮೊದಲ ಮುದ್ರಣ: 1991 (ಶಕ 1913)
ದ್ವಿತೀಯ ಮುದ್ರಣ: 1997 (ಶಕ 1918)

**ರೂ. 30.00**
Original Title : Peka Medalu (*Telugu*)
Kannada Translation : Bedi Banda Bhagya
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ - 110016
ಇವರಿಂದ ಪ್ರಕಟಿತ.

# ಮುನ್ನುಡಿ

ಪೇಕ ಮೇಡಲು ಇತ್ತೀಚಿನ ಖ್ಯಾತ ತೆಲುಗು ಕಾದಂಬರಿ ಬರಹಗಾರ್ತಿ ಮುಪ್ಪಾಳ ರಂಗನಾಯಕಮ್ಮನವರ ಅಮರ ಕೃತಿ. ಇದರಲ್ಲಿ ಸ್ತ್ರೀ ಸಹಜವಾಗಿ ಉದ್ಭವಿಸುವ ಕೆಲವು ಭಾವೋದ್ರೇಕಗಳನ್ನು ಸಹಜವಾಗಿ ಪ್ರತಿಬಿಂಬಿಸಿದ್ದಾರೆ. ಈ ಕಾದಂಬರಿಯ ನಾಯಕಿ ಭಾನುಮತಿಯು ಸ್ವತಂತ್ರ ಮನೋವೃತ್ತಿಯವಳಾದರೂ, ಪರಿಸ್ಥಿತಿಗೆ ಹೊಂದಿಕೊಳ್ಳುವುದು ಅವಶ್ಯಕವೆಂದು ತಿಳಿದೂ, ಒಂದು ನಿರ್ದಿಷ್ಟ ನಿರ್ಧಾರಕ್ಕೆ ಬರುವುದಿಲ್ಲ. ಸಾಂಸಾರಿಕ ಬಾಳುವೆಯಲ್ಲಿ ಹಬ್ಬಿರುವ ಅಶಾಂತಿಯನ್ನು ತನ್ನ ಸೆರಗಿನಿಂದ ಮುಚ್ಚಿ, ಆಡಂಬರತೆಯನ್ನು ಪ್ರದರ್ಶಿಸಬಯಸಳು. ಪುರುಷತ್ವದ ಮೋಹಕ್ಕೆ ಬಲಿಯಾಗಿ ತನ್ನತನವನ್ನು ಕಳೆದುಕೊಳ್ಳುವ ಅಬಲೆಯಾಗಲೂ ಬಯಸುವುದಿಲ್ಲ. ಯೌವ್ವನದ ಹೊಸತಿಲಲ್ಲಿ ಪೋಳಿವ ಆಶಾಜೀವನವು, ವಾಸ್ತವಿಕತೆಯಿಂದ ದೂರವಿರುವುದನ್ನು ನೋಡಿ, ಅವಳ ಮನಸ್ಸಿನಲ್ಲಿ ಆಂದೋಳನ ಉಂಟಾಗುತ್ತದೆ – ಪರಿಣಾಮವಾಗಿ ಅವಳು ತನ್ನ ಸರ್ವಸ್ವವನ್ನೂ, ತನ್ನ ಸಣ್ಣ ಮಗುವನ್ನೂ ಬಿಟ್ಟು, ತನ್ನ ಗಂಡ, ಸಂಸಾರಗಳಿಂದ ಮುಕ್ತಳಾಗುತ್ತಾಳೆ.

ಸಾಮಾಜಿಕ ನೀತಿ ನಿಯಮಗಳ ಆವರಣದಲ್ಲಿ ಸಿಲುಕಿದ ಹೆಣ್ಣಿನ ವಿಹ್ವಲಗೊಂಡ, ಕ್ಷೋಭೆಗೊಳಗಾದ ಹೃದಯವು, ಎಚ್ಚೆತ್ತು ಮನುಷ್ಯನನ್ನು ಜಾಗೃತಿಗೊಳಿಸಲು ತನ್ನ ಅಂತ್ಯವನ್ನು ಕಾಣುತ್ತದೆ.

ಪರವಶತೆಯಲ್ಲಿ ಮೈಮರೆತ ಹೆಂಗಸಿನ ಜೀವಂತ ಚಿತ್ರಣವನ್ನೂ ಈ ಕಾದಂಬರಿಯ ಕಥಾನಾಯಕಿ ಭಾನುಮತಿಯ ಪಾತ್ರದಲ್ಲಿ ಕಾಣಬಹುದು. ಹೆಂಗಸಿನ ಆಶೆ – ಆಕಾಂಕ್ಷೆಗಳು, ಅವಳ ಮನೋಭೀಷ್ಟಗಳು, ಅವಳ ಅರಿವು ಮತ್ತು ವ್ಯಕ್ತಿತ್ವದ ಬಯಕೆಯನ್ನು ಅರಿಯಲೂ ಮನಗೊಡದ ಮೂರ್ಖ ರಾಜಶೇಖರ, ಭಾನುಮತಿಯ ಗಂಡ. ವಾಸ್ತವಿಕತೆ ಕಲ್ಪನೆಗೆ ಭಿನ್ನವಾದಾಗ, ಕಂಗಾಲಾಗಲು ಅವಳ ಅಣ್ಣ ಮತ್ತು ಕೇಶವರಾವ್ ಹೆಜ್ಜೆ ಹೆಜ್ಜೆಗೂ ಅವಳನ್ನು ತಿದ್ದಲು ಪ್ರಯತ್ನಿಸುತ್ತಾನೆ. ರಾಜಶೇಖರ ಮತ್ತು ಕೇಶವರಾವ್ ಇಬ್ಬರೂ ಪುರುಷ ಸ್ವಭಾವದ ಎರಡು ಅತಿರೇಕಗಳು. ರಾಜಶೇಖರನ ಕಠಿಣವರ್ತನೆಯಿಂದ ಬೇಸತ್ತಾಗಲೂ ಭಾನುಮತಿಯಲ್ಲಿ ಬದುಕುವ ಬಯಕೆ ಇದೆ – ಅದೂ ಕೇಶವನ ಭರವಸೆಯ ಆಧಾರದಿಂದ. ಆದರೆ ಅಣ್ಣನ ಅನುಬಂಧ ಎಷ್ಟೇ ಉದಾತ್ತವಾದುದಾದರೂ, ಅದು ಕೇವಲ ಆಶ್ರಯವೇ ವಿನಹ

'ಬದುಕು' ಕೊಡಲಾರದು. ನಿಷ್ಕರುಣೆ ಮತ್ತು ನೀರಸ ಜೀವನದಲ್ಲಿ ಭಾನುಮತಿಯ ಕೋಮಲ ಪ್ರಾಣ ಸಹಜವಾಗೇ ಲುಪ್ತವಾಗುತ್ತದೆ. ಕೆಟ್ಟ ಮೇಲೆ ರಾಜಶೇಖರ ಕಣ್ತೆರೆಯುತ್ತಾನೆ. ಆದರೆ ಭಗ್ನಪ್ರೇಮ, ಕೈ ಜಾರಿದ ಪ್ರಾಣದೊಂದಿಗೇ ಶಾಶ್ವತವಾಗಿ ದೂರವಾಗುತ್ತದೆ.

ಕಾದಂಬರಿಯ ನಿರ್ಮಾಣ ಮತ್ತು ವಿನ್ಯಾಸವನ್ನು ನೋಡಿದರೆ, ಕಥೆಯನ್ನು ಒಮ್ಮೆಲೇ ಹೇಳಿದಂತಿದೆ. ಭಾನುಮತಿಯ ಕರುಣಾಜನಕ ಕಥೆಯೇ ಕಾದಂಬರಿಯ ಆಧಾರವಾಗಿದ್ದರೂ, ಅದರಲ್ಲೂ ಭಾನುಮತಿಯ ಮಾತುಗಳೇ ಜಾಸ್ತಿಯಾಗಿ ಸಿಗುವುದು. ಆದರೂ ಸಹೃದಯ ಓದುಗರ ಮನಸ್ಸಿನಲ್ಲಿ 'ಮುಂದೇನು' ಎನ್ನುವ ಕಾತರ ಇದ್ದೇ ಇರುತ್ತದೆ. ಭಾನುಮತಿಯ ಅಣ್ಣ ಕೇಶವನಂತೆಯೇ ಓದುಗರೂ ಪ್ರಾಯಶಃ ಹಸಿವೆ ನೀರಡಿಕೆಗಳನ್ನು ಮರೆತು ಕಥೆ ಕೇಳುವುದರಲ್ಲಿಯೇ ಮಗ್ನರಾಗುತ್ತಾರೆ. ಕಥೆ ಹೇಳುವುದರಲ್ಲಾಗಲೀ ಸಂಭಾಷಣೆಯಲ್ಲಾಗಲೀ, ಎಲ್ಲೂ ಮೇರೆ ಮೀರಿಲ್ಲ.

ಕಥೆಯ ಅಂತ್ಯದಲ್ಲಿ ಭಾನುಮತಿಯ ಮಗು ತಾಯಿಗಾಗಿ ಹಂಬಲಿಸುವುದು, ಮತ್ತು ಸಂಬಂಧಿಕರು ಶೋಕತಪ್ತರಾಗುವುದು –ಈ ಘಟನೆಗಳಿಂದ ಭಾನುಮತಿಯ ಬಳಗದವರೊಂದಿಗೆ ಓದುಗರೂ ಕರುಣೆಯಿಂದ ತಪ್ತರಾಗುತ್ತಾರೆ.

ಕೊನೆಯಲ್ಲಿ ಭಾನುಮತಿಯ ಅಣ್ಣ, "ಭಾನುವಿಗೆ ಜೀವನದಲ್ಲಿ ಪರಾಜಯಗಳೇ ಏಕೆ ಎದುರಾದುವೋ? ಜೀವನದ ಪ್ರತಿ ಹೆಜ್ಜೆಯಲ್ಲೂ ಅವಳಿಗೆ ಸೋಲೆದುರಾಯ್ತು – ಭಾನು ನಿರ್ಮಿಸಿದ ಗಾಳಿಗೋಪುರಗಳೆಲ್ಲಾ ನೋಡಲು ಸುಂದರವಾಗೇ ಇದ್ದರೂ, ಅವೆಲ್ಲಾ ಏಕೆ ಮಂಜಿನಂತೆ ಕರಗಿ ಹೋದುವೋ? ಎಲೆಯ (ಇಸ್ಪೀಟಿನ) ಮನೆಯಂತೆ ಏಕೆ ಉರುಳಿ ಹೋದುವೋ? ಅದನ್ನವಳು ತನ್ನ ಕರ್ಮ, ಪ್ರಾರಬ್ಧ ಎಂದುಕೊಂಡು ಸಮಾಧಾನಪಡುವ ಅವಶ್ಯಕತೆ ಏನಿತ್ತು?" ಎಂದು ಯೋಚಿಸುತ್ತಾನೆ. ಆಗ ಅದರ ಉತ್ತರವೂ ಅವನಿಗೇ ಹೊಳೆಯುತ್ತದೆ:

"ಭಾನು ಭಾರತದಲ್ಲಿ ಹೆಣ್ಣಾಗಿ ಹುಟ್ಟಿದ್ದು" – ಎಂದು.

ಈ ಪ್ರಶ್ನೆ ಮತ್ತು ಉತ್ತರ – ಇಂದಿನ ಭಾರತ ನಾರಿಗೆ ಅತ್ಯಂತ ಮಹತ್ವಪೂರ್ಣವಾದುದು. ಇಂದಿನ ನಾರಿ ಪ್ರಬುದ್ಧಳು, ಅಜ್ಞಳಲ್ಲ. ಗಂಡನೊಂದಿಗೆ ಎಲ್ಲದರಲ್ಲೂ ಸಮನಾಗಿ ನಿಲ್ಲಬಲ್ಲಳು – ಕುಶಲಿ, ಗಂಡನ್ನೇ ಆಶ್ರಯಿಸಿ ಬಾಳುವ ಅಬಲೆಯಲ್ಲ. ಅವಳಲ್ಲಿ ಈಗ ಯೋಚನಾಶಕ್ತಿ ಬಂದಿದೆ. ಅವಳು ಯಾವ ರೀತಿ ಇರಬೇಕೆಂದು ಗಂಡಸು ಬಯಸುವನೋ, ಅದೇ ರೀತಿಯಲ್ಲಿ ಅವಳೂ ಬಯಸುತ್ತಾಳೆ. ಧರ್ಮ, ಅರ್ಥ, ಕಾಮ, ಎಲ್ಲದರಲ್ಲೂ ಅವಳು ಪುರುಷನ ಸಹಚರಳೇ ಹೊರತು, ಅನುಚರಳಲ್ಲ. ಪೇಕ ಮೇಡಲು ಓದಿದ ನಂತರ ಓದುಗರಲ್ಲಿ ಇದೇ ಭಾವನೆ ಮೂಡಿಬರುವುದು. ಇಲ್ಲೇ ಈ ಕೃತಿಯ ಸಾರ್ಥಕತೆ.

ಶ್ರೀಮತಿ ರಂಗನಾಯಕಮ್ಮನವರ ಪೇಕ ಮೇಡಲು ಅಲ್ಲದೆ ಇನ್ನೂ ಅನೇಕ ಕೃತಿಗಳು

ಹೊರಬಂದಿವೆ. ಇವರ ಮೊದಲ ಕಾದಂಬರಿ *ಕೃಷ್ಣವೇಣಿ* 1962 ರಲ್ಲಿ ಪ್ರಕಟವಾಯಿತು. ಆ ಕಾದಂಬರಿ *ಆಂಧ್ರಪ್ರಭ* ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಬಂದು, ನಂತರ ಪುಸ್ತಕ ರೂಪದಲ್ಲೂ ಪ್ರಕಟವಾಯ್ತು. ಮೊದಲ ಕೃತಿ *ಕೃಷ್ಣವೇಣಿ*ಯಲ್ಲಿಯೇ ಅವರ ಪ್ರತಿಭೆಯ ಬೀಜ ಮೊಳೆಯಿತು. ಕಾದಂಬರಿಯ ನಾಯಕಿ ಕೃಷ್ಣವೇಣಿ, ಕೌಮಾರ್ಯಾವಸ್ಥೆಯಲ್ಲಿಯೇ ಪ್ರೇಮದೊಂದಿಗೆ ಸರಸವಾಡಲು ಪ್ರಯತ್ನಿಸುತ್ತಾಳೆ. ಆರಂಭದಲ್ಲಿ ಪ್ರೀತಿಸಿದ್ದು ಒಬ್ಬನನ್ನಾದರೆ ಮದುವೆಯಾದುದು ಮತ್ತೊಬ್ಬನನ್ನು. ಅವಳ ಪ್ರೇಮದ ಕಥೆ ತಿಳಿದ ಗಂಡ ಅವಳನ್ನು ಬಿಟ್ಟುಬಿಡುತ್ತಾನೆ. ಇಲ್ಲಿಂದ ಮುಂದೆ ಕಥೆ ಎರಡು ವಿಕಲ್ಪ ರೀತಿಯಲ್ಲಿ ಮುಗಿಯುತ್ತದೆ. ಮೊದಲ ಸಂಸ್ಕರಣದಲ್ಲಿ ಲೇಖಕಿಯು, ಪತಿ – ಪತ್ನಿಯರ ಸಂಗಮದಿಂದ, ಕಥೆ ಸುಖಾಂತಗೊಂಡಿತ್ತು. ಆದರೆ ಓದುಗರು ದುಃಖಾಂತವಾದರೆ ಹೇಗಿರುತ್ತದೆ? ಎಂಬ ಕುತೂಹಲವನ್ನು ತೋರ್ಪಡಿಸಿದ್ದರಿಂದ, ಓದುಗರ ಒತ್ತಾಯದ ಮೇರೆಗೆ ದುಃಖಾಂತಗೊಳಿಸಲಾಯ್ತು. ಇದರಿಂದ ನಾವು ಲೇಖಕಿಯ ಕಲಾವಂತಿಕೆಯನ್ನು ಕಾಣಬಹುದು.

ನಂತರ ಬಂದ ರಚನೆಗಳಲ್ಲಿ ದಾಂಪತ್ಯ ಜೀವನದಲ್ಲಿನ ಸೋಲಿನ ಚಿತ್ರಣವನ್ನೂ ಹೆಚ್ಚಾಗಿ ಕಾಣಬಹುದು. ಈ ಭಾವನೆ ಪೇಕ ಮೇಡಲು ವಿನಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದೆ. ಇವರ ರಚನೆಗಳಲ್ಲಿ ಅತಿ ಶ್ರೇಷ್ಠವಾದುದು *ಬಲಿಪೀಠಂ*. *ಪೇಕ ಮೇಡಲು* ವಿನಲ್ಲಿ ಅಕ್ಷರಾಕ್ಷರದಲ್ಲೂ ಮೂಡಿಬಂದ ಭಾವ ಸಂಚಲನೆಯನ್ನು *ಬಲಿಪೀಠಂ* ದಲ್ಲಿ ಮೂಡಿಸಲು ಸಾಧ್ಯವಾಗಿಲ್ಲ. *ಬಲಿಪೀಠಂ* ಅಂತರ್ಜಾತೀಯ ವಿವಾಹವನ್ನು ಕುರಿತು ಬರೆದ ಒಂದು ಕಾದಂಬರಿ. 'ಅರುಣ' ಮತ್ತು ಭಾಸ್ಕರ ಆದರ್ಶದ ಆವೇಶದಲ್ಲಿ ಸತ್ಯದ ಕಠೋರತೆಯನ್ನು ತಿಳಿಯಲು ಅಸಮರ್ಥರಾಗುತ್ತಾರೆ. ಆದರ್ಶದ ಕಲ್ಪನೆಯು ಮಧುರವಾಗಿದ್ದರೆ, ಯಥಾರ್ಥವು, ಮಧುರತೆಯನ್ನೆಲ್ಲಾ ಮರೆಮಾಚುತ್ತದೆ. ಈ ಕಾದಂಬರಿ 1963 ರಲ್ಲಿ ಪ್ರಕಟಗೊಂಡು 1965 ರಲ್ಲಿ ಆಂಧ್ರಪ್ರದೇಶದ ಸಾಹಿತ್ಯ ಅಕ್ಯಾಡೆಮಿಯ ಪುರಸ್ಕಾರವನ್ನು ಪಡೆಯಿತು.

*ಬಲಿಪೀಠಂ*ದ ಅನಂತರ ಕಲಾತ್ಮಕತೆ ಮತ್ತು ಭಾವನೆಗಳನ್ನು ಸಜೀವವಾಗಿ ಚಿತ್ರಿಸಿರುವ ರಚನೆ ಎಂದರೆ *ರಚಯಿತ್ರಿ*. *ರಚಯಿತ್ರಿ*ಯಲ್ಲಿ ಕಾದಂಬರಿಯ ಕರ್ತೃವಿನ ಮನಸ್ಸು ಪ್ರತಿಬಿಂಬಿತವಾಗಿದೆ. ಒಬ್ಬ ಹೆಂಗಸು ವಿವಾಹದನಂತರ, ಒಬ್ಬ ಖ್ಯಾತ ಲೇಖಕಿಯಾಗುತ್ತಾಳೆ. ಈ ಖ್ಯಾತ ಲೇಖಕಿಯ ಭೇಟಿಗಾಗಿ, ಪರಿಚಯಕ್ಕಾಗಿ, ಸಾಹಿತ್ಯದ ವಿಚಾರ ವಿನಿಮಯಕ್ಕಾಗಿ, ಅನೇಕರು ಬರುತ್ತಾರೆ. ಆದರೆ ಈ ವಿಷಯಗಳು ರಚಯಿತ್ರಿಯ ಪತಿಗೆ ಸಹಿಸದು. ಕೊನೆಗೆ ಅವನು ವಿರಕ್ತನಾಗಿ ಪತ್ನಿಯನ್ನು ತೊರೆದು ತೀರ್ಥಯಾತ್ರೆಗೆ ಹೋಗುತ್ತಾನೆ. ಅಲ್ಲೂ ಸಹ ಅವನ ಮನಸ್ಸಿಗೆ ಸಂತೋಷ, ಸಮಾಧಾನ ಸಿಗದು. ನಂತರ ಪಶ್ಚಾತ್ತಾಪದಿಂದ ಕೂಡಿದ ಲಜ್ಜೆಯಿಂದ ಬಂದು ಪತ್ನಿಯನ್ನು ಸೇರುತ್ತಾನೆ. ಈ ಕಾದಂಬರಿಯ ಮೂಲಕ ಕಾದಂಬರಿಗಾರ್ತಿ ಸ್ತ್ರೀ ಸ್ವಾತಂತ್ರ್ಯದ ಅಸ್ತಿತ್ವಕ್ಕಾಗಿ

ಹೋರಾಡಿದ್ದಾರೆ. ಜೊತೆಗೇ ಸಾಹಿತ್ಯ ರಚನೆಯ ಆದರ್ಶ, ಬರಹಗಾರರ ಹೊಣೆಗಾರಿಕೆ, ಸ್ತ್ರೀ ಪುರುಷರ ಪರಸ್ಪರ ಸಂಬಂಧ ಇನ್ನೂ ಮುಂತಾದ ಅನೇಕ ಸಮಸ್ಯೆ - ಪರಿಹಾರಗಳನ್ನು ಓದುಗರ ಮುಂದಿರಿಸಿದ್ದಾರೆ. ಇದು ಇವರ ಹೃದಯಸ್ಪರ್ಶಿ ಕೃತಿ.

ಇತ್ತೀಚೆಗೆ ರಂಗಮ್ಮನವರ ಸ್ವೀಟ್ ಹೋಂ ಎರಡು ಭಾಗಗಳಲ್ಲಿ ಪ್ರಕಟವಾಗಿದ್ದು ಪ್ರತಿಯೊಬ್ಬರೂ ಬಹಳ ಆಸ್ಥೆಯಿಂದ ಓದುತ್ತಿದ್ದಾರೆ. ಇದರಲ್ಲಿ, ಸಂಸಾರದಲ್ಲಿ ಜೀವನವನ್ನು ಸುಖಮಯವನ್ನಾಗಿಸಲು ಪತಿಯ ಹೊಣೆಗಾರಿಕೆಯನ್ನು ಸ್ಪಷ್ಟಪಡಿಸುತ್ತಾ ಸಮಾಜದ ಅನೇಕ ಕಂದಾಚಾರಗಳನ್ನು ಅಲ್ಲಗಳೆದಿದ್ದಾರೆ. ಇದರ ಪ್ರತಿಕ್ರಿಯೆಯ ರೂಪದಲ್ಲಿ ಶಾರ್ವರಿ ಅವರ ಹಾಟ್ ಹೋಂ ಹೊರಬಂದಿತು.

ಸ್ತ್ರೀ ಎಂಬ ಇವರ ಇನ್ನೊಂದು ಕಾದಂಬರಿಯೂ ಉತ್ಕೃಷ್ಟವಾದುದೇ. ಇದರಲ್ಲಿ, ಪ್ರೇಮದಿಂದ ಭಗ್ನಗೊಂಡ, ಒಬ್ಬ ಹೆಂಗಸಿನ ತಪೋಮಯ ಜೀವನವನ್ನು ವರ್ಣಿಸಿದ್ದಾರೆ. ಸಾಧಾರಣವಾಗಿ ಸ್ತ್ರೀ ಚಂಚಲೆ ಎಂದು ಹೇಳುವ ವಾಡಿಕೆ. ಆದರೆ ಸ್ತ್ರೀ ಯಲ್ಲಿ ಸ್ತ್ರೀ ಪುರುಷನಿಗಿಂತಲೂ ಹೆಚ್ಚು ವಿವೇಕಶಾಲಿಯಾಗಿ ಕಾಣುತ್ತಾಳೆ.

ಇವರ ಇನ್ನೊಂದು ಕಾದಂಬರಿ, *ಕೂಲಿನ ಗೋಡಲು* (ಉರುಳಿದ ಗೋಡೆ). ಸಾಂಸಾರಿಕ ಬಾಳುವೆಯಲ್ಲಿನ ಉಬ್ಬರವಿಳಿತದ ಸುಂದರ ಚಿತ್ರಣವನ್ನು ಮೂಡಿಸಿದ್ದಾರೆ.

ಈ ಪ್ರಮುಖ ಕಾದಂಬರಿಗಳೇ ಅಲ್ಲದೆ *ಶೋಭನ ರಾತ್ರಿ* – ಕಥಾ ಸಂಗ್ರಹವೂ ಮುದ್ರಿತವಾಗಿದೆ.

ಈ ರೀತಿ ಇದುವರೆಗೆ ಇವರ ಹತ್ತು-ಹನ್ನೆರಡು ಕಾದಂಬರಿಗಳೂ, ಕಥಾ ಸಂಗ್ರಹಗಳೂ ಪ್ರಕಟವಾಗಿವೆ. ಇವರು ತಮ್ಮ ಹದಿನೈದನೆಯ ವರ್ಷದಿಂದಲೇ ಲೇಖನ ವ್ಯವಸಾಯವನ್ನಾರಂಭಿಸಿದರು. ಈಗ ಇವರ ವಯಸ್ಸು ಮೂವತ್ತು ದಾಟಿದೆ.

ಇವರ ಕೃತಿಗಳ ವೈಶಿಷ್ಟ್ಯವೆಂದರೆ, ಒಳ್ಳೆಯ ಅನುಭವ, ವಾಸ್ತವಿಕತೆಗೆ ಹೆಚ್ಚಿನ ಪ್ರಾಶಸ್ತ್ಯ, ಹೆಣ್ಣಿನ ಸ್ಥಾನ ಮತ್ತು ಕಾರ್ಯಗಳನ್ನು ಚಿತ್ರಿಸುವುದರಲ್ಲಿ ಅವರ ಆತ್ಮೀಯತೆ ಇವರ ಎಲ್ಲಾ ಕೃತಿಗಳಲ್ಲೂ ಆನಂದಮಯ ಜೀವನವನ್ನು ನಡೆಸುವ ಇಚ್ಛೆಯನ್ನು ಅನೇಕ ರೂಪಗಳಲ್ಲಿ ವ್ಯಕ್ತಪಡಿಸಿದ್ದಾರೆ. ಸಾಹಿತ್ಯ, ಸಂಗೀತ, ನೃತ್ಯ, ಮುಂತಾದುವುಗಳು ಯಾವ ರೀತಿ ಕಲೆಗಳಲ್ಲಿ ಸೇರಿವೆಯೋ, ಅದೇ ರೀತಿ ಸುಖಮಯ ಜೀವನವನ್ನು ಕಳೆಯುವುದೂ ಒಂದು ಕಲೆ ಎಂಬುವುದು ಇವರ ಅಭಿಪ್ರಾಯ. ಈ ಕಲಾರಾಧನೆಯೇ ಇವರ ಸಾಹಿತ್ಯ ಸಾಧನೆಯ ಚರಮ ಗುರಿ.

ಶ್ರೀಮತಿ ರಂಗನಾಯಕಮ್ಮನವರಂತೆಯೇ ಇನ್ನೂ ಅನೇಕ ಪ್ರಸಿದ್ಧ ಲೇಖಕರಿದ್ದಾರೆ. ಇವರಲ್ಲಿ ಕೊವಟಗಂಟಿ ಕುಟುಂಬರಾವ್, ರಾಚಕೊಂಡ ವಿಶ್ವನಾಥಶಾಸ್ತ್ರಿ, ಬಲಿವಾಡ ಕಾಂತಾರಾವ್, ದ್ವಿವೇದುಲ ವಿಶಾಲಾಕ್ಷಿ, ಯದ್ದನಪೂಡಿ ಸುಲೋಚನಾರಾಣಿ, ಕೋಡೂರಿ ಕೌಸಲ್ಯಾದೇವಿ. ಇವರುಗಳೂ ಇದೇ ರೀತಿಯ ಮನ್ನಣೆಗೆ ಪಾತ್ರರು. ಇವರೆಲ್ಲರೂ ಇತ್ತೀಚೆಗೆ ಕಾದಂಬರೀ ಸಾಹಿತ್ಯವನ್ನು ಸಮೃದ್ಧವನ್ನಾಗಿಸುತ್ತಿದ್ದಾರೆ. ಇತ್ತೀಚೆಗೆ

ತೆಲುಗು ಭಾಷೆಯ ಓದುಗರು ಕಥೆ, ಕಾದಂಬರಿ ಓದುವುದರಲ್ಲಿ ಹೆಚ್ಚು ಆಸಕ್ತಿ ತೋರಿಸುತ್ತಿದ್ದಾರೆ. ಜನರ ಅಭಿರುಚಿಯನ್ನು ಕಂಡು ಓದಿಯುವ ಲೇಖಕರೂ ದಿನೇ ದಿನೇ ಹೆಚ್ಚುತ್ತಿದ್ದಾರೆ.

ತೆಲುಗು ಕಾದಂಬರಿಯ ಹುಟ್ಟು 1878 ರಲ್ಲಿ ಕಂದುಕೂರಿ ವಿರೇಶಲಿಂಗಂ ಅವರ ರಾಜಶೇಖರ ಚರಿತಂನಿಂದ ಪ್ರಾರಂಭವಾದರೂ, ಕಾದಂಬರಿಯ ಸಂಪೂರ್ಣ ಬೆಳವಣಿಗೆಯೊಂದನ್ನು ಇತ್ತೀಚೆಗೆ ನೋಡಬಹುದು. ವಿರೇಶಲಿಂಗಂರವರ ನಂತರ, ಲಕ್ಷ್ಮೀನಾರಾಯಣ ಅವರ ಮಾಲಪಲ್ಲಿ ನಿಜವಾದ ಕಾದಂಬರಿ ರಚನೆಗೆ ದಾರಿತೋರಿತು. ಸಾಮಾಜಿಕ ಜೀವನದ ಚಿತ್ರಣವನ್ನು ಮಾಡಿ, ಸಮಾಜವನ್ನು ಪ್ರತಿಯೊಂದು ರೀತಿಯಲ್ಲೂ ತಿದ್ದಲು ಸಹಕಾರಿಯಾಗಿರುವುದು ಕಾದಂಬರಿ.

ಕಾದಂಬರಿಯನ್ನು ತೆಲುಗಿನಲ್ಲಿ 'ನವಲ' ಅಥವಾ 'ನವಲಿಕ' ಎಂದು ಹೇಳುತ್ತಾರೆ. ಈ ಶಬ್ದದ ಮೂಲರೂಪ ಇಂಗ್ಲಿಷ್ ಭಾಷೆಯಾದರೂ ಭಾರತೀಯ ಸಾಹಿತ್ಯದ ಆಧುನಿಕ ರೀತಿನೀತಿಯನ್ನು ನೋಡಿದರೆ ಸಾರ್ಥಕ ಮತ್ತು ಉಚಿತವೆನಿಸುತ್ತದೆ.

ಕವಿ ಸಾಮ್ರಾಟ್ ವಿಶ್ವನಾಥ ಸತ್ಯನಾರಾಯಣ ಅವರ ವೇಯಿ ಪಡಗಲು ಮತ್ತು ಬಾಪಿರಾಜುರವರ ನಾರಾಯಣರಾವ್, ಒಂದೇ ಕಾಲದಲ್ಲಿ ಪ್ರಕಟವಾದುವು. ಇಬ್ಬರು ಕಲಾವಿದರೂ ರಚನಾ ಕೌಶಲ್ಯವನ್ನು ಮುಂದುವರೆಸಲು ಶ್ರಮಿಸಿದ್ದಾರೆ. ಸತ್ಯನಾರಾಯಣರವರ ಏಕವೀರ ತೆರೆಕಂಡಿದೆ. ಇದೇ ರೀತಿ ದ್ವಿವೇದುಲು ವಿಶಾಲಾಕ್ಷಿಯವರ ವಾರ್ಧ ಕಾದಂಬರಿಯೂ ತೆರೆಕಂಡಿದೆ.

ಇತ್ತೀಚೆಗೆ ತೆಲುಗು ಪತ್ರಿಕೆಗಳಲ್ಲಿ ಅನೇಕ ಧಾರಾವಾಹಿ ಕಾದಂಬರಿಗಳು ಹೊರಬರುತ್ತಿವೆ. ಈ ಕಾದಂಬರಿಗಳು ಎಷ್ಟು ಪ್ರಚಲಿತವಾಗಿವೆ ಎಂದರೆ, ಬೆಳೆಯುತ್ತಿರುವ ಓದುಗರ ಪ್ರೋತ್ಸಾಹದಿಂದ ಉತ್ಸಾಹೀ ಲೇಖಕರೂ ಹೆಚ್ಚುತ್ತಿದ್ದಾರೆ. ಕವಿಗಳೂ ಇತ್ತೀಚೆಗೆ ಈ ಕ್ಷೇತ್ರದ ಕಡೆಗೇ ಹೆಚ್ಚು ಹೆಚ್ಚು ಒಲವನ್ನು ತೋರಿಸುತ್ತಿದ್ದಾರೆ. ಪ್ರತಿ ವರ್ಷ, ಕಥೆ ಕಾದಂಬರಿಗಾಗಿ ಅನೇಕ ಸ್ಪರ್ಧೆಗಳೂ ಏರ್ಪಾಟಾಗುತ್ತಿವೆ. ಇದರಿಂದಲೂ ಲೇಖನ ವ್ಯವಸಾಯಕ್ಕೆ ಅತಿಯಾದ ಪ್ರೋತ್ಸಾಹ ದೊರೆಯುತ್ತಿದೆ.

ಹಿಂದಿಯನ್ನುಳಿದು ಇನ್ಯಾವ ಭಾರತೀಯ ಭಾಷೆಯಲ್ಲೂ ಇಷ್ಟು ಪ್ರೋತ್ಸಾಹ ಕಾದಂಬರಿಗೆ ದೊರೆತಿಲ್ಲ. ಇದೊಂದು ಶುಭಸೂಚನೆ. ಸಾಮಾಜಿಕ ಜೀವನದ ಒಳಮರ್ಮ, ಜಟಿಲತೆ, ಗಂಡಸರಿಗಿಂತ ಹೆಂಗಸರಿಗೇ ಜಾಸ್ತಿ ತಿಳಿದಿರುವುದು. ಅದು ಸಹಜತೆಯನ್ನು ತಾಳುತ್ತದೆ ಮತ್ತು ಹೆಚ್ಚು ಕಲಾತ್ಮಕವಾಗುತ್ತದೆ. ಕಾವ್ಯದ ಪರಮಾರ್ಥ 'ಕಾಂತಾಸಮ್ಮಿತ'ವಾದರೆ, ಇದು ಸ್ತ್ರೀಯರ ಮೂಲಕವೇ ಈ ಕಾರ್ಯ ಸಾಗುವುದು.

ಹಿಂದೆ ನಾಟಕಗಳಲ್ಲಿ ಸ್ತ್ರೀ ಪಾತ್ರಗಳನ್ನು ಪುರುಷನೇ ಮಾಡಬೇಕಾಗಿತ್ತು. ಆದರೆ ಈಗ ಕಾಲ ಬದಲಾಗಿದೆ. ಈಗ ಅವರವರ ಪಾತ್ರಗಳನ್ನು ಅವರವರೇ ಮಾಡುತ್ತಿದ್ದಾರೆ. ಇದೇ ವಿನ್ಯಾಸವನ್ನು ತೆಲುಗು ಕಾದಂಬರಿಗಳಲ್ಲೂ ಕಾಣಬಹುದು. ಸ್ತ್ರೀಯರು ಬರೆದ

ಕಾದಂಬರಿಗಳು ಹೆಂಗಸಿನ ಜೀವನದ ಸಮಸ್ಯೆಗಳನ್ನು ಹೆಚ್ಚು ಹೆಚ್ಚಾಗಿ ಸ್ಪಷ್ಟವಾಗಿ ಚಿತ್ರಿಸುವುದರಲ್ಲಿ ಸಮರ್ಥವಾಗಿವೆ. ಅದೇ ಪುರುಷರು ಬರೆದ ಕಾದಂಬರಿಗಳು ಜೀವನದ ಹೆಚ್ಚು ಕ್ಷೇತ್ರಕ್ಕೆ ಸಂಬಂಧಿಸಿವೆ. ಇಬ್ಬರ ಕ್ಷೇತ್ರಗಳೂ ಬೇರೆ ಬೇರೆಯಾಗಿವೆ. ಈ ದಿಶೆಯಲ್ಲಿ ವಿಶ್ವನಾಥ ಸತ್ಯನಾರಾಯಣರಂಥ ಲೇಖಕರ ಅತ್ಯುತ್ತಮ ರಚನೆಗಳನ್ನು ಇತ್ತೀಚೆಗೆ ತೆಲುಗು ಕ್ಷೇತ್ರಗಳಲ್ಲಿ ವಿವಿಧ ಬಗೆಯಲ್ಲಿ ಕಾಣಬಹುದು. ಏನೇ ಆದರೂ ಇತ್ತೀಚೆಗೆ ತೆಲುಗು ಕಾದಂಬರಿಗಳಲ್ಲಿ ಮಹಿಳೆಯರ ಪಾತ್ರವೇ ಜಾಸ್ತಿಯಾಗಿದೆ.

ಶ್ರೀಮತಿ ಮುಪ್ಪಾಳ ರಂಗನಾಯಕಮ್ಮ ಇಂದಿನ ಖ್ಯಾತ ಲೇಖಕಿಯರಲ್ಲಿ ಮುಂದಿದ್ದಾರೆ. ಇವರ ಪೇಕ ಮೇಡಲುವನ್ನು ಹೊರತರುತ್ತಿರುವುದು ಸಂತೋಷವನ್ನುಂಟುಮಾಡಿದೆ. ಓದುಗರು ಇದನ್ನು ಪ್ರೀತಿಯಿಂದ ಸ್ವಾಗತಿಸುವರೆಂಬ ನಂಬಿಕೆ ಇದೆ.

—ಪಾಂಡುರಂಗರಾವ್

# ಬೇಡಿ ಬಂದ ಭಾಗ್ಯ

ಉರುಳುರುಳಿ ನಗುತ್ತಿದ್ದಳು ಭಾನುಮತಿ.

ಬೆಚ್ಚಿಬಿದ್ದು ಎದ್ದು ಕುಳಿತೆ. ಭಾನು ಅಳುತ್ತಿದ್ದಾಳೇನೋ? ಈ ಅರ್ಧ ರಾತ್ರಿಯಲ್ಲಿ, ಅದೂ ಪಾಪ ಒಬ್ಬಳೇ! ಕತ್ತಲೆಯಲ್ಲಿಯೇ ತುಂಬಾ ಹೊತ್ತು ಕುಳಿತಿದ್ದೆ. ಯೋಚಿಸಿದಂತೆ, ಹಾಗೆಯೇ ಒಮ್ಮೆ ಭಾನುವಿನ ಮನೆಗೆ ಹೋಗಿಬಂದರೆ? ಅನ್ನಿಸಿತು. ಆದರೆ ಈ ಅರ್ಧ ರಾತ್ರಿಯಲ್ಲಿ ಹೋದರೆ ಅವನು! – ಅವಳ ಗಂಡ ಎನಿಸಿಕೊಂಡಿರುವ ಭಂಡ ಏನಾದರೂ ತಿಳಿದುಕೊಳ್ಳುತ್ತಾನೇನೋ? ಒಂದು ವೇಳೆ ಬಾಯಿಗೆ ಬಂದಂತೆ ಮಾತನಾಡಿದರೆ! ಯೋಚಿಸುತ್ತಿರುವಂತೆಯೇ ಮಂಪರು ಬಂದಂತಾಯ್ತು.

ಯಾರೋ ಕಂಗಾಲಾಗಿ ಗಾಬರಿ ಕಳವಳಗಳಿಂದ ಎಬ್ಬಿಸಿದಂತಾಯ್ತು. ಬೆಚ್ಚಿದೆ. ಎಬ್ಬಿಸಿದ್ದು ಭಾನುವಿನ ಗಂಡ ರಾಜಶೇಖರ! ವ್ಯಕ್ತಿ ಛಳಿ ಬಂದವನಂತೆ ಕಂಪಿಸುತ್ತಿದ್ದ.

“ಭಾ...ಭಾನು...ಇಲ್ಲ...ಈ ...ಈ...ಕಾಗದ...”

ತಡವರಿಸುತ್ತಾ ಹೇಳಿದ. ಹೆದರಿಕೆಯಿಂದ ನನಗೂ ನಡುಕ ಬಂದಂತಾಯ್ತು. ಶರೀರದಲ್ಲಿ ರಕ್ತ ಪರಿಚಲನೆ ನಿಂತು, ರಕ್ತ ಹೆಪ್ಪುಗಟ್ಟಿದೆಯೋ ಏನೋ ಅನಿಸಿತು. ಏನೋ ಒಂದು ಕೆಟ್ಟ ಕನಸು ಕಂಡಂತೆ ತೋರಿತ್ತು. ಗಂಟಲು ಸರಿಪಡಿಸಿಕೊಂಡು,

“ಭಾನು ಮನೆಯಲ್ಲಿಲ್ಲವೆ?.. ಏನಾದಳು?...ಎಲ್ಲಿಗೆ ಹೋದಳು?” – ಎಂದು ಕೇಳಿದೆ.

ರಾಜಶೇಖರ ಅಪರಾಧಿಯಂತೆ ತಲೆತಗ್ಗಿಸಿ ನಿಂತ. ಭಯ ಅವನಲ್ಲಿ ಸ್ಪಷ್ಟವಾಗಿ ಗೋಚರಿಸುತ್ತಿತ್ತು.

“ಏನೋ, ಗೊತ್ತಿಲ್ಲ. ಮಗು ಉಸಿರು ಹಿಡಿದು ಅಳುತ್ತಿದ್ದ. ಎಚ್ಚರಿಕೆಯಾಯ್ತು. ಅವರಮ್ಮ ಬರುತ್ತಾಳೆ ಎಂದು ಕೊಂಚ ಹೊತ್ತು ಹಾಗೇ ಮಲಗಿದ್ದೆ. ಮಗು ಅಡಿಗೆಯ ಮನೆಯ ಮುಂದೆ ಹೋಗಿ ನಿಂತು ಅಳುತ್ತಿತ್ತು. ಎದ್ದು ಹೋದೆ. ಎಷ್ಟು ಕೂಗಿದರೂ ಉತ್ತರವಿಲ್ಲ. ಏನೋ ಅನುಮಾನವಾಯ್ತು. ಬೇಗ ಬೇಗ ಕೋಣೆಗೆ ಬಂದು ನೋಡಿದೆ. ಮೇಜಿನ ಮೇಲೆ ಕಾಗದಗಳಿದ್ದುವು. ನನಗೆ ಬರೆದ ಕಾಗದ ಮೇಲೆ ಇತ್ತು. ಬಿಡಿಸಿ ಓದಿದೆ.

“ನಿಮ್ಮ ಬಾಳಿನಿಂದ ಶಾಶ್ವತವಾಗಿ ದೂರಹೋಗುತ್ತಿದ್ದೇನೆ... ಇನ್ನೂ ಏನೇನೋ ಬರೆದಿದ್ದಳು. ನಾನು ಪೂರ್ತಿಯಾಗಿ ಓದಲಿಲ್ಲ. ಮಗುವನ್ನು ಪಕ್ಕದ ಮನೆಯವರ ವಶದಲ್ಲಿ ಬಿಟ್ಟು ಬಂದೆ.... ನೀವು...” ಮಾತು ಮುಗಿಸಲಾರದೆ ನಿಲ್ಲಿಸಿ ಮುಖ ನೋಡಿದ.

ಎಲ್ಲವೂ ಅರ್ಥವಾಯ್ತು.

ರಾತ್ರಿ ಏನೋ ಹಗರಣವಾಗಿರಬಹುದು. ಭಾನು ರೋಸಿ, ಎಲ್ಲ ಅನುಬಂಧಗಳನ್ನೂ ಹರಿದುಕೊಂಡು, ಕರುಳಿನ ಕರೆಯನ್ನು ಕಡೆಗಣಿಸಿ, ಬಲವಂತದಿಂದ ಸಾಯಲೆಂದೇ ಹೊರಟು ಹೋದಳು ಭಾನುಮತಿ.

"ಭಾ...ನೂ.."

ಹುಚ್ಚನಂತೆ ಕಿರಿಚಿದೆ. ಅಳಲು ಆವರಿಸಿ ಬಂತು. ದುಃಖವನ್ನು ತಡೆಯಲಾರದೆ ಗೋಡೆಗೆ ತಲೆ ಚಚ್ಚಿಕೊಂಡೆ.

"ಅಯ್ಯೋ...ಭಾನೂ...." ಎಂದು ಬಿಕ್ಕಿ ಬಿಕ್ಕಿ ಅತ್ತೆ.

ಕೂಡಲೇ ಕರ್ತವ್ಯದ ನೆನಪಾಯ್ತು. ಸ್ಟ್ಯಾಂಡಿನ ಮೇಲಿದ್ದ ಅಂಗಿಯನ್ನೆತ್ತಿ ಹಾಕಿಕೊಂಡೆ. ಭಾನು ಬರೆದಿದ್ದ ಕಾಗದಗಳನ್ನು ಓದುವಷ್ಟು ಸಮಯವಾಗಲೀ ಸಹನೆಯಾಗಲೀ ಇರಲಿಲ್ಲ. ಆ ಕಾಗದಗಳನ್ನು ಕಿಸೆಗೆ ತುರುಕಿಕೊಂಡೆ. ಪಕ್ಕದ ಕೋಣೆಗೆ ಹೋಗಿ ಗೆಳೆಯರಿಬ್ಬರನ್ನು ಎಬ್ಬಿಸಿ, ಅವರಿಗೆ ವಿಷಯನ್ನು ಕ್ಲುಪ್ತವಾಗಿ ತಿಳಿಸಿದೆ. ನಿಮಿಷ ಒಂದುರುಳುವುದರಲ್ಲಿ ಸಮುದ್ರದ ದಡದತ್ತ, ರೈಲು ಹಳಿಯತ್ತ, ಸೈಕಲ್ಲುಗಳ ಮೇಲೆ ಹೊರಟೆವು.

ಗಂಟೆ, ರಾತ್ರಿ ಮೂರಾಗಿತ್ತು. ಮುಂದುಗಾಣದಂತಹ ಕಾರ್ಗತ್ತಲು. ಕಣ್ಣು ತಿವಿದುಕೊಂಡರೂ ಏನೂ ಕಾಣದು. ಸಮುದ್ರದ ಕಡೆಯಲ್ಲೆಲ್ಲಾ ಹುಡುಕಾಡಿದೆ. ನೆನೆದ ಮರಳಿನಲ್ಲಿ ಹೂತುಹೋಗುತ್ತಿದ್ದ ಕಾಲನ್ನು ಎಳೆದುಕೊಳ್ಳುತ್ತಾ, ಓಡಲಾರದೆ ಓಡುತ್ತಾ ನೀರಿನತ್ತ ಟಾರ್ಚ್‌ಲೈಟ್ ಬಿಡುತ್ತಾ, ಎದ್ದು ಬೀಳುವ ತರಂಗಗಳ ಮೇಲೆ ದೃಷ್ಟಿ ಹರಿಸುತ್ತಾ.

"ಭಾನೂ....ಭಾನೂ... ಅಮ್ಮಾ ಭಾನೂ... !"

ಎಂದು ಶಕ್ತಿ ಮೀರಿ ಕೂಗುತ್ತಾ ಮೂರು ಗಂಟೆಗಳ ಕಾಲ ತಿರುಗುತ್ತಲೇ ಇದ್ದೆ. ಬೆಳಗೆ ಬೆಳಗಾಯ್ತು. ಆಶಾದೀಪ ನಂದಿ ಹೋಯ್ತು. ಭಾನು ಮಾಯವಾಯ್ತು. ಅನಂತ ಸಾಗರದ ಗರ್ಭದಲ್ಲಿನ ನಿತ್ಯನೂತನ ಪ್ರವಾಹದಲ್ಲಿ ಲೀನಳಾಗಿ ಹೋದಳು.

"ಭಾನೂ... !"

ಎನ್ನುತ್ತಾ ಕುಕ್ಕರಿಸಿದೆ. ಗಟ್ಟಿಯಾಗಿ ಅಳುತ್ತಿದ್ದೆ.

"ಭಾನೂ... ಇನ್ನಿಲ್ಲ.. ಹೊರಟುಹೋದಳು... ಇಲ್ಲ... ಇನ್ನಿಲ್ಲ!" ಆ ಅಳಲು ಮರುಘಳಿಗೆಯಲ್ಲಿ ಮರುಕಳಿಸಿ, ಹೃದಯವನ್ನು ಹಿಂಡುವಂತಹ ಆ ಆವೇದನೆ – ಅಸಾಧ್ಯವಾದ ಆಂದೋಳನೆ– ಎಲ್ಲವೂ– ಎಲ್ಲವೂ ಬದಲಾಗಿ ಹೋದುವು. ಆ ರಾಜಶೇಖರನ ಮೇಲೆ ಹಗೆ! ಕ್ರೋಧ! ಅಸಹ್ಯ! ಪ್ರತೀಕಾರ! ಮುಷ್ಟಿ ಬಿಗಿಯಾಗುತ್ತಿತ್ತು. ಹಲ್ಲು ಕಟಕಟನೆ ಶಬ್ದಮಾಡಿತು. ಉಸಿರಿನ ವೇಗ ಜಾಸ್ತಿಯಾಗಿತ್ತು. ಮೇಲೆದ್ದು ಹೊರಟೆ.

ಗೆಳೆಯರು ಮೂವರೂ ಎದುರಾದರು. ರೈಲು ಹಳಿಯುದ್ದಕ್ಕೂ ಹುಡುಕಿಕೊಂಡು ಬಂದಿದ್ದರು. ರಾಜಶೇಖರ ನನ್ನನ್ನು ನೋಡುತ್ತಲೇ,

"ರಾತ್ರಿ ರೈಲು ಹಳಿಯ ಮೇಲೆ ಯಾವ ಅಪಘಾತವೂ ನಡೆದಿಲ್ಲವಂತೆ. ಸ್ಟೇಷನ್ನಿನಲ್ಲಿ ವಿಚಾರಿಸಿದೆ."

ಎಂದವನೇ ತಲೆತಗ್ಗಿಸಿಕೊಂಡ.

"ತುಂಬಾ ದೊಡ್ಡ ಕೆಲಸ ಮಾಡಿದೆ. ಏನು ಅಪಘಾತವಾದರೂ ನಿನ್ನಿಂದಲೇ ಆಗಿರಬೇಕು! ನಿಜ ಬೊಗಳು ರಾತ್ರಿ ಏನು ರಾದ್ಧಾಂತ ಮಾಡಿದೆ?" ಗದರಿದೆ.

ನನ್ನ ಮಾತು ಕೇಳಿ ಬೆಕ್ಕಸಬೆರಗಾದ. ಪ್ರಾಯಶಃ ನನ್ನ ಮಾತಿನಲ್ಲಿನ ಚುರುಕು, ಹಗುರಾದ ಭಾವನೆಗಳಿರಬಹುದು! ಮತ್ತೆ ಅವನೇ ಹೇಳಿದ.

"ರಾತ್ರಿ ಏನು ರಾದ್ಧಾಂತವೂ ಆಗಲಿಲ್ಲ!"

"ಏನೂ ಆಗಲಿಲ್ಲವೆ? ಏನೂ ಇಲ್ಲವೇ?"

"ಏನೂ ಇಲ್ಲಾರೀ?"

"ಊಂ, ಏನೂ ನಡೆಯದೆಯೇ ಸುಮ್ಮನೇ ಹುಡುಗಾಟಕ್ಕೆ ಪ್ರಾಣಕ್ಕಿಂತಲೂ ಮಿಗಿಲಾಗಿ ಪ್ರೀತಿಸುತ್ತಿದ್ದ ಹಸುಳೆಯನ್ನು, ಕಂದನನ್ನು ಬಿಟ್ಟು ಹೋದಳೇ? ಕಳ್ಳ ರ್‍ಯಾಸ್ಕಲ್! ನಿನ್ನ ಪಾಪದ ಕೊಡ ತುಂಬಿದೆ. ನನ್ನ ತಂಗಿಯನ್ನು ನಿನ್ನಿಷ್ಟ ಬಂದಂತೆ ಹೊಟ್ಟೆಯುರಿಸಿ, ಗೋಳಾಡಿಸಿ ಕೊನೆಗೆ ಪ್ರಾಣವನ್ನೂ ತೆಗೆದೆಯಾ? ತುಂಬು ಬಾಳನ್ನು ಬಯಲು ಮಾಡಿದ ನಿನ್ನ ... ನಿನ್ನ –"

ಎನ್ನುತ್ತಾ ಮಿತಿಮೀರಿದ ಆವೇಶದಿಂದ ಪಟಪಟನೆ ಎರಡು ಕೆನ್ನೆಗಳೂ ಊದುವಂತೆ ಬಾರಿಸಿದೆ. ಚೆನ್ನಾಗಿ ಕಾಲಿನಿಂದ ಒದೆದು, ಕೈಗೆ ಸಿಕ್ಕಿದಂತೆ ಒಡಿದೆ. ಕೊಲ್ಲುವುದೊಂದು ಬಿಟ್ಟು ಚಿತ್ರಹಿಂಸೆ ಮಾಡಿದೆ. ಗೆಳೆಯರು ಮಧ್ಯೆ ಬಂದುದರಿಂದ ತಡೆದುಕೊಂಡೆ. ಆ ಸ್ಥಿತಿ ವರ್ಣನಾತೀತ! ಅಯೋಮಯ!

ಭಾನು ತೀರಿಕೊಂಡಳು.

ಮಗನನ್ನು ತಬ್ಬಲಿಯನ್ನಾಗಿಸಿ ಹೊರಟು ಹೋದಳು. ಇನ್ನು ಆ ಹಸುಳೆಯ ಜವಬ್ದಾರಿ ನನ್ನದೇ!

* * *

ಮಗು ತೊಡೆಯ ಮೇಲೆ ಮಲಗಿ ನಿದ್ರಿಸುತ್ತಿತ್ತು. ಆ ಎಳೆಯ ಮಗುವನ್ನು ನೋಡಿದಷ್ಟು ದುಃಖದ ತೆರೆ ಉಕ್ಕಿ ಉಕ್ಕಿ ಬರುತ್ತಿತ್ತು. ನನಗರಿವಿಲ್ಲದಂತೆಯೇ ನನ್ನ ಕಣ್ಣಿನಿಂದ ಕಂಬನಿ ಜಾರಿ ಮಗುವಿನ ಕೆನ್ನೆಯ ಮೇಲೆ ತೊಟ್ಟಿಕ್ಕಿತು. ತಲೆ ತಗ್ಗಿಸಿಕೊಂಡು ಕಂಬನಿಯೊರೆಸಿಕೊಂಡೆ. ರೈಲು ತನ್ನಪಾಡಿಗೆ ವೇಗದಿಂದ ಮುಂದೋಡುತ್ತಿತ್ತು. ನನ್ನ ಮನಸ್ಸು ರೈಲೋಡುತ್ತಿದ್ದ ವಿರುದ್ಧ ದಿಕ್ಕಿನಲ್ಲಿ ಹಿಂದೆ ಹಿಂದೆ ಓಡುತ್ತಿತ್ತು....

* * *

ಸ್ಕೂಲು ಫೈನಲ್ ಫಲಿತಾಂಶ ಬಂದಿತ್ತು. ಸಂತೋಷವೂ ತುಂಬಿತ್ತು. ನಿಂತಂತೆಯೇ ಹೋಗಿ ನನ್ನ ಸಂತೋಷವನ್ನು ಹಂಚಿಕೊಳ್ಳಬೇಕೆಂದೂ, ಹಾಗೆಯೇ ಭಾನುವಿನ ಸಂತೋಷದಲ್ಲೂ ಪಾಲುಗೊಳ್ಳಬೇಕು ಅನಿಸಿತ್ತು. ಆದರೂ ತಂದೆಯವರ ಬಲವಂತದಿಂದಾಗಿ ಎರಡು ದಿನ ಊರು ಬಿಡಲಾಗಲಿಲ್ಲ.

ಪಟ್ಟಣದಲ್ಲಿ ನಮ್ಮ ಚಿಕ್ಕಪ್ಪನ ಮನೆ ತಲುಪುವ ಹೊತ್ತಿಗೆ ಸಂಜೆಯಾಗಿತ್ತು. ಬೀದಿಯ ಬಾಗಿಲಲ್ಲಿ ಅಡಿ ಇರಿಸುತ್ತಿರುವಂತೆಯೇ ನಮ್ಮ ಚಿಕ್ಕಪ್ಪ, ಚಿಕ್ಕಮ್ಮ, ಅಣ್ಣಂದಿರು ಎಲ್ಲರೂ ಎದಿರು ಬಂದು ಮಾತನಾಡಿಸಿದರು. ನಾನು, ಭಾನು ತೇರ್ಗಡೆಯಾದುದಕ್ಕೆ ಸಂತೋಷಿಸಿದರು. ನಮ್ಮ ಮನೆಯವರ ಕುಶಲ ಪ್ರಶ್ನೆ ಮಾಡಿದರು. ನಮ್ಮ ಊರಿನ ವಿಶೇಷಗಳನ್ನು ಕೇಳಿ ತಿಳಿದುಕೊಂಡರು. ಉಭಯ ಕುಶಲೋಪರಿಯದೊಂದು ದೊಡ್ಡ ಸಂಭ್ರಮವಾಗಿತ್ತು.

"ಕೇಶು ಅಣ್ಣ ಬಂದ, ಕೇಶು ಮಾವ ಬಂದ–"ಎಂದು ಮಕ್ಕಳೆಲ್ಲಾ ತಮ್ಮ ತಮ್ಮ ದಾವೆ ಹಿಡಿದು ಕೂಗುತ್ತಾ ಸುತ್ತು ಮುತ್ತಿದರು. ಎಲ್ಲರಿಗೂ ಬಿಸ್ಕತ್ ಚಾಕ್ಲೇಟ್ ಹಂಚಿದೆ. ಬೆಲೂನ್, ಪೀಪಿಗಳನ್ನು ಅವರವರ ವಯಸ್ಸಿಗನುಗುಣವಾಗಿ ಕೊಟ್ಟೆ. ಬೆಲೂನನ್ನು ನನ್ನ ಕೈಯಿಂದ ಕಸಿದುಕೊಂಡು ದವಡೆ ನೋವು ಬರುವವರೆಗೂ ಊದುತ್ತಾ ಅವನ್ನು ಒದೆಯುತ್ತಾ, ಕಿವಿಯ ತಮಟೆಯೊಡೆಯುವಂತೆ ಪೀಪಿಯೂದುತ್ತಾ ಸಂತೆಯಂತೆ ಗಲಭೆ ಮಾಡುತ್ತಿದ್ದ ಮಕ್ಕಳನ್ನು ಗದರಿ ಬೇಸರಿಸಿಕೊಂಡು ಎದ್ದು ಹೊರಟುಹೋದಳು. ನಾವು ಮೊದಲ ವರ್ಷವೇ ಪರೀಕ್ಷೆಯಲ್ಲಿ ತೇರ್ಗಡೆಯಾದುದಕ್ಕೆ ತುಂಬಾ ಸಂತೋಷವಾಗಿದೆ ಎಂದೂ, ನನ್ನನ್ನು ಕಾಣುತ್ತಲೇ ನಗುನಗುತ್ತಾ ಮಾತನಾಡಿಸುತ್ತಾಳೆ ಎಂದು ಎಣಿಸಿದ್ದೆ. ಅಂಥದೇನೂ ಇಲ್ಲ. ಏನೋ ಒಂದು ಬಗೆಯ ಉದಾಸೀನತೆಯಿಂದ, ಚಿಂತಾಭರಿತಳಾದವಳಂತೆ ಕಾಣುತ್ತಿದ್ದಳು. ಸುತ್ತಲೂ ಮಕ್ಕಳನ್ನು ಸೇರಿಸಿಕೊಂಡು, ಅವರಿಗಿಂತಲೂ ಹೆಚ್ಚಾಗಿ ಗಲಾಟೆ ಮಾಡುತ್ತಿದ್ದ ಭಾನು ಅಷ್ಟೊಂದು ಅನ್ಯಮನಸ್ಕತೆಯಿಂದಿದ್ದುದನ್ನು ನೋಡಿದ ನೆನಪೇ ನನಗಿರಲಿಲ್ಲ.

"ಭಾನು! ಏಕೇ ಹಾಗಿದ್ದೀ?"– ನಗುತ್ತಾ ಕೇಳಿದೆ ನಾನು.

"ಏನೂ ಇಲ್ಲ" ಮೊಟಕಾಗಿ ಉತ್ತರಿಸಿದಳು ಭಾನು.

ಅಷ್ಟರಲ್ಲಿ ಪುನಃ ಹುಡುಗರು ಗಲಾಟೆಗಾರಂಭಿಸಿದುದರಿಂದ ಬೇಸರಿಸಿಕೊಂಡು ಹೊರಟುಹೋದಳು. ನನಗೇನೂ ಅರ್ಥವಾಗಲಿಲ್ಲ. ಚಿಕ್ಕಮ್ಮ ಅಡಿಗೆಯ ಮನೆಯತ್ತ ಹೋಗುತ್ತಿದ್ದಾಗ ನಾನು ಹಿಂಬಾಲಿಸಿ,

"ಚಿಕ್ಕಮ್ಮ ಭಾನು ಏಕೆ ಹಾಗಿದ್ದಾಳೆ?"– ಎಂದು ಕೇಳಿದೆ.

ಚಿಕ್ಕಮ್ಮ ಅಡಿಗೆಯ ಮನೆಯಲ್ಲಿ ಮಣೆ ಹಾಕಿ, "ಕುಳಿತುಕೋ" ಎಂದಳು. ತಾನು ಮೊರದಲ್ಲಿ ಅಕ್ಕಿ ಹಾಕಿಕೊಂಡು ಬಂದು ಕುಳಿತಳು.

"ನಮ್ಮ ಯೋಗ್ಯತೆ, ಪರಿಸ್ಥಿತಿಗಳನ್ನು ಅರ್ಥಮಾಡಿಕೊಳ್ಳದಿದ್ದರೆ ಎಷ್ಟು ಓದಿ ಏನು ಲಾಭ ಕೇಶು? ಮುಂದೆ ಓದುತ್ತೇನೆ ಅಂದಳು. ಬೇಡ ಎಂದುದಕ್ಕೆ, ಬೆಳಗಿನಿಂದಲೂ ಹಾಗೆ ಮೂತಿ ಮುಂದೆ ಮಾಡಿಕೊಂಡಿದಾಳೆ. ಉಪವಾಸ ಸತ್ಯಾಗ್ರಹ ಹೂಡಿದ್ದಾಳೆ."

ಚಿಕ್ಕಮ್ಮ ಮಾತನ್ನು ಇನ್ನೂ ಮುಂದುವರಿಸುತ್ತಿದ್ದಳು. ನಾನು ಮಧ್ಯದಲ್ಲಿಯೇ ತಡೆದು,

"ಹಾಗದರೆ, ಭಾನು ಕಾಲೇಜಿಗೆ ಸೇರೊಲ್ವೆ ಚಿಕ್ಕಮ್ಮ?" – ಎಂದು ಕೇಳಿದೆ.

"ನೀನೂ ಚೆನ್ನಾಗಿ ಹೇಳ್ತಿ, ಕಣೋ! ಇರುವೆಯ ಗೂಡಿನಂತೆ ತುಂಬಿದ ಸಂಸಾರ. ಸಾಲದ್ದಕ್ಕೆ ನಮಗೆ ಹೆಣ್ಣುಮಕ್ಕಳೇ ಜಾಸ್ತಿ. ಮದುವೆ, ಪ್ರಸ್ತ, ಹೆರಿಗೆ ನಡೆಯುತ್ತಿರಬೇಕು, ಹುಟ್ಟುವ ಮಕ್ಕಳು, ಹೀಗೆ ದಿನದಿನಕ್ಕೂ ಖರ್ಚು ಒಂದರ ಹಿಂದೊಂದು ಸಿದ್ಧವಾಗುತ್ತಿದ್ದರೆ ಎಲ್ಲಿಂದ

ತರುವುದು? ಹೋಗಲಿ ಎಂದರೆ ನಾವು ಐಶ್ವರ್ಯವಂತರೆ? ಇಲ್ಲ ನೂರಾರು ಸಾವಿರಾರು ಬಂದು ಬೀಳುತ್ತಿದೆಯೆ? ಏನೋ ಇರೋ ಊರಿನಲ್ಲಿಯೇ ಸ್ಕೂಲಿದೆ ಎಂದು ಓದಿಸಿದ್ದಾಯ್ತು. ಅಲ್ಲದೆ ಹೆಣ್ಣುಮಕ್ಕಳನ್ನು ಬೇರೆ ಊರಿಗೆ ಕಳಿಸಿ ಓದಿಸಬೇಕೆಂದರೆ ಬಾಯಿ ಮಾತಾಯ್ತೆ? ನಮಗೆ ಶಕ್ತಿ ಬೇಡವೇನೋ? ಅಲ್ಲಾ, ಅವಳಿಗೆಲ್ಲಾ ಗೊತ್ತಾಗೊಲ್ವೆ?''

ದೊಡ್ಡದೊಂದು ಭಾಷಣ ಮಾಡಿ ಅರ್ಧ ವಿರಾಮ ಹಾಕಿದಳು ಚಿಕ್ಕಮ್ಮ. ನಾನು ಏನೂ ತಿಳಿಯದವನಂತೆ ಕಣ್ಣು ಬಾಯಿ ಬಿಟ್ಟುಕೊಂಡು ಕೇಳುತ್ತಿದ್ದೆ. ಮತ್ತೆ ಪ್ರಾರಂಭಿಸಿದಳು ಚಿಕ್ಕಮ್ಮ.

''ಅವಳಿಗೆ ಸರಸ್ವತಿಯ ಕಟಾಕ್ಷವಿದೆ ನಿಜ. ಓದಿಸಿದರೆ ಅಭಿವೃದ್ಧಿಗೆ ಬರುತ್ತಾಳೆ. ಅದು ನಿಜವೆ! ಆದರೆ ನಮಗೆ ಯೋಗ್ಯತೆ ಬೇಕಲ್ಲ? ಅವಳ ಆಸೆ ಎಲ್ಲಾ ತೀರುವಂತಹ ಅದೃಷ್ಟವೇ ಇದ್ದಿದ್ದರೆ ನಮ್ಮ ಹೊಟ್ಟೆಯಲ್ಲಿ ಹುಟ್ಟುತ್ತಲೇ ಇರಲಿಲ್ಲ.''

ಮಾತನಾಡುತ್ತಿರುವಂತೆ ಚಿಕ್ಕಮ್ಮನ ಕಂಠದ ಸೆರೆಯುಬ್ಬಿ ಬಂದು ಮಾತು ಗದ್ಗದವಾಯ್ತು, ಸೆರಗಿನಿಂದ ಕಣ್ಣೊರೆಸಿಕೊಂಡಳು; ಅದನ್ನು ನೋಡುತ್ತಿರುವಂತೆಯೇ ನನ್ನ ಮನಸ್ಸು ವಿಕಟವಾಯ್ತು ನಿಜ. ಚಿಕ್ಕಮ್ಮನಿಗೇನೋ ಮಗಳ ಮೇಲಿನ ಮಮತೆ ಮೇರೆಮೀರಿದ್ದು. ಅವಳ ಬುದ್ಧಿವಂತಿಕೆಯ ಮೇಲೆ ಸಂಪೂರ್ಣ ವಿಶ್ವಾಸವಿದೆ. ಆದರೆ ಅಸಹಾಯಕಳು. ಏನೂ ಮಾಡುವಂತಹ ಸ್ಥಿತಿಯಲ್ಲಿಲ್ಲ. ಆದರೆ ಭಾನುಮತಿಯ ಆಸೆಯನ್ನು ಹಗುರವಾಗಿ ಅಲಕ್ಷಿಸಿದರೆ, ಅವಳ ಮನೋಸ್ಥಿತಿ ಏನಾಗುತ್ತದೆ?

ಭಾನು.... ಭಾನುಮತಿ ನಮ್ಮ ದೊಡ್ಡಜ್ಜಿಯ ಮೊಮ್ಮಗಳು. ಅಂದರೆ ನಮ್ಮ ತಂದೆಯ ದೊಡ್ಡಮ್ಮನ ಮಗಳು. ಕಳೆದ ವರ್ಷದವರೆಗೂ, ನಮಗೆ ಬಂಧುತ್ವದ ಪರಿಚಯ ವಿನಹ ಮತ್ತೇನೂ ಇಲ್ಲ. ನಾನು ಮೊದಲ ವರ್ಷ, ಎಸ್.ಎಸ್.ಎಲ್.ಸಿ. ಅನುತ್ತೀರ್ಣನಾದಾಗ ನಮ್ಮ ಸೋದರತ್ತೆಯ ಊರಿನಲ್ಲಿ ವಿದ್ಯಾಭ್ಯಾಸವನ್ನು ನಿಲ್ಲಿಸಿದೆ.

ನಮ್ಮ ತಂದೆ ಇಲ್ಲಿಗೆ ಕರೆತಂದು ಹೈಸ್ಕೂಲಿಗೆ ಸೇರಿಸಿ, ಚಿಕ್ಕಮ್ಮನ ಮನೆಯಲ್ಲಿ ಬಿಟ್ಟರು. ಆಗ ಭಾನು ಎಸ್.ಎಸ್.ಎಲ್.ಸಿಗೆ ಬಂದಿದ್ದಳು. ನಾವಿಬ್ಬರೂ ಒಂದೇ ತರಗತಿಯವರಾದ್ದರಿಂದ ಇಬ್ಬರಿಗೂ ಆನಂದವಾಗಿತ್ತು. ನಾನು ಬಂದ ಮೊದಲ ದಿನ ಅತ್ಯಂತ ಸಂಕೋಚದಿಂದ ಹೊರಗಿನ ಕೋಣೆಯಲ್ಲಿಯೇ ಕುಳಿತಿದ್ದೆ. ಭಾನು ತಾನೇ ಬಂದು ಸಲಿಗೆಯಿಂದ ಮಾತನಾಡಿಸಿದಳು.

''ಅಣ್ಣಾ! ಅಮ್ಮ ಊಟಕ್ಕೆ ಕರೀತಿದಾಳೆ'' – ಎಂದಳು.

ನನಗೇನೋ ಒಂದು ಬಗೆಯ ಪುಳಕವಾದಂತಾಯ್ತು. ಹೃದಯಕ್ಕೆ ಅಮೃತ ಸೇಚನೆ ಆದಂತಾಯ್ತು. ಆ 'ಅಣ್ಣ' ಎನ್ನುವ ಅಪ್ಯಾಯತೆಯ ಕರೆಯನ್ನು ನಾನು ಕೇಳಿಯೇ ಇರಲಿಲ್ಲ. ನನ್ನ ಸ್ವಂತ ತಂಗಿಯೂ ಕೂಡ 'ಅಣ್ಣ' ಎನ್ನದೆ, 'ಕೇಶೀ', 'ಕೇಚಾ' ಎಂದೇ ಕರೆಯುತ್ತಿದ್ದಳು. ಚಿಕ್ಕಂದಿನಲ್ಲಿ ಹಾಗೆ ಕರೆಯಬಾರದೆಂದು ಅವಳಿಗೆ ಯಾರೂ ಹೇಳಿರಲಿಲ್ಲ. ದೊಡ್ಡವಳಾದ ನಂತರ ಎಷ್ಟು ಹೇಳಿದರೂ, 'ಗೋರ್ಕಲ್ಲ ಮೇಲೆ ಮಳೆ ಸುರಿದಂತೆ', ಆಯ್ತು. ಅದರಿಂದಲೇ ಹೇಳುವುದು, 'ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ?' ಎಂದು, ಬುದ್ಧಿ ಹೇಳಿದರೆ,

"ಏ, ನನ್ನಿಷ್ಟ ಬಂದಂತೆ ಕರೀತೀನಿ, ನೀನ್ಯಾರೋ ನನಗೆ ಹೇಳೋಕೆ? ನಿನ್ನಿಷ್ಟವಿದ್ದರೆ ಮಾತಾಡು ಇಲ್ಲವಾದರೆ ಬಿಡು" – ಎಂದಿದ್ದಳು. ನಮ್ಮಮ್ಮ ಅವಳನ್ನು ಅತಿಯಾಗಿ ಮುದ್ದು ಮಾಡಿ, ಹೆಣ್ಣುಮಗಳೊಂತ ತಲೆಯ ಮೇಲೆ ಕೂಡಿಸಿಕೊಂಡಿದ್ದರ ಫಲ!

ಇಂದು ಭಾನು ಬಾಯ್ತುಂಬಾ 'ಅಣ್ಣ' – ಎಂದು ಕರೆದಳು. ಅಕ್ಕರೆಯ ತಂಗಿ! ಅವಳ ಮುಖವನ್ನೇ ನೋಡುತ್ತಾ ಇದ್ದುಬಿಟ್ಟೆ, ಭಾನುಮತಿ ನಗುತ್ತಾ,

"ಹಸಿವಾಗೊಲ್ವಣ್ಣಾ?" – ಎಂದು ಕೇಳಿದಳು.

ಮೌನವಾಗಿದ್ದೆ. ಅಂದೇ ಭಾನುಮತಿ ನನ್ನ ಮನಸ್ಸಿನಲ್ಲಿ ಒಂದು ಸ್ಥಿರವಾದ ಮತ್ತು ಉನ್ನತವಾದ, ಸ್ಥಾನವನ್ನಾಕ್ರಮಿಸಿಕೊಂಡಳು. ಅಂದಿನಿಂದಲೂ ಪ್ರಾಣಪ್ರದವಾಗಿ ಪ್ರೀತಿಸಿದ ಅಕ್ಕರೆಯ ತಂಗಿ ಭಾನು!

ನನಗಿಂತಲೂ ಎರಡು ವರ್ಷ ಮಾತ್ರ ಕಿರಿಯಳು ಭಾನು. ಬೆಳ್ಳಗೆ ಕರ್ಪೂರದ ಗೊಂಬೆಯಂಥ ರೂಪದವಳು ಭಾನು. ರೂಪವನ್ನು ಮೀರಿಸಿದಂಥ ಬುದ್ಧಿ. ನಾನು ಎರಡನೆಯ ವರ್ಷ ಓದುತ್ತಿದ್ದರೂ ಸಹ ಎಷ್ಟೋ ವಿಷಯಗಳನ್ನು ಅವಳೇ ಹೇಳಿಕೊಡುತ್ತಿದ್ದಳು. ಅವಳಿಂದ ಕಲಿಯುವುದು ನನಗೆ ಹೆಮ್ಮೆಯಾಗಿತ್ತು. ಭಾನುಮತಿಗೆ ಸಾಧಾರಣವಾಗಿ ಲೆಖ್ಖ, ವಿಜ್ಞಾನಗಳಲ್ಲಿ ತುಂಬಾ ಅಂಕಗಳು ಬರುತ್ತಿದ್ದುವು. ಇಬ್ಬರು ಕಲೆತು ಶಾಲೆಗೆ ಹೊಗುತ್ತಿದ್ದೆವು. ಸಿನಿಮಾಕ್ಕೂ ಒಟ್ಟಾಗೇ ಹೋಗುತ್ತಿದ್ದೆವು. ಕಥೆ, ಕಾದಂಬರಿಗಳನ್ನೋದುವಾಗ ಒಬ್ಬರು ಓದುವುದು, ಮತ್ತೊಬ್ಬರು ಕೇಳುವುದು, ಗೆಳೆಯರ ಮನೆಗೂ ಅಷ್ಟೇ! ಏನೇ ಮಾಡಲೀ ಒಟ್ಟಿಗೇ ಮಾಡುತ್ತಿದ್ದೆವು. ಭಾನುವಿನ ಬುದ್ಧಿಶಕ್ತಿಯನ್ನು ಹರಿತವಾದ ಕತ್ತಿಗೆ ಹೋಲಿಸಿದರೆ ಸರಿಹೋಗಬಹುದು.

ಭಾನುಮತಿ ಸ್ವಾಭಿಮಾನದ ಖಣಿ. ಒಮ್ಮೊಮ್ಮೆ ತಾಯಿ ಏನಾದರೂ ಅಂದರೆ ಒಂದಕ್ಕೆರಡು ತಿರುಗಿಸುತ್ತಿದ್ದಳು.

"ಅಮ್ಮ ಏನಾದರೂ ಅಂದರೆ ಖಡಾಖಂಡಿತವಾಗಿ ಉತ್ತರಿಸುತ್ತೀಯಾ?"

"ಹುಂ. ವಿನಾಕಾರಣ ಅಂದರೆ ಏಕೆ ಸುಮ್ಮನಿರಬೇಕು?" ಮರುಸವಾಲು ಹಾಕುತ್ತಿದ್ದಳು.

ಮನುಷ್ಯನಾದವನು ತನ್ನ ವ್ಯಕ್ತಿತ್ವವನ್ನು ಕಾಪಾಡಿಕೊಳ್ಳುವುದಕ್ಕಿಂತ ಮಿಗಿಲಾದುದು ಮತ್ಯಾವುದೂ ಇಲ್ಲವೆನ್ನುವುದು ಅವಳ ಮತ. ಅದೇ ಅವಳ ವಾದದ ಸರಣಿ.

"ಭಾನು, ನೀನು ಆವೇಶದಿಂದ ಮಾತನಾಡುತ್ತೀ! ವ್ಯಕ್ತಿತ್ವಕ್ಕೆ ಘಾಸಿಯಾಗದಂತೆ ಕಾಪಾಡಿಕೊಳ್ಳುವುದು ಎಲ್ಲರಿಗೂ ಸದಾ ಸಾಧ್ಯವಾಗುತ್ತದೆಯೆ? ಅದಕ್ಕೆ ಪರಿಸ್ಥಿತಿ ಅನುಕೂಲಿಸುತ್ತದೆಯೆ?"

"ನೀನು ಏನಾದರೂ ಹೇಳಣ್ಣ! ಮನುಷ್ಯ ನೀಚನಾಗಿ, ಅಭಿಮಾನವಿಲ್ಲದೆ ಬದುಕಿದರೇನು, ಸತ್ತರೇನು?"

ಹೌದು, ತನಗೆ ಯಾವ ಬೆಲೆಯೂ ಇಲ್ಲವಾದಾಗ ಮನುಷ್ಯ ಸತ್ತರೇನು ನಷ್ಟ! ಆದರೆ ಅಂತಹ ದೌರ್ಭಾಗ್ಯವಂತರೆಷ್ಟೋ ಮಂದಿ ಬದುಕುತ್ತಲೇ ಇರುತ್ತಾರೆ. ಏಕೋ ನನಗೂ ತಿಳಿಯದು, ಭಾನುವಿಗೂ ತಿಳಿಯದು.

ಭಾನುವಿನ ಸಹವಾಸ ನನಗೆ ಬಹಳ ಅಪರೂಪವಾಗಿ ತೋರುತ್ತಿತ್ತು. ಅವಳ ಸಹಚರ್ಯದಿಂದಾಗಿ ನಾನೂ 'ಸೆನ್ಸಿಟಿವ್' ಆಗುತ್ತಿದ್ದೆನೇನೋ– ಪಬ್ಲಿಕ್ ಪರೀಕ್ಷೆಯ ದಿನಗಳಲ್ಲಿ ಸ್ವಲ್ಪ ಅವಕಾಶ ದೊರೆತರೂ ಭಾವೀ ಬಾಳಿನ ಬಗೆಗೆ ಬಂಗಾರದ ಕನಸು ಕಾಣುವುದೊಂದು ಹವ್ಯಾಸವಾಯ್ತು.

ಯಾವ ಊರಿನಲ್ಲಿ ಕಾಲೇಜು ಚೆನ್ನಾಗಿರುತ್ತದೆ? ಇಬ್ಬರೂ ಒಂದೇ ಗ್ರೂಪನ್ನು ಆರಿಸಿಕೊಳ್ಳಬೇಕು. ಎಲ್ಲಿಯವರೆಗೆ ಓದಿದರೂ ಒಂದಾಗಿಯೇ ಓದಬೇಕು. ಡಾಕ್ಟರಾಗುವುದೆ! ಲಾಯರಾಗುವುದೆ! ಡಾಕ್ಟರ್ ಕೇಶವರಾವ್, ಡಾ। ಭಾನುಮತಿದೇವಿ!

ಹೀಗೆ ಏನೇನೊ ಕನಸು ಕಾಣುತ್ತಿದ್ದ ಆ ದಿನಗಳಲ್ಲಿ, ಈ ಅನುಮಾನದ ಮಿಂಚೂ ಹೊಳೆದಿರಲಿಲ್ಲ! ಮಾನವ ಬಯಸುವುದೇ ಒಂದಾದರೆ, ಭಗವಂತ ಪ್ರಸಾದಿಸುವುದು ಎಂದೂ ವ್ಯತಿರಿಕ್ತವಾದುದೇ! ನಾಳೆ ನಾವು ಮಾಡುವ ಕೆಲಸವನ್ನು ಯೋಚಿಸುತ್ತೇವೆ. ಆದರೆ ಮಾಡಿ ಮುಗಿಸುವುದು ಖಚಿತವಿಲ್ಲ.

ಭಾನುಮತಿ ವಿದ್ಯಾಭ್ಯಾಸವನ್ನು ನಿಲ್ಲಿಸುತ್ತಾಳೆಂದು ತಿಳಿದಾಗ ನನಗೆ ಬಹಳ ದುಃಖವಾಯ್ತು. ಅವಳು ವಿದ್ಯಾಭ್ಯಾಸವನ್ನು ನಿಲ್ಲಿಸಿದರೆ ನನ್ನ ಅವಳ ಗೆಳೆತನ ನಿಂತಂತೆಯೇ. ಈ ವಿಷಯವನ್ನು ಹೇಗೆ ಚರ್ಚಿಸುವುದು? ಅವಳ ಮುಖವನ್ನು ನೋಡಲೇ ನನಗೆ ಸಂಕೋಚವಾಗುತ್ತಿತ್ತು. ಆದರೂ ಅವಳನ್ನು ನಾನೇ ಸಮಾಧಾನಪಡಿಸಬೇಕು. ಧೈರ್ಯ ಕೊಡಬೇಕು. ಚಿಕ್ಕಮ್ಮ ಏನೋ ಕೆಲಸದಲ್ಲಿದ್ದಾಗ ಮೆಲ್ಲನೆದ್ದು ಹೊರಬಂದೆ.

ಭಾನುಮತಿ ಕೋಣೆಯಲ್ಲಿ ಉದಾಸೀನತೆಯಿಂದ ಕುಳಿತಿದ್ದಳು. ಏನೋ ಹೇಳ ಬೇಕೆಂದುಕೊಂಡೆ, ಅಷ್ಟರಲ್ಲಿ ಅವಳೇ ಬಂದು ನನ್ನ ಕೈ ಹಿಡಿದುಕೊಂಡು, ನನ್ನ ಮುಖವನ್ನೇ ನೋಡುತ್ತಾ,

"ಅಣ್ಣಯ್ಯಾ! ನಾವು ನಿರ್ಮಿಸಿದ ಚಿನ್ನದ ಗೋಪುರ ಗಾಳಿಗೋಪುರವಾಗಿ ಹೋಯ್ತು. ನನ್ನ – ನಿನ್ನ ದಾರಿಗಳು ಕವಲುದಾರಿಯಾದುವು. ನಿನ್ನ ದಾರಿಯಲ್ಲಿ ನೀನು ಮುನ್ನಡೆಯುವಾಗ ನನ್ನನ್ನು ಮರೆಯುವುದಿಲ್ಲ ತಾನೇ?" – ಎಂದಳು.

"ಭಾನೂ!" – ಎಂದಾಗ ನನ್ನಲ್ಲುಂಟಾದ ಆಂದೋಳನ ಅವ್ಯಕ್ತ.

"ಅಣ್ಣಾ, ನೀನು ಅದೃಷ್ಟವಂತ. ನೀನು ತುಂಬಾ ಡಿಗ್ರಿಗಳನ್ನು ತೆಗೆದುಕೊಳ್ಳಬೇಕು, ತುಂಬಾ ಅಭಿವೃದ್ಧಿಗೆ ಬರಬೇಕು ಅಲ್ಲವೆ?"

ಅವಳು ಮಾತನಾಡುತ್ತಿದ್ದಾಗ ನಾನು ಅವಳ ಮೇಜಿಗೊರಗಿಕೊಂಡು ನಿಂತು,

"ಭಾನೂ, ನಾವಿಬ್ಬರೂ ಕೂಡಿಯೇ ಓದಬೇಕೆಂದು ಹಂಬಲಿಸಿದೆವು. ಹಂಬಲ ಹಂಬಲವಾಗೇ ಉಳಿಯುತ್ತದೆ. ನೀನು ಓದುವುದನ್ನು ನಿಲ್ಲಿಸಿದರೆ, ನಾನು ಒಂಟಿಯಾ ಗುತ್ತೇನೆ... ನಾನು ನಿಲ್ಲಿಸಿದರೆ ಅನ್ನಿಸುತ್ತಿದೆ" ಎಂದೆ.

ಅಪಾರ ಬುದ್ಧಿಬಲವಿರುವ ಭಾನುವೇ ವಿದ್ಯಾಭ್ಯಾಸವನ್ನು ನಿಲ್ಲಿಸಲಿರುವಾಗ, ನಾನು ಓದಿ ಉದ್ಧಾರವಾಗುವುದೇನಿದೆ?

ನನ್ನ ಮಾತು ಕೇಳಿ ಭಾನು ನಕ್ಕಳು.

"ನನ್ನ ಮೇಲೆ ನಿನಗೆಷ್ಟು ಅಭಿಮಾನವಿದೇಣ್ಣ? ನೀನು ಓದಿ ಅಭಿವೃದ್ಧಿಗೆ ಬಂದರೆ ನನಗೆ ಹೆಮ್ಮೆಯಲ್ಲವೆ? ನೀನು ಓದದಿದ್ದರೆ ನಾನು ಸುಮ್ಮನಿರುತ್ತೇನೆಯೆ? ಯಾವ ಕಾರ್ಪಣ್ಯಗಳನ್ನು ಮನಸ್ಸಿಗೆ ತೆಗೆದುಕೊಳ್ಳದೆ ನೀನು ಓದು. ನನಗೆ ಆಗಾಗ ಪತ್ರ ಬರೆಯುತ್ತಿರು."

ಭಾನು ಹಿರಿಯಳಂತೆ ಬುದ್ಧಿ ಹೇಳುತ್ತಿದ್ದಾಗ, ಏನೋ ಯೋಚಿಸುತ್ತಾ ನಿಂತಿದ್ದೆ.

ಭಾನುವಿನ ಇಷ್ಟವನ್ನು ಪೂರೈಯಿಸುವ ಶಕ್ತಿ ಚಿಕ್ಕಮ್ಮನಿಗಿಲ್ಲ. ಆ ವಿಷಯ ನೂರಕ್ಕೆ ನೂರು ಪಾಲೂ ನಿಜ. ಆದರೆ ಭಾನುಮತಿ ಒಬ್ಬಳೇ ಅಲ್ಲ, ಇನ್ನೂ ಹತ್ತು ಜನಗಳನ್ನಾದರೂ ಓದಿಸುವ ಶಕ್ತಿ ನಮ್ಮ ತಂದೆಗಿದೆ, ಅದೇ ಚಿಕ್ಕಪ್ಪನಿಗಿಲ್ಲ. ನನಗೆ ನಮ್ಮ ತಾತನವರಿಂದ ಸಂಕ್ರಮಿಸಿಬರುವ ಆಸ್ತಿಯ ಬಲವಿದೆ. ಸಧ್ಯದಲ್ಲಿ ನಾನು ಅಸಹಾಯಕ. ಏನೂ ಮಾಡಲಾರದ ಪರಿಸ್ಥಿತಿ. ತಂದೆಯವರಿಗೆ ಹೇಳಲಾರೆ. ಏಕೆಂದರೆ ಹೆಣ್ಣುಮಕ್ಕಳು ಉನ್ನತ ವಿದ್ಯಾಭ್ಯಾಸಮಾಡುವುದು ಅವರಿಗೆ ಇಷ್ಟವಿಲ್ಲ. ಅದಕ್ಕೇ ನನ್ನ ತಂಗಿ ಐದನೆಯ ತರಗತಿ ಮುಗಿಸುವ ಮೊದಲೇ ಅತ್ತೆಯ ಮನೆಗೆ ಹೊರಟುಹೋದಳು. ಅದರಿಂದಾಗಿ ಒಂದು ಎಳೆಯ ಹೃದಯ ಗೋಳಿಟ್ಟು ತೊಳಲಿದ್ದು ಅವರಿಗೆ ಅರಿವಾಗಲಿಲ್ಲ. ಇಂದು ಇನ್ನೊಬ್ಬ ತಂಗಿಯ ವಿಷಯವೂ ಹಾಗೇ ಆಗುತ್ತಿರುವಾಗ ಅಸಹಾಯಕನಾಗಿ ಕೊರಗುವುದೊಂದುಳಿದು ಇನ್ನೇನೂ ಮಾಡುವ ಸ್ಥಿತಿಯಲ್ಲಿರಲಿಲ್ಲ.

ಭಾನುವಿನಂತಹ ರತ್ನಕ್ಕೇ ಮಣ್ಣು ಮುಸುಕುತ್ತಿರುವಾಗ ಅದು ರಾಷ್ಟ್ರೀಯ ಲುಕ್ಸಾನಲ್ಲವೆ? ಹುಂ, ನಷ್ಟವಾಗುತ್ತಿರುವ ರತ್ನಗಳನ್ನೇ ನೋಡಿಕೊಂಡು ಸುಮ್ಮನಿರುವಂತಹ ದೇಶದಲ್ಲಿ ನಮ್ಮ ಕೂಗು ಕೇವಲ ಅರಣ್ಯರೋಧನವೇ. ನರಿಯ ಕೂಗು ಗಗನವನ್ನು ಮುಟ್ಟೀತೇ! ನಮಗುಳಿಯುವುದು ಮರೆಯದ ವ್ಯಥೆ ಮಾತ್ರ!

"ಏನೋ ಅಷ್ಟೊಂದು ದೀರ್ಘಾಲೋಚನೆ?" – ಕೇಳಿದಳು ಭಾನು.

"ಭಾನೂ! ಆಸ್ತಿಪಾಸ್ತಿ ವ್ಯವಹಾರ ವಹಿವಾಟುಗಳು ನನ್ನ ಕೈಲಿದ್ದಿದ್ದರೆ ಇಂದು ನಾವು ಹೀಗೆ ವ್ಯಥೆಪಡುವ ಅಗತ್ಯವೇ ಇರಲಿಲ್ಲ. ಆದರೆ.... ಅಪ್ಪನ ವಿಷಯ ನಿನಗೂ ಗೊತ್ತಲ್ಲ...! ಅವರಿಗೆ ಹೇಳಿ ಏನೂ ಉಪಯೋಗವಿಲ್ಲ. ಗೋಡೆಗೆ ತಲೆ ಚಚ್ಚಿಕೊಂಡ ಹಾಗೆ."

ಆಶ್ಚರ್ಯದಿಂದ ರೆಪ್ಪೆಯಾಡಿಸದೇ ನೋಡುತ್ತಿದ್ದಳು ಭಾನುಮತಿ.

"ಈ ತಂಗಿಯನ್ನು ಇಷ್ಟೊಂದು ಪ್ರೀತಿಸುವ ಅಣ್ಣನಿದ್ದಾನೆಂದು ನನಗೆ ಇಂದಿನವರೆಗೂ ಗೊತ್ತೇ ಇರಲಿಲ್ಲ! ನಿನ್ನಲ್ಲಿನ ಈ ಭಾವ, ಈ ವಾತ್ಸಲ್ಯ ಎಂದೆಂದಿಗೂ – ನಾವು ದೊಡ್ಡವರಾಗಿ – ಮುದುಕರಾಗಿ ಸಾಯುವವರೆಗೂ ಒಂದೇ ರೀತಿ ಇರಬೇಕು. ಅದಕ್ಕೆ ಮಿಗಿಲಾದುದು ಏನೂ ಇಲ್ಲ, ಯಾವುದೂ ಇಲ್ಲ. ನೀನು..."

ಮಾತು ಮುಗಿಯುವಷ್ಟರಲ್ಲಿ ಕಂಠದ ಸೆರೆಯುಬ್ಬಿತು. ಮಾತು ಮುಗಿಯದೇ ನಿಂತಿತು.

"ಭಾನೂ! ನನ್ನ ಹೃದಯದಲ್ಲಿ ನಿನಗಾಗೇ ಇರುವ ವಾತ್ಸಲ್ಯದ ಕಾರಂಜಿ, ನನ್ನ ಸ್ವಂತ ತಂಗಿ ಶಾರದಳಿಗೂ ಇಲ್ಲಮ್ಮ. ಶಾರದ ನಾನು ಒಬ್ಬ ತಾಯಿಯ ಮಕ್ಕಳು ಅಷ್ಟೇ! ಅದನ್ನು

ಹಗುರವಾಗೆಣಿಸಲಾಗದು. ಆದರೆ ನನಗೂ ನಿನಗೂ ಇರುವುದು ಬಲವಾದ ಮಾನಸಿಕ ಮಮತಾನುಬಂಧ, ಅದಕ್ಕೆ ಸಾಟಿ ಇನ್ನಾವುದೂ ಇಲ್ಲ. ಎಂದೆಂದಿಗೂ, ಯಾವಾಗಲೂ, ನಿನ್ನ ಶ್ರೇಯಸ್ಸನ್ನೇ ಕೋರುವ ಅಣ್ಣನೊಬ್ಬನಿದ್ದಾನೆನ್ನುವುದನ್ನು ನೆನಪಿರಿಸಿಕೊಟ್ಟು ನಿಶ್ಚಿಂತಳಾಗಿರು. ನಿನಗೇನುಬೇಕಾದರೂ ಬರಿ. ನೀನು ಈ ದಿನ ಊಟ ಮಾಡಿಲ್ಲವೆಂದು ಚಿಕ್ಕಮ್ಮ ಎಷ್ಟು ನೊಂದುಕೊಂಡಿದ್ದಾಳೋ ಗೊತ್ತೇಮ್ಮ? ನೋಡಮ್ಮ ಭಾನು ನಾವು ಪರಿಸರಗಳ, ಪರಿಸ್ಥಿತಿಗಳ ಕೈಗೊಂಬೆಗಳಮ್ಮ. ಎಲ್ಲವೂ ನಿನಗೇ ಗೊತ್ತು.''

ಎಂದು ಏನೇನೋ ಹೇಳುತ್ತ ಅವಳನ್ನು ಸಮಾಧಾನಪಡಿಸಲೆತ್ನಿಸಿದಂತೆ ನನಗೇ ಏನೋ ಒಂದು ಬಗೆಯ ಸಂಕಟವಾಗುತ್ತಿತ್ತು. ನಾಳೆ ನನ್ನದಾಗಿ ನನಗೆ ಬರಲಿರುವ ಸಂಪತ್ತಿಗೂ ಹಣಕ್ಕೂ ಕುರುಡು ಕಾಸಿನ ಬೆಲೆಯೂ ಇಲ್ಲ, ಸಮಯಕ್ಕೊದಗದ ಸಂಪತ್ತು ಏಕೆ? ಏನು ತೃಪ್ತಿತರುತ್ತದೆ?

ಅಂದು ರಾತ್ರಿ ಭಾನು ತಾನೇ ಎಲ್ಲರಿಗೂ ಊಟಕ್ಕೆ ಬಡಿಸಿದಳು, ಅವಳಿಗೆ ಆವೇಶದೊಂದಿಗೆ ವಿವೇಕವೂ ಒಂದುಗೂಡಿತ್ತು. ಭಾನು ತಲೆತಗ್ಗಿಸಿಕೊಂಡು ಊಟಮಾಡು ತ್ತಿದ್ದುದನ್ನು ನೋಡಿದಾಗ ನನಗರಿವಿಲ್ಲದೆಯೇ ಕಣ್ಣು ತೇವವಾಯ್ತು.

* * *

ಭಾನುವಿನಿಂದ ದೂರವಾಗಬೇಕೆಂದರೇ ಆ ಯೋಚನೆ ಬಂದರೇ ಮನಸ್ಸು ಭಾರವಾಗುತ್ತಿತ್ತು. ಭವಿಷ್ಯದತ್ತ ಸುಂದರ ಕನಸು ಕಂಡು, ಗಾಳಿಗೋಪುರಗಳನ್ನು ಕಟ್ಟಿಕೊಂಡಂತಹ ಭಾನು ಈ ಆಘಾತವನ್ನು ಹೇಗೆ ತಡೆಯುತ್ತಾಳೆ? ಕನಸು ಕರಗಿಹೋಗಿ ಊಹೆ ಗಾಳಿಯಲ್ಲಿ ತೂರಿಹೋದರೂ ಸಹಿಸುವ ಶಕ್ತಿ ಅವಳ ಹೃದಯಕ್ಕಿದೆಯೆ?

ಯಾವ ಕಾಲೇಜಿಗೆ ಸೇರುವುದು? ಅಭ್ಯಾಸಕ್ಕೆ ಯಾವ ವಿಷಯಗಳನ್ನಾರಿಸಿಕೊಳ್ಳುವುದು? ಎಲ್ಲಿ ವಸತಿ ಏರ್ಪಡಿಸಿಕೊಳ್ಳಬೇಕು? – ಇವೆಲ್ಲಕ್ಕೂ ಭಾನುವಿನ ಸಲಹೆಯನ್ನೇ ತೆಗೆದುಕೊಂಡೆ. ಕಾಲೇಜಿನ ಆವರಣದಲ್ಲಿ ಅಡಿ ಇರಿಸಿದ ದಿನದಿಂದ ಯಾವ ಕ್ಷಣದಲ್ಲಿ ಏನು ನಡೆಯಿತು. ನಾಟಿಯ ಹುಡುಗರು ಮಾಡುವ ಗಲಭೆ, ಚೇಷ್ಟೆ, ಎಲ್ಲವನ್ನು ಚಾಚೂ ತಪ್ಪದಂತೆ, ಕಾಲೇಜುರಂಗದ ನೈಜ ಚಿತ್ರಣವನ್ನೇ ಕಾಗದದಲ್ಲಿ ಬರೆಯುತ್ತಿದ್ದೆ. ಏನು ಕಂಡರೂ ಅದನ್ನು ಭಾನುವಿಗೆ ಬರೆಯುವವರೆಗೂ ಮನಸ್ಸಿಗೆ ತೃಪ್ತಿಯಾಗುತ್ತಿರಲಿಲ್ಲ. ಕಾದಂಬರಿಗಳೆಂದರೆ ಭಾನುವಿಗೆ ತುಂಬಾ ಅಕ್ಕರೆ. ಶತ ಪ್ರಯತ್ನ ಮಾಡಿ ಖ್ಯಾತ ಕಾದಂಬರಿಕಾರರ ಕೃತಿಗಳನ್ನು ಕೊಂಡು ಕಳಿಸಿದರೆ ಭಾನುವಿಗೆ ತುಂಬಾ ಸಂತೋಷವಾಗುತ್ತಿತ್ತು. ಆನಂದ ಅವಧಿಯನ್ನು ಅಧಿಗಮಿಸುತ್ತಿತ್ತು. ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ವಿಷಯಗಳನ್ನು ಬರೆದಾಗ ಅವಳೊಂದಿಗೆ ಕಲಿತೇ ಅಭ್ಯಾಸ ಮಾಡಿದಷ್ಟು ತೃಪ್ತಿ ಸಿಗುತ್ತಿತ್ತು. ಅದೊಂದು ಬಗೆಯ ಅನಿರ್ವಚನೀಯ ಅನುಭೂತಿ! ಭಾನುವಿನ ಹೃದಯದಲ್ಲಿನ ನಿರಾಶೆಯ ನಿಶೆಯನ್ನು ಹೋಗಲಾಡಿಸಬೇಕೆಂ ಬುದೇ ನನ್ನ ಗುರಿ! ಆನಂದದಿಂದ, ಕೃತಜ್ಞತಾ ಭಾವದಿಂದ ಅವಳು ಬರೆಯುತ್ತಿದ್ದ ಕಾಗದಗಳನ್ನು ಓದುತ್ತಿದ್ದರೆ ಕಣ್ಣು ಅಶ್ರುಪೂರಿತವಾಗುತ್ತಿತ್ತು. ಭಾನು ನನ್ನೊಂದಿಗೇ ಓದಿ

ಒಂದು ದಿನ ಪದವೀಧರೆಯಾಗಿದ್ದರೂ, ನನಗಾಗ ಇಂತಹ ಅನುಭೂತಿ ಉಂಟಾಗುತ್ತಿರಲಿಲ್ಲವೋ ಏನೋ?

ಕ್ರಮೇಣ ಭಾನುವಿನ ಕಾಗದಗಳಲ್ಲಿ ಚಿಂತೆಯ ಕಪ್ಪು ರೇಖೆಗಳು ಕರಗುತ್ತಿದ್ದುವು. ಹಿಂದಿ ಪರೀಕ್ಷೆಗೆ ಅಭ್ಯಾಸ ಮಾಡುತ್ತಿರುವುದಾಗಿಯೂ ಪುಸ್ತಕ ಭಂಡಾರದಿಂದ ಪುಸ್ತಕಗಳನ್ನು ತಂದು ಓದುತ್ತಿರುವುದಾಗಿಯೂ, ಎಂದಿನಂತೆ ಬಿಡುವಿಲ್ಲದೆ ಕಾರ್ಯಕ್ರಮಗಳನ್ನಿರಿಸಿಕೊಂಡಿರುವುದಾಗಿಯೂ ಅವಳು ಬರೆಯುತ್ತಿದ್ದುದನ್ನು ಓದಿದಾಗ ನನಗೂ ಭಾರವಾಗಿದ್ದ ಹೃದಯ ಹಗುರವಾಗುತ್ತಿತ್ತು.

* * *

ಇಂಟರಿನ ಪರೀಕ್ಷೆ ಮುಗಿಯಿತು. ಮೊದಲಿಗನಾಗಿ ಉತ್ತೀರ್ಣನಾದೆ. ಆ ಸಂತೋಷ ಸಮಯದಲ್ಲಿ ಮತ್ತೊಂದು ಶುಭವಾರ್ತೆಯೂ ಬಂತು. ಭಾನು ತನ್ನ ಲಗ್ನಪತ್ರಿಕೆಯನ್ನು ಕಳಿಸಿ ಒಂದು ಕಾಗದ ಬರೆದಿದ್ದಳು. ನನಗೆ ಆಶ್ಚರ್ಯವಾಗಿತ್ತು. ಭಾನುವಿಗೆ ಇಷ್ಟು 'ಅಕಸ್ಮಿಕ'ವಾಗಿ ಮದುವೆಯೆ! ಎನ್ನಿಸಿತು. ಲಗ್ನಪತ್ರಿಕೆಯಲ್ಲಿ. ಮೊದಲು ನೋಡಿದೆ, ಈ ಸುಗುಣಶ್ರೀ, ವಿನಯಶ್ರೀ, ರೂಪಶ್ರೀ, ಅನುರಾಗಶ್ರೀ ಭಾನುಮತಿಯ ಕೈ ಹಿಡಿದು, ಸಂತಸದ ಸುಗ್ಗಿಯನ್ನು ಕಾಣುವ ಆ ಪುಣ್ಯಪುರುಷನ ಹೆಸರೇನೆಂದು ನೋಡಿದೆ. 'ರಾಜಶೇಖರ' ಎಂದಿತ್ತು. ಆ ಭಾಗ್ಯಶಾಲಿಯ ಹೆಸರೇನೋ ಚೆನ್ನಾಗಿದೆ. ಆದರೆ, ಅವಳಿಗೆ ಮದುವೆ ಎಂದಾಗ ನನಗೇನೋ ಅವ್ಯಕ್ತ ಭಾವಸಂಚಲನೆಯಾಗಿತ್ತು. ಅಲ್ಲಿನವರೆಗೂ ತಂಗಿಯಾಗಿ ಅಕ್ಕರೆಯ ಭಗಿನಿಯಾಗಿದ್ದ ಭಾನು ಇನ್ನು ದೂರವಾಗುತ್ತಾಳೆ.

ಭಾನು ವೈದ್ಯಳಾಗಬೇಕೆಂದು ಕನಸು ಕಂಡಿದ್ದಳು. ಆದರೆ ಅದೃಷ್ಟ ಕೂಡಿಬರಲಿಲ್ಲ. ಕೊನೆಗೆ ವೈದ್ಯನೊಬ್ಬನ ಮಡದಿಯಾದರೂ ಆಗಿದ್ದಿದ್ದರೆ ನನಗೇಕೋ ಈ ಭ್ರಮೆ? ಒಬ್ಬ ವೈದ್ಯ ವರ ಬೇಕೆಂದರೆ ಸಾವಿರಾರು 'ಸುರಿದು ಕೊಳ್ಳಬೇಕು' ಆ ವಿಷಯ ನನಗೂ ತಿಳಿದಿತ್ತು. ಒಬ್ಬ ಡಾಕ್ಟರನ್ನು ಕೊಳ್ಳುವಂತಹ ಶಕ್ತಿ ನಮ್ಮ ಚಿಕ್ಕಪ್ಪನಿಗೆ ಇದ್ದಿದ್ದರೆ, ಭಾನುವನ್ನೇ ವೈದ್ಯಕೀಯಕ್ಕೋದಿಸಿ 'ಡಾಕ್ಟರಮ್ಮ'ನನ್ನಾಗಿ ಮಾಡುತ್ತಿದ್ದರು. ಈಗ ಈ ಖಾಲಿ ಪದವೀಧರನಿಗೇ ಸುಮಾರಾಗಿ ಖರ್ಚು ಮಾಡಿರಬಹುದು.

ಮದುವೆಗೆ ಇನ್ನೂ ನಾಲ್ಕು ದಿನಗಳಿದ್ದುವು. ಎರಡು ದಿನಗಳ ಹಿಂದೆ ತಾನೇ ನಮ್ಮ ತಂದೆ, ನನಗೆ ಹೊಸ ಬಟ್ಟೆಗೆಂದು ಮೂರು 'ಹಸಿರು ನೋಟು'ಗಳನ್ನು ಕೊಟ್ಟಿದ್ದರು. ನಾನು ಪಟ್ಟಣಕ್ಕೆ ಹೋಗಿ ಭಾನುವಿಗೊಂದು ಕೈಗಡಿಯಾರ, ಅವಳ ಗಂಡನಿಗೊಂದು ಉತ್ತಮವಾದ ಪೆನ್ ಕೊಂಡುಕೊಂಡೆ.

ಭಾನುವಿನ ಕೈಗೆ ಗಡಿಯಾರವನ್ನು ನಾನೇ ಕಟ್ಟುತ್ತಿದ್ದಾಗ ಆ ಅಂದವಾದ ಕಣ್ಣುಗಳಲ್ಲಿ ಹೊಳೆಯುವ ಆನಂದ, ಆಶ್ಚರ್ಯಗಳು, ತನ್ನ ಮೇಲಿನ ನನ್ನ ಅಭಿಮಾನದ ಕುರುಹಾದ ಹೆಮ್ಮೆ – ಅವೇ, ಸಾಕು! ಅದಕ್ಕಾಗಿ, ಅವಳಿಗಾಗಿ ಏನಾದರೂ ಎಷ್ಟಾದರೂ ಮಾಡುತ್ತೇನೆ.

"ಅಣ್ಣಾ! ಈ ಬಹುಮಾನಕ್ಕೆ ಬೆಲೆಯಂತೂ ಇಲ್ಲ... ನಾನು ನಿನಗೇನು ಕೊಡಬಲ್ಲೆ?"

"ಆಗ ನಾನೇ ಕೇಳ್ತೀನಿ ಸುಮ್ನಿರಮ್ಮ!" – ಎಂದೆ.

ಮದುಮಗನ ಬಗೆಗೆ ಮಾಹಿತಿಗಳನ್ನು ತಿಳಿಯುವ ಆತಂಕ ಕುತೂಹಲಗಳು ಅತಿಯಾಗಿದ್ದುವು. ಭಾನುವಿಗೆ ಗಂಡನಾಗುವಂತಹ ಆ ವ್ಯಕ್ತಿ ಎಂತಹ ಮಹಾನ್ ವ್ಯಕ್ತಿಯಾಗಿರಬಹುದು?

"ಭಾನು, ನೀನು ಮೊದಲೇ ನೋಡಿದೀಯಲ್ಲಾ? ಭಾವ ಹೇಗಿದ್ದಾನೆಯೆ? ನನ್ನ ಊಹೆಗೆ ಎಟುಕುವಂತೆ, ಬಂಗಾರದ ಮೈಬಣ್ಣ, ಗುಂಗುರು ಕೂದಲು, ಅಗಲವಾದ ಹಣೆ. ವಿಶಾಲವಾದ ಎದೆ..."

"ಹುಂ! ಭುಜಕೀರ್ತಿ..... ನಾಲ್ಕು ಕೈಗಳು... "

"ಹೌದೇ? ನಾನು ಅವನೂ ಮನುಷ್ಯ ಎಂದುಕೊಂಡಿದ್ದೆ!"

"ಛೀ! ಹೋಗೋ! ನೀನೋ ನಿನ್ನ ಹುಡುಗಾಟಾನೋ!" ಎಂದು ನಕ್ಕಳು.

"ಅದಲ್ಲ ಭಾನು! ನನಗೆ ಸೂಕ್ಷ್ಮವನ್ನೂ ತಿಳಿಸದೆ ನೀನು ಗಂಡನನ್ನು ಆರಿಸಿಕೊಂಡದ್ದಕ್ಕೆ ನನ್ನಲ್ಲಿ ಕ್ಷಮೆ ಬೇಡಬೇಕು. ಅಲ್ಲದೆ ನಾನು ಕೇಳಿದರೂ ಕೂಡ ನೀನು ಹೇಳದಿದ್ದರೆ... ಛೇ! ನನಗೇಕೋ ಸರಿತೋರೊಲ್ಲಮ್ಮ!" ಮುನಿಸಿದವನಂತೆ ಕುಳಿತೆ.

ಭಾನು ನಕ್ಕು ನನ್ನ ಗಲ್ಲ ಹಿಡಿದುಕೊಂಡು,

"ನಿನ್ನ ದಮ್ಮಯ್ಯ ಹೇಳ್ತೀನಿ! ನೀನು ಕುದುರೆ ಮೂತಿ ಮಾಡ್ಕೋಬೇಡ. ಮಾತು ಕೇಳೋಲ್ಲ."

"ಹುಂ, ಮಹಾ! ನಿನ್ನ ಗಂಡ ಮೂತಿಯಿಂದ ಕೇಳ್ತಾನೆ, ಕಿವಿಯಿಂದ ಮಾತಾಡ್ತಾನೇಂತ ಕಾಣತ್ತೆ! ಅದಕ್ಕೇನೇನೋ ಅಮ್ಮಾವ್ರು ಅವ್ರು ಮಾಡಿದ್ದು."

"ಹೌದಲ್ವೇ? ಅದು ನಮ್ಮಣ್ಣಂಗೆ ಹೇಗೆ ಗೊತ್ತಾಯ್ತು?" – ಎಂದು ಗಡಿಯಾರ ಕಟ್ಟಿಕೊಂಡ ಕೈಯನ್ನು ಗಲ್ಲದ ಕೆಳಗೆ ಆಸರೆ ಇಟ್ಟು ಯೋಚನೆಯ ಭಂಗಿಯನ್ನಭಿನಯಿಸಿದಳು. ಇನ್ನು ಮುನಿಸಿನ ಉಪಯೋಗವಿಲ್ಲ ಅನಿಸಿತು. ಅವಳ ಕೈ ಹಿಡಿದುಕೊಂಡು.

"ಹೇಳು ಭಾನು, ನೀನು ಮನಸಾರೆ ಒಪ್ಪಿದೆಯಾ?" – ಕೇಳಿದೆ.

ನನ್ನ ಪ್ರಶ್ನೆ ಕೇಳಿ ನಕ್ಕು ಕೊಂಚಹೊತ್ತು ಮೌನಳಾಗಿದ್ದಳು ಭಾನು.

" 'ಮನಸಾರೆ... ಒಪ್ಪಿಗೆಯಾಯ್ತೆ?' – ಎಂದರೆನಣ್ಣ? ಅಪ್ಪ, ಭಾನುವಿಗೆ ತಕ್ಕಂಥವನು ಎಂದರು. ನಾನೂ ನೋಡಿದೆ, ಇರಲಿ ಅನ್ನಿಸಿತು. ಇದ್ದಕ್ಕಿದ್ದಂತೆಯೇ ನಿಶ್ಚಿತವಾಯ್ತು. ಅವರಿಗೆ ದೂರದ ಬಂಧುಗಳನ್ನು ಬಿಟ್ಟರೆ ಇನ್ನಾರೂ ಇಲ್ಲವಂತೆ. ಆ ಬಂಧುಗಳು, ಅವರಿಗಿದ್ದ ಆಸ್ತಿಯಲ್ಲಿ ಸಾಕಿ ಸಲಹಿದರಂತೆ. ಆಸ್ತಿ ಕರಗಿತು. ಡಿಗ್ರಿ ಸಿಕ್ಕಿತು. ಸಧ್ಯದ ಆಧಾರ, ಮಾಡುತ್ತಿರುವ ಕೆಲಸ ಒಂದೇ. ಅದಕ್ಕೆ ಅಮ್ಮ ಹಿಂದು ಮುಂದು ಯೋಚಿಸಿದಳು. ಮನುಷ್ಯನಿಗೆ ವೈಯಕ್ತಿಕ ಮೌಲ್ಯವೇ ಮುಖ್ಯ, ಅದು ಬಿಟ್ಟು ಆಸ್ತಿಪಾಸ್ತಿಗಳೇನು ಲೆಖ್ಖ? ಆಸ್ತಿ ಬರುವುದೆಷ್ಟರಲ್ಲಿದೆ, ಹೋಗುವುದೂ ಎಷ್ಟರಲ್ಲಿದೆ?"

"ಹೌದು ಭಾನು! ಒಳ್ಳೆಯ ಕೆಲಸವನ್ನೇ ಮಾಡಿದೆ. ಅದೂ ಒಳ್ಳೆಯದೇ! ಹಿಂದೆ ಮುಂದೆ

ಸುತ್ತಾಡಿ ಹಿಂಸಿಸುವರಿದಲ್ಲದೆ ಸ್ವೇಚ್ಛೆಯಿಂದ ಹಾಯಾಗಿರಬಹುದು! ಹುಂ! ಇನ್ನು ಅಮ್ಮಾವ್ರು ನಮ್ಮನ್ನು ಮರ್ತೇಬಿಡ್ತಾರೆ!"

"ಮರೀದೇ ಇರೋದಾಗತ್ತೇನೋ! ದೊಡ್ಡ ಸಿಟಿಗೆ ಹೋಗ್ತಿದೀನಿ. ಬೀಚು, ವಾಕಿಂಗ್, ಸಿನಿಮಾ, ಪಿಕ್ನಿಕ್ಕು ಪಾರ್ಟಿ – ಎಲ್ಲ ಒಂದೇ, ಎರಡೇ – ಸಿಟೀನೇ ನಮ್ಮದಾಗಿರತ್ತೇ."

"ಅಯ್ಯಯ್ಯೋ, ತಿರುಗಾಡೇ ಮಹರಾಯ್ತೀ, ಯಾರಡ್ಡಿ ಮಾಡ್ತಾರ್ಯೆ! ಅದು ಹೋಗ್ಲಿ, ಆ ನಿನ್ನ ಗಂಡನಾಗೋ ಗುಂಡಪ್ಪನ ರೂಪ ವರ್ಣಸ್ಲೇ ಇಲ್ವಲ್ಲೇ? ಮನ್ಮಥನೇ! ನಲಕೂಬರನೇ! ದೇವೇಂದ್ರನೇ!"

"ಉಹುಂ... ರಾಜಕುಮಾರ!"

"ಆಹಾ! ಅಂಥ ಅನಂಗರೂಪನೇ!"

"ಹೌದು, ಬರೀ ರೂಪವಂತ ಏನ್ಬಂತು? ಅತಿಲೋಕ ಸುಂದರ! ಜಗದೇಕವೀರ!"

ಅವಳ ಮಾತು ಕೇಳಿ ಪಕಪಕನೆ ನಕ್ಕೆ. ನನ್ನ ನಗುವಿಗೆ ತಾನೂ ದನಿಗೂಡಿಸಿದಳು ಭಾನು. ಅಷ್ಟರಲ್ಲಿ ಚಿಕ್ಕಮ್ಮ ಬಂದಳು.

"ನೋಡು ಚಿಕ್ಕಮ್ಮ, ಎಷ್ಟು ಕೇಳಿದರೂ ತನ್ನ ಗಂಡ ಹೇಗಿದಾನೆ ಅಂತ ಹೇಳೊಲ್ಲ ಭಾನು!" ಎಂದೆ.

"ನಿನ್ತಲೆ. ಏನೂಂತ ಹೇಳ್ತಾಳೋ! ಹುಡುಗನೇನೋ ಲಕ್ಷಣವಾಗಿದಾನೆ. ಆಸ್ತಿ, ನಾಸ್ತಿ! ಕಷ್ಟಸುಖ ಅಂದ್ರೆ ಮನೇಲಿ ಒಂದು ಹೆಣ್ಣು ದಿಕ್ಕಿಲ್ಲ. ಅದೇ ಒಂದು ಯೋಚನೆಯಾಗಿದೆ."

"ಸರಿ, ಇನ್ನೂ ಯೋಚಿಸ್ತಾ ಕೂತ್ಕೋತಿಯಾ ಚಿಕ್ಕಮ್ಮ? ಏನೂ ಪರವಾಗಿಲ್ಲ. ಭಾನು ಮಾತ್ರ ಬಹಳವಾಗಿ ಸಂಭ್ರಮದಿಂದಿದಾಳೆ. ವಾಕಿಂಗು, ಟಾಕಿಂಗು, ಸಿನಿಮಾ, ಪಿಕ್ನಿಕ್ಕು ಝುಂ ಅಂತ... ಅಯ್ಯಮ್ಮಾ!" ನಾನು ಹೇಳ್ತಿರೋವಾಗ ಚರ್ಮ ಕಿತ್ತು ಬರೋ ಹಾಗೆ ಜಿಗುಟಿದಳು ಭಾನು.

'ಆಯ್ತೇ?' – ಎನ್ನುವಂತೆ ದುರುದುರನೆ ನೋಡಿದಳು ಭಾನು. ನಾನು ಬಾಯ್ಮುಚ್ಚಿಕೊಂಡು ಸುಮ್ಮನಾದೆ. ಚಿಕ್ಕಮ್ಮ ನಗುನಗುತ್ತಾ ಹೊರಟುಹೋದಳು.

ಮದುವೆಯ ದಿನ, ಗಂಡಿನ ಕಡೆಯವರು ಬಂದರೆಂದು, ತಿಳಿದು, ಮಂಟಪವನ್ನು ಅಲಂಕರಿಸುತ್ತಿದ್ದವನು ಎಲ್ಲಿಯದನ್ನು ಅಲ್ಲಿಯೇ ಬಿಟ್ಟು ಓಡಿಹೋದೆ. ಅತಿಲೋಕ ಸುಂದರ, ಜಗದೇಕ ವೀರನನ್ನು ನೋಡದಿದ್ದರೆ ಆಗೋಲ್ಲ ಅನಿಸಿತು. ಬಿಡದಿಯ ಮನೆಯಲ್ಲಿ ಎಲ್ಲರೂ ಸಂಭ್ರಮದಿಂದ ತಿರುಗುತ್ತಿದ್ದರು. ಮದುಮಗನಿಗೋಸ್ಕರ ಕಾತರದಿಂದ ಹುಡುಕುತ್ತಿದ್ದೆ. ಆಗ ತಾನೇ ಆ ಕೋಣೆಯಿಂದ ಐದಾರು ಜನ ಸೂಟುವಾಲಾಗಳು ಕೋಣೆಯಿಂದ ಪೆರೇಡ್ ಹೊರಟರು. ಪ್ರಾಯಶಃ ಅವರೆಲ್ಲಾ ರಾಜಕುಮಾರನ 'ಚೇಲಾ'ಗಳಿರಬಹುದು! ಮೆಲ್ಲಗೆ ಕೋಣೆಯಲ್ಲಡಿಯಿರಿಸಿದೆ.

ಬಟ್ಟೆ ಬದಲಿಸಿ ಒಬ್ಬನೇ ಕುಳಿತಿದ್ದ ಮದುಮಗ. ಗ್ಲಾಸ್ಕೋ ಪಂಚೆಯುಟ್ಟು ಬಿಳಿಯ ಬಣ್ಣದ ಅಂಗಿ ಧರಿಸಿದ್ದ. ಇದ್ದ ಎರಡು ಕಣ್ಣುಗಳನ್ನು ದೊಡ್ಡದಾಗಿ ಮಾಡಿಕೊಂಡು ಹತ್ತಿರ ಹೋಗಿ ನನ್ನನ್ನು ಪರಿಚಯ ಮಾಡಿಕೊಂಡೆ,

"ನಮಸ್ಕಾರ."

"ನಮಸ್ಕಾರ... ಬನ್ನಿ."

"ನಾನು ಭಾನುಮತಿಯ ಅಣ್ಣ. ನನ್ನನ್ನು ಕೇಶವರಾವ್ ಎನ್ನುತ್ತಾರೆ. ನಿಮ್ಮನ್ನು ನೋಡಬೇಕೆಂದು..."

"ಕುಳಿತುಕೊಳ್ಳಿ" ಎಂದ.

ನಾನೊಂದು ಕುರ್ಚಿಯಲ್ಲಿ ಕುಳಿತೆ. ಆತ ನನಗೆ ಸಿಗರೇಟು ಕೊಡಲು ಪ್ಯಾಕ್ ಮುಂದೆ ಚಾಚಿದ.

"ನೋ...! ಥ್ಯಾಂಕ್ಸ್, ಅಭ್ಯಾಸವಿಲ್ಲ" ಎಂದೆ.

"ತುಂಬಾ ವಿಚಿತ್ರಾರೀ! ಅದೂ ಈಗಿನ ಕಾಲದಲ್ಲಿ!" ಎಂದು ಹೇಳುತ್ತಾ ತಾನೊಂದು ಹತ್ತಿಸಿಕೊಂಡು ಕಾಲಮೇಲೆ ಕಾಲು ಹಾಕಿಕೊಂಡು ಠೀವಿಯಿಂದ ಕುಳಿತ.

ಆಸಾಮಿ ಸಣ್ಣಗೆ ಕೆಂಪಗೇನೋ ಇದ್ದ. ತಲೆಗೂದಲು ಉಂಗುರ ಸುತ್ತಿರಲಿಲ್ಲ. ಹಣೆ ವಿಶಾಲವಾಗಿತ್ತು ಆದರೆ ಎದೆ ಕಿರಿದಾಗಿತ್ತು. ಒಟ್ಟಿನಲ್ಲಿ ರೂಪವಂತನೇ ಎನ್ನಬಹುದಾಗಿತ್ತು. ಭಾನುವಿಗೆ ಸರಿಯಾದವನೇ, ಸರಸಭಾಷಿಯಲ್ಲ. ಪ್ರಾಯಶಃ ಮದುಮಗನ ದರ್ಪ ವಿರಬಹುದು.

"ನಿಮ್ಮನ್ನು ನೋಡಬೇಕೆಂದು ತುಂಬಾ ಅನಿಸಿತ್ತು. ನನ್ನ ತಂಗಿಯನ್ನು ಕೇಳಿದರೆ ಅತಿಲೋಕ ಸುಂದರ" ಎಂದಳು.

"ಹುಂ, ಜಾನಪದ ಚಿತ್ರಗಳನ್ನು ತುಂಬಾ ನೋಡ್ತಾಳೇನೋ! ನೀವೇನಂತೀರಿ?" ನಗುನಗುತ್ತಾ ಕೇಳಿದ.

" ನಾನು ಹುಡುಗಿಯಲ್ಲಾರೀ! ನನ್ನ ಭಾವನೆ ಹೇಳೋಕಾಗೊಲ್ಲ" – ಎಂದೆ.

ಸಂಭಾಷಣೆ ಸರಸವಾಗೇ ಮುಂದುವರೆಯಿತು. ಅತಿ ಬಲವಂತದಿಂದ ಮಾತನಾಡುತ್ತಿದ್ದ. ಒಂದು ಅರ್ಧಗಂಟೆ ಮಾತನಾಡುತ್ತಿದ್ದು ಎದ್ದು ಬಂದೆ. ಮದುಮಗಳಾಗಿ ಅಲಂಕೃತಳಾಗಿದ್ದ ಭಾನುವಿನ ಹತ್ತಿರ ಬಂದು ಎಲ್ಲಾ ಹೇಳಿದೆ.

"ಭಾನು! ಭುಜಕೀರ್ತಿ, ಮೌಕ್ತಿಕಹಾರ ಯಾವುದೂ ಇಲ್ಲ. ಎಲ್ಲಾದರೂ ಬಿಚ್ಚಿರಿಸಿದ್ದನೋ ಏನೋ!"

ಹುಸಿಗೋಪದಿಂದ ಮೂತಿ ಬಿಗಿದುಕೊಂಡು ಕುಳಿತಳು. ಕೆನ್ನೆಯ ಮೇಲಿನ ದೃಷ್ಟಿ ಬೊಟ್ಟು ಎದ್ದು ಕಾಣುತ್ತಿತ್ತು.

"ನೀವಿಬ್ರೂ ಚೆನ್ನಾಗೇ ಇದೀರಿ, ಮಧ್ಯೆ ನನ್ಮೇಲ್ಯಾಕೇ ಸಿಟ್ಟು?". – ಹುಸಿಮುನಿಸಿನಿಂದ ಕೇಳಿದೆ.

ತಲೆತಗ್ಗಿಸಿ ನಕ್ಕಳು ಭಾನು. ಕಲ್ಯಾಣಕ್ಕೆ ಸಿದ್ಧಳಾಗಿರುವ ಕನ್ಯೆ ಸಾಧಾರಣವಾಗಿ, ತುಂಬು ಹೃದಯದಿಂದ ಸಜೀವ ನಗೆ ನಗಬಹುದು ಎಂದುಕೊಂಡೆ. ಆ ನಗೆಯ ಹಿಂದೆ ನೂರಾರು ಊಹೆಗಳು! ಸಾವಿರಾರು ಕನಸುಗಳು!

ಅವನು, ಆ ಮದುಮಗ ಭಾನುವಿನ ಕುತ್ತಿಗೆಗೆ ಮಾಂಗಲ್ಯವನ್ನು ಕಟ್ಟುತ್ತಿರುವಾಗ ನನಗೆ ಅತಿ ಆತ್ಮೀಯರು ಯಾರೋ ದೂರವಾಗುತ್ತಿರುವಂತೆ, ಶಾಶ್ವತವಾಗಿ ಏನನ್ನೋ ಕಳೆದುಕೊಳ್ಳುತ್ತಿರುವಂತೆ ಹೃದಯ ತೊಳಲಿತು. ಭಾನು ಈಗ ನನ್ನ ತಂಗಿಯಲ್ಲ, ರಾಜಶೇಖರನ ಹೆಂಡತಿ! ಇನ್ನು ಅಣ್ಣನೊಂದಿಗೆ ಗಂಟೆಗಟ್ಟಳೆ ಮಾತನಾಡಲು, ಉರುಳುರುಳಿ ನಗಲು ಅವಕಾಶವೆಲ್ಲಿ? ಎಲ್ಲರೊಂದಿಗೂ ನಾನೂ ಕೈಲಿದ್ದ ಅಕ್ಷತೆಯನ್ನು ಹಾಕಿ ಮೌನದಿಂದ ಆಶೀರ್ವದಿಸಿ, ಯಾರಿಗೂ ಕಾಣದಂತೆ ಕಣ್ಣೊರೆಸಿಕೊಂಡೆ. ನನ್ನ ಅಂತರಾತ್ಮ ಭಾನುವನ್ನು ತುಂಬಾ ಆಶೀರ್ವದಿಸಿತು. ನನ್ನ ತಂಗಿ ಚಿರಕಾಲ ಸುಖವಾಗಿ ಬಾಳಲಿ. ಮಾತೃ ಮೂರ್ತಿಯಾಗಿ, ಸೌಭಾಗ್ಯವತಿಯಾಗಿ, ಚಿರಾಯುವಾಗಲಿ, ಎಂದು ಹಾರೈಸಿತು ಹೃದಯ.

ಮದುಮಗನಾಗಿ ಬಂದವನು ಭಾವನಾಗಿ ಕುಳಿತ. ಅಳಿಯನನ್ನು ಕಳಿಸಿಕೊಡುವವರೆಗೂ ಇರಬೇಕೆಂದು ಚಿಕ್ಕಮ್ಮ ಬಲವಂತಪಡಿಸಿದಳು. ಇದ್ದ ನಾಲ್ಕು ದಿನ ಹಾಸ್ಯ ಸರಸ ಸಲಿಗೆಯ ಮಾತುಗಳಿಂದ ಕಳೆಯಿತು.

"ಭಾವಾ! ನೀವು ತುಂಬಾ ಅದೃಷ್ಟವಂತರು, ನನ್ನ ತಂಗಿಯಂತಹ ಹೆಂಡತಿ ಸಿಕ್ಕಿದಳು." ನಗುತ್ತಲೇ ಹೇಳಿದೆ.

"ಅರೆ! ನಿಮ್ಮ ತಂಗೀನೂ ಅದೃಷ್ಟವಂತಳೇ ರೀ! ಅದಕ್ಕೇ ನನ್ನಂಥ ಗಂಡ ಸಿಕ್ಕಿದ" ಎಂದ.

"ಭಾವಾ! ನಿಮ್ಮ ಬೆನ್ನು ನೀವೇ ತಟ್ಟಿಕೊಳ್ಳುತ್ತೀರಲ್ಲಾ?"

"ಅಯ್ಯೋ ಪಾಪ! ಅವರ ಪರ ವಾದಾ ಮಾಡೋಕೆ ಯಾರೂ ಇಲ್ಲ, ಇನ್ನೇನ್ಮಾಡ್ತಾರೆ?" ಎಂದಳು ಭಾನು.

ಮೂವರೂ ಮನಃಪೂರ್ತಿಯಾಗಿ ನಕ್ಕೆವು.

ಭಾವ, ಆಗಾಗಲೇ ಹೆಂಡತಿಯ ಮೇಲೆ ಅಧಿಕಾರ ಚಲಾಯಿಸಲಾರಂಭಿಸಿದ್ದ.

ಏನೋ ಒಂದು, ಷರಟಿನ ಕೈ ಮಡಿಸು ಎಂತಲೋ, ಷೂಗೆ ಪಾಲಿಷ್ ಹಾಕು ಎಂತಲೋ,– ಏನೋ ಒಂದು ಕೆಲಸ ಹೇಳುತ್ತಿದ್ದ. ಅವನ ಅಪ್ಪಣೆಯನ್ನು ಶಿರಸಾವಹಿಸಲು ನಾಚುತ್ತಿದ್ದಳು ಭಾನು. ಕೆಲಸ ಮಾಡುವುದರಲ್ಲಿ ಸ್ವಲ್ಪ ಲೋಪವಾಗಲೀ ನಿಧಾನವಾಗಲೀ ಆದರೆ ಬೇಸರಿಸಿಕೊಳ್ಳುತ್ತಿದ್ದ. ಆಗ ಅಣಕದ ನಗೆ ನಗುತ್ತಿದ್ದ. ಭಾನುವಿನ ಮುಖ ಕಂದುತ್ತಿತ್ತು. ಅದನ್ನವನು ಅರ್ಥಮಾಡಿಕೊಳ್ಳುತ್ತಿದ್ದನೋ, ಅಥವಾ ಗಮನಿಸುತ್ತಲೂ ಇರಲಿಲ್ಲವೆನಿಸುತ್ತದೆ. ಆಗ ನನಗೆ ಮಾತ್ರಾ ಬಹಳವಾಗಿ ಕಸಿವಿಸಿಯಾಗುತ್ತಿತ್ತು.

ಭಾನು ಪರಾಧೀನಳಾಗಿ ಹೋದಳೇ? ಎಲ್ಲ ರೀತಿಯಿಂದಲೂ ಅವಳನ್ನು ಆಳುವವನೊಬ್ಬ ಅವತರಿಸಿದನೇ? ಕೋಮಲವಾದ ಅವಳ ಮನಸ್ಸನ್ನು ನೋಯಿಸಬಾರದೆಂದೂ, ಅವಳನ್ನು ಅಪರೂಪವಾಗಿ ನೋಡಿಕೊಳ್ಳಬೇಕೆಂದೂ ಅವನಿಗೆ ತಿಳಿದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು?

ನಾನು ಅಲ್ಲಿಂದ ಹೊರಡುವ ಮುನ್ನ ಭಾನುವನ್ನು ಏಕಾಂತದಲ್ಲಿ ಭೇಟಿಯಾದೆ.

"ಭಾನೂ! ನಿನ್ನ ಭವಿಷ್ಯ ನಿರ್ಣಯವಾಗಿ ಹೋಯ್ತು. ಆ ಭಾವೀ ಬಾಳನ್ನು ಸುಖದ ಸುಪ್ಪತ್ತಿಗೆಯಾಗಿ ರೂಪಿಸಿಕೊಳ್ಳುವುದು ನಿನ್ನ ಕೈಲಿದೆ. ನಿನ್ನ ಗಂಡನಿಗೆ ಕೊಂಚ ಮುಂಗೋಪ

ಜಾಸ್ತಿ ಅನಿಸುತ್ತದೆ. ಅದಕ್ಕೆ ನೀನು ಶಾಂತಿಯ ಪ್ರತಿಮೂರ್ತಿಯಾಗಬೇಕು. ಚಿಕ್ಕಮ್ಮನ ಮೇಲೆ ಸಿಡುಕಿದಂತೆಯೇ ಅವನ ಹತ್ತಿರವೂ ನಿನ್ನ ಸಿಡುಕಿನ ಪ್ರದರ್ಶನ ಮಾಡಬೇಡ. ಅವನೊಂದಿಗೆ ಎಚ್ಚರಿಕೆಯಿಂದ, ಬುದ್ಧಿವಂತಿಕೆಯಿಂದ...."

ಮಾತು ಮುಂದೆ ಹೊರಡಲಿಲ್ಲ. ಭಾನುವಿನ ತಲೆಯ ಮೇಲೆ ಭಾರವಾದ ಜವಾಬ್ದಾರಿಯನ್ನು ಹೊರಿಸುತ್ತಿರುವಂತೆಯೂ, ಆಡುತ್ತಾ, ಹಾಡುತ್ತಾ ತಿರುಗಾಡುತ್ತಿದ್ದ ಭಾನುಮತಿಯನ್ನು ಯಾರಿಗೋ ಒಪ್ಪಿಸುತ್ತಿರುವಂತೆಯೂ ತೋಚುತ್ತಿತ್ತು.

"ಅಣ್ಣಾ!" – ಕರೆದಳು ಭಾನುಮತಿ. ಅವಳ ಬಾಯಿಂದ ಕ್ಷಣಕಾಲ ಮಾತೇ ಹೊರಡಲಿಲ್ಲ.

"ನಿಮ್ಮ ಭಾವನವರ ಬಗೆಗೆ ನನಗೇನೂ ಶಂಕೆ ಇಲ್ಲಣ್ಣ. ನಿಜವಾಗಿಯೂ ಮನಸ್ಸು ಹಗುರವಾಗಿದೆ, ಸಂತೋಷವಾಗಿದೆ" ನೆಲವನ್ನೇ ನಿಟ್ಟಿಸುತ್ತಾ ಹೇಳಿದಳು.

ಭಾನು ಮನಸ್ಸು ಬಿಚ್ಚಿ ಮಾತನಾಡುವುದು ನನ್ನೊಂದಿಗೆ ಮಾತ್ರ!

"ಹೌದು ಭಾನು! ನಿನ್ನ ಲಗ್ನ ಪತ್ರಿಕೆಯನ್ನು ನೋಡಿದಾಗ, ಏನೋ ಅನ್ನಿಸಿತ್ತು. ಆದರೀಗ ನನಗೂ ಸಂತೋಷವಾಗಿಯೇ ಇದೆ" ಎಂದೆ.

ನಂತರ ನನ್ನ ವಿದ್ಯಾಭ್ಯಾಸದ ವಿಷಯ ಬಂತು. ವೈದ್ಯಕೀಯಕ್ಕೆ ಓದು ಎಂದಳು ಭಾನುಮತಿ.

"ಈಗ ನನಗದರಲ್ಲಿ ಆಸಕ್ತಿ ಇಲ್ಲ ಭಾನು! ಬಿ.ಎ.ಓದುತ್ತೀನಿ" ಎಂದೆ.

ಮತ್ತೇನೂ ವಾದಿಸದೆ ತಲೆಯಾಡಿಸಿದಳು ಭಾನುಮತಿ.

ಮದುವೆಯಾದ ಮೂರನೆಯ ತಿಂಗಳಿನಲ್ಲಿ ಗಂಡನ ಮನೆಗೆ ಹೋದಳು ಭಾನು. ಸಂಸಾರ ಆರಂಭಿಸಿದ ಮೊದಲಿನಲ್ಲಿ ತಮ್ಮ ಹೊಸ ಸಂಸಾರ, ಗಂಡನ ಕೋಪತಾಪಗಳು, ತಾನು ಕಲಿಯುತ್ತಿರುವ ಕೆಲಸ ಕಾರ್ಯಗಳು ಅವುಗಳ ಬಗೆಗೆ ವಿಶದವಾಗಿ ಕಾಗದ ಬರೆಯುತ್ತಿದ್ದಳು. ದಿನಗಳು ಮಾಮೂಲಾಗಿ ಉರುಳುತ್ತಿದ್ದುವು. ಭಾವನ ಕೋಪದ ತಾಪ ಒಂದೇ ಸಮನಾಗಿತ್ತಂತೆ. ಬೆಳಗಾಗುವ ಮೊದಲೇ ನಸುಗತ್ತಲಿನಲ್ಲಿ ಕೆಲಸವಾರಂಭಿಸಬೇಕೆಂದರೆ ಬೇಸರವಾಗುತ್ತದಂತೆ. ಒಂದೊಂದು ಬಾರಿ ಬಹಳ ಬೇಸರಿಕೆ ಬರುತ್ತಿತ್ತಂತೆ. ಅದರ ಹಿಂದೆಯೇ ಅಪರಿಮಿತ ಸಹನೆಯೂ ಆವರಿಸುತ್ತಿತ್ತಂತೆ. ಎಲ್ಲಕ್ಕೂ ಮಿಗಿಲಾಗಿ ಅವಳಿಗೆ ಯಾವಾಗಲೂ ನನ್ನ ನೆನಪೇ ಬರುತ್ತಿತ್ತಂತೆ. ಹೊಸ ಸಂಸಾರದಲ್ಲಿನ ಅನನುಭವಿಯಾದ ತಂಗಿಗೆ ನನಗೆ ತೋಚಿದ ಧೈರ್ಯ ಹೇಳಿ ಕಾಗದ ಬರೆಯುತ್ತಿದ್ದೆ.

* * *

ಮದುವೆಯಾಗಿ ಒಂದು ವರ್ಷ ಉರುಳುವುದರಲ್ಲಿಯೇ ಭಾನು ತಾಯಿಯಾದಳು. ಮುದ್ದು ಮುದ್ದಾಗಿದ್ದ ಸೋದರಳಿಯನನ್ನು ನೋಡಿ ತುಂಬಾ ಸಂತೋಷವಾಯ್ತು. ತಾಯಿ ತಂದೆಯರ ರೂಪು ಲಾವಣ್ಯಗಳನ್ನು ಎರಕಹುಯ್ದೊಂಡಿದ್ದ. ಬೆಳ್ಳಗೆ, ಸೂರ್ಯನ ಕಿರಣದಂತಿದ್ದ ವರ್ಷ ತುಂಬುವುದರಲ್ಲಿಯೇ ಪುಟ್ಟ ಪುಟ್ಟ ಹೆಜ್ಜೆಯಿರಿಸಿಕೊಂಡು ಮನೆಯಲ್ಲೆಲ್ಲ ತಿರುಗಾಡುತ್ತಿದ್ದರೆ ನೋಡಲು ಎರಡು ಕಣ್ಣು ಸಾಲದು, ಅನಿಸುತ್ತಿತ್ತು. ಭಾನು

ಅದೃಷ್ಟವಂತೆ! ಎಲ್ಲ ಸೌಭಾಗ್ಯಗಳನ್ನು ಪಡೆದಿದ್ದಾಳೆ. ಆ ಎರಡು ವರ್ಷಗಳ ಅಂತರದಲ್ಲಿ ಭಾನು ಬಹಳವಾಗಿ ಬದಲಾಯಿಸಿದ್ದಳು. ಶಾಂತಿ, ಸಹನೆ ನೆಮ್ಮದಿ ಎಲ್ಲವೂ ನೆರೆಯಾಗಿದ್ದುವು.

"ಭಾನೂ! ನೀನು ತುಂಬಾ ಬದಲಾಯಿಸಿದ್ದೀ, ನಾವು ಓದುತ್ತಿದ್ದಾಗ ಇದ್ದಂತೆಯೇ ಇರಬಾರದೇಕೆ? ಇನ್ನು ಎಂದೂ ಹಾಗಿರಲಾಗದೆ?" ಸಪ್ಪೆ ಮುಖ ಮಾಡಿಕೊಂಡು ಕೇಳಿದೆ. ಭಾನು ನನ್ನ ಪ್ರಶ್ನೆ ಕೇಳಿ ನಗುನಗುತ್ತಾ,

"ನಾನು ಮತ್ತೆ ಹಾಗೆ ಇರಬೇಕೆಂದರೆ, ಪ್ರೀತಿಸುವ ಅಣ್ಣ ಮಾತ್ರಾ ಸಾಲದು" ಎಂದಳು.

"ಎಂದರೆ?"

"ಏನಿಲ್ಲ ಹೋಗೋ!" ಎಂದಳು

"ಆಹಾ! ನೀನು ಮಹಾ ದೊಡ್ಡವಳಾದಂತೆ, ನಾನಿನ್ನೂ ಚಿಕ್ಕ ಹುಡುಗನಾಗೇ ಇರುವಂತೆ, ನನ್ನ ಮಾತನ್ನು ಅಲಕ್ಷಿಸ್ತಿದೀಯಲ್ಲೇ? ಭಾನು, ನೀನು ನನಗಿಂತಲೂ ಚಿಕ್ಕವಳಮ್ಮ" ಹುಸಿಕೋಪದಿಂದ ಹೇಳಿದೆ.

ನಸುನಕ್ಕಳು ಭಾನುಮತಿ. ಆ ನಗೆಯಲ್ಲಿ ಏನೋ ಲೋಪ ತೋರುತ್ತಿತ್ತು.

ಪರೀಕ್ಷೆಯ ಫಲಿತಾಂಶ ತಿಳಿಯಿತು. ನಾನು ಮೊದಲಿಗನಾಗಿ ತೇರ್ಗಡೆಯಾಗಿದ್ದೆ. ಭಾನುವಿಗೆ ಸಂತೋಷದಿಂದ ಕಾಗದ ಬರೆದು ಅದರಲ್ಲಿ,

"ಭಾನೂ! ಮುಂದೆ ಎಂ.ಎ. ಗೆ ನಿಮ್ಮೂರಿನಲ್ಲಿಯೇ ಓದುವುದೆಂದುಕೊಂಡಿದ್ದೇನೆ. ಈ ಊರನ್ನು ಬದಲಾಯಿಸಬೇಕೆನ್ನಿಸಿದೆ. ಮತ್ತೆ ನಿನ್ನ ಹತ್ತಿರ ಬರುತ್ತಿರುವುದಕ್ಕೆ ಸಂತೋಷವಾಗಿದೆ" ಎಂದು ಬರೆದಿದ್ದೆ. ಆದರೆ ನನಗೊಂದು ಅನುಮಾನವಿತ್ತು. ಭಾನು ನನ್ನನ್ನು ತಮ್ಮ ಮನೆಯಲ್ಲಿಯೇ ಇದ್ದುಕೊಂಡು ಓದು ಎಂದು ಬಲವಂತ ಮಾಡುತ್ತಾಳೇನೋ? ಏನು ಮಾಡುವುದು? ಅಡ್ಡಿ ಆತಂಕಗಳಿಲ್ಲದ ಗಂಡ ಹೆಂಡತಿಯರ ನಡುವೆ ನಾನಿರುವುದು ಹೇಗೆ? ಅವರ ಸರಸ ಸಲ್ಲಾಪಗಳ ನಡುವೆ ನಾನ್ಯಾಕೆ? ಶಿವಪೂಜೆಯಲ್ಲಿ ಕರಡಿಯನ್ನು ನುಗ್ಗಿಸಿದಂತೆ! ರುಚಿಯಾದ ಪಾಯಸದಲ್ಲಿ ನಾಯಿಬಾಲ ಅದ್ದಿದಂತೆ? ಅಲ್ಲದೆ, ಅವರ ಮನೆಯಲ್ಲಿದ್ದರೆ ನನ್ನ ವಿದ್ಯಾಭ್ಯಾಸವೂ ಸರಿಯಾಗಿ ನಡೆಯದು. ಅವಳು ಎಷ್ಟೇ ಬಲವಂತಪಡಿಸಿದರೂ ಒಪ್ಪಬಾರದು – ನಿಶ್ಚಯಿಸಿದೆ.

ನನ್ನ ಕಾಗದಕ್ಕೆ ಭಾನು ಉತ್ತರಿಸಿದಳು. ಅದರಲ್ಲಿ ನನ್ನ ಮುಂದಿನ ವಿದ್ಯಾಭ್ಯಾಸದ ಪ್ರಸಕ್ತಿಯೇ ಇರಲಿಲ್ಲ. ನನ್ನ ಬರುವಿಕೆಯನ್ನು ಮಾತ್ರ ಕಾತುರದಿಂದ ನಿರೀಕ್ಷಿಸುತ್ತಿರುವುದಾಗಿ ಬರೆದಿದ್ದಳು. ನನ್ನೆದೆಯ ಮೇಲೆ ತಲೆಯಿರಿಸಿ ಹೃದಯ ಹಗುರವಾಗುವವರೆಗೂ ಅಳಬೇಕಂತೆ! ಹುಚ್ಚು ಹುಡುಗಿ!

* * *

ಕಾಲೇಜಿಗೆ ಸೇರಿ ಹಾಸ್ಟೇಲಿನ ಕೋಣೆಯಲ್ಲಿ ಪದಾರ್ಥಗಳನ್ನಿರಿಸಿ ಕೊಂಚಹೊತ್ತು ಮಲಗಿಕೊಂಡೆ. ಸಂಜೆ ಎದ್ದು ಅಮ್ಮ ನನಗೆ ಕೊಟ್ಟಿದ್ದ ತಿಂಡಿಯನ್ನು ಚೀಲದಲ್ಲಿ ಹಾಕಿಕೊಂಡು ಹೊರಟೆ. ಆಗಾಗಲೇ ಭಾನುವನ್ನು ನೋಡಿ ಕೆಲವು ತಿಂಗಳುಗಳಾಗಿದ್ದುವು. ಮನೆಯ

ಬಾಗಿಲಿನಲ್ಲಿ ಅಡಿ ಇರಿಸುತ್ತಿರುವಂತೆ ಅವಾಕ್ಕಾದೆ. ಭಾನು ಗುರುತು ಸಿಗದಷ್ಟು ಸಣ್ಣಗಾಗಿಹೋಗಿದ್ದಳು. ನನ್ನನ್ನು ಕಾಣುತ್ತಲೇ ಮುಖದ ಮೇಲೆ ನಗೆಯ ಮುಸುಗೆಳೆದು ಕೊಂಡಳು. ಆ ಮುಖವನ್ನು ನೋಡಿದರೆ ಕಳೆದುಕೊಂಡ ವಸ್ತುವನ್ನು ಪಡೆದವರ ಮುಖದಂತಿತ್ತು. ಆಪ್ಯಾಯತೆಯಿಂದ ಒಳಗೆ ಕರೆದೊಯ್ದು ಕೂಡಿಸಿಕೊಂಡಳು.

"ಚೆನ್ನಾಗಿದ್ದೀಯಾ ಕೇಶು? ನಿನ್ನೇನೇ ಬರ್ತೀ ಅಂತ ನಿರೀಕ್ಷಿಸಿದ್ದೆ. ದೊಡ್ಡಮ್ಮ ಚೆನ್ನಾಗಿದಾರ್ಯೆ? ಅಲ್ಲವ್ರೋ ಅದೇನು ದಪ್ಪ ಆಗ್ಹೋದ್ಯೋ?"

ಒಂದರ ಮೇಲೊಂದರಂತೆ ಪ್ರಶ್ನೆಗಳ ಮಳೆಯನ್ನೇ ಸುರಿದಳು ಭಾನು. ಉತ್ತರವಾಗಿ ನಾನು ನಸುನಕ್ಕೆ. ಮತ್ತೆ ಅವಳೇ ಮಗನನ್ನು ಕರೆದು,

"ಪಾಪ್ರೂ ಮಾವ ಬಂದಿದಾನೆ ನೋಡೋ, ಮಾವ ನಿನಗೇನು ತಂದಿದಾನೆ ಕೇಳು" ಎನ್ನುತ್ತಾ ಪಡಸಾಲೆಯಲ್ಲಿ ಆಡುತ್ತಿದ್ದ ಮಗನನ್ನು ಕರೆದುಕೊಂಡು ಬಂದಳು.

ಪಾಪು ಹತ್ತಿರ ಬಂದಾಗ ಕೆನ್ನೆಯನ್ನು ನೇವರಿಸಿ,

"ನಿಂಗೇನೂ ತಂದಿಲ್ಲ ಮರೀ" ಎಂದೆ.

ಭಾನೂ ನಗುನಗುತ್ತಾ,

"ಏನೋ ಅಳಿಯ ಅಂದ್ರೆ ಅಷ್ಟೊಂದು ಅಗ್ಗ ಅಂದ್ಕೊಂಡಿದಿಯಾ? ಬಿಸ್ಕತ್ತೋ, ಚಾಕ್ಲೇಟೋ ತರಬಾರದಾಗಿತ್ತೆ?"

"ಏನಮ್ಮ! ಹಾಗಾದ್ರೆ ನಿನ್ನ ಮಗನಿಗೆ ಬಿಸ್ಕತ್ತಿನ ವರದಕ್ಷಿಣೇನೇ ಸಾಕು ಅಂತೀಯಾ?" ಎನ್ನುತ್ತಾ ಚೀಲವನ್ನು ಮುಂದಿರಿಸಿದೆ.

"ಹುಂ, ಈಗ್ಗೆ ಸಾಕು!" ಗತ್ತಿನಿಂದ ಹೇಳಿದಳು. ಎಷ್ಟಾದರೂ ಗಂಡು ಮಗನ ತಾಯಿಯಲ್ಲವೆ? ಪಾಪು ತಿಂಡಿಯ ಚೀಲದಿಂದ ಬಿಸ್ಕತ್ತುಗಳನ್ನಾರಿಸುತ್ತಿದ್ದ. ನಾವು ಹರಟೆಗಾರಂಭಿಸಿದೆವು. ಮಾತಿನ ನಡುವೆ ನನ್ನ ಮದುವೆಯ ಮಾತು ಬಂತು. ನನ್ನನ್ನು ಮದುವೆಯಾಗುವವಳು ತುಂಬಾ ಅದೃಷ್ಟವಂತೆ! ಆ ಅದೃಷ್ಟ ಸುಶೀಲಳಿಗೇ ಸಿಗಬೇಕಂತೆ. ಸುಶೀಲ ನಮ್ಮ ಸೋದರ ಮಾವನ ಮಗಳು. ಭಾನುವಿಗೆ ತುಂಬಾ ಆಪ್ತಳು. ಸುಶೀಲ ಹುಟ್ಟಿದಂದಿನಿಂದಲೇ ನನ್ನ ಹೆಂಡತಿ ಎಂದು ಹೆಸರಿಸಿದ್ದರು. ಆದರೆ ಅದು ನಿಜವ್ರೋ, – ಸುಳ್ಳೋ, ಊಹೆಯೋ – ವಾಸ್ತವವ್ರೋ, ಕನಸೋ – ನನಸೋ, ಯಾವ್ರುದೂ ಯಾವ್ರುದೂ ನಮ್ಮ ತಂದೆಗೂ, ಮತ್ತು ಆ ದೇವರೆನ್ನುವವನಿರುವುದೇ ಆದರೆ ಅವನಿಗೂ ಗೊತ್ತಿರಬೇಕು. ನಮ್ಮ ತಂದೆ ಎಂದೂ ಯಾವ ವಿಷಯವನ್ನೂ ಹೊರಗೆಡಹರು. ದೇವರು ಎಂದೂ ಅಗೋಚರ. ಮತ್ತೆ ಹೇಗೆ ಗೊತ್ತಾಗಬೇಕು? ನನ್ನ ಅಭಿಪ್ರಾಯವನ್ನು ತೆಗೆದುಕೊಂಡರೆ ಅಭ್ಯಂತರವೂ ಇಲ್ಲ. ಮೇಲಾಗಿ ತುಂಬಾ ಸಂತೋಷ. ನನ್ನ ಮದುವೆಯ ಬಗೆಗೆ ನಾನೆಂದೂ ಯೋಚಿಸಿರಲಿಲ್ಲ. ಹೇಳಿದರೂ ಭಾನು ನಂಬುವುದಿಲ್ಲ – ಕರ್ಮ!

"ಏಯ್! ನೀನು ಕಳ್ಳ ಕೊರಮ. ನೀನೇ ಹೇಳೋಕಾಗ್ದೆ ದೊಡ್ಡಪ್ಪನ ಮೇಲೆ ಹಾಕ್ತಿದೀ. ನೀನು ಹಟ ಹಿಡಿದರೆ ಏಕಾಗೊಲ್ಲ? ಯಾರೇನು ಮಾಡ್ತಾರೆ?" ಎಂದಳು.

ಅವಳ ಮಾತು ಕೇಳಿ,

"ಅದ್ಯಾಕಮ್ಮ ತಾಯಿ? ಹಟ ಏಕಮ್ಮ ಹಿಡೀಬೇಕು? ನಿನ್ನ ಸುಶೀಲೇನ ಬಿಟ್ರೆ ಪ್ರಪಂಚಾನೇ ಬಂದಾಗೋಯ್ತೇ? ಇನ್ನು ಹೆಣ್ಣುಗಳೇ ಇಲ್ಲಾ ಅಂದ್ಕೊಂಡ್ಯಾ?" ಎಂದು ಹೇಳಿದ.

"ರಾಯ್ರೇ! ಪ್ರಪಂಚ ಬರಿದಾಗೋಲ್ಲಾರೀ!" ಅಣಕು ದನಿಯಿಂದ ಹೇಳಿದಳು. ನಂತರ

"ಕೇಶೂ! ಸುಶೀಲಳ ಎಣಿಕೆಯಲ್ಲಿ ನಿನ್ನ ಮೌಲ್ಯ ಅಮೂಲ್ಯ. ಅಂತಹ ಭಾವನೆ ಇನ್ನಾವ ಹೆಣ್ಣಿಗೂ ಬರುವುದಿಲ್ಲ. ಅವಳಿಗೆ ಅರಿವು ಬಂದ ದಿನದಿಂದಲೂ ನಿನ್ನನ್ನೇ ಅಭಿಮಾನಿಸುತ್ತಾ, ಗೌರವಿಸುತ್ತಾ, ಪ್ರೇಮಿಸುತ್ತಾ....."

"ಅದ್ಸರೀ, ಭಾನೂ, ಸುಶೀಲ ನಿನಗೆಷ್ಟು ಲಾಯರ್ ಫೀಸು ಕೊಟ್ಟಿದಾಳಮ್ಮ?" ಅವಳ ಮಾತು ಮಧ್ಯೆ ತಡೆದು ಕೇಳಿದೆ.

ಒಂದೆರಡು ಘಳಿಗೆ ಮಾತನಾಡದೆ ಸುಮ್ಮನಿದ್ದಳು ಭಾನು. ನಂತರ,

"ಸುಶೀಲ ನಿಜವಾಗೂ ಸುಶೀಲೇನೇ ಕಣೋ. ನಮ್ಮ ಪದಾರ್ಥ ಅಂತ ಹೊಗಳೋಲ್ಲ. ನಾನು ಹುಡುಗಾಟಕ್ಕೆ ಹಾಸ್ಯ ಮಾಡಿದಾಗ ಏನೆಂದಳು ಗೊತ್ತೇ?" ಎಂದು ಕೇಳಿದಳು.

"ಏನೆಂದಳು?"

"ನನಗೆ, ತನ್ನ ರೂಪ ನಿನ್ನ ಗುಣ ಇರೋ ಸೊಸೇನ ಕೊಡ್ತೀನಿ, ಎಂದಳು."

ಭಾನುವಿನ ಮಾತು ಕೇಳಿ ನನ್ನ ಮುಖ ಕೆಂಪಾಯ್ತು. ಲಜ್ಜೆಯಿಂದ ತಲೆತಗ್ಗಿಸದೆ. ಅದೇನೋ ಭಾನು ತುಂಬಾ ಹಿರಿಯ ಮುತ್ತೈದೆಯಂತೆ ಎಲ್ಲ ವಿಷಯಗಳನ್ನು, ಮುಚ್ಚು ಮರೆ ಇಲ್ಲದೆಯೇ ಹೇಳಿಬಿಡುತ್ತಾಳೆ. ಹಾಗೇ ಸುಶೀಲಳತ್ತ ಅಭಿಮಾನವೂ ತುಂಬಿ ಬಂತು.

"ಅದ್ಸರೀ! ಸುಶೀಲ ಯಾರನ್ನ ಕೇಳಿ ನಿನಗೆ ಮಾತು ಕೊಟ್ಟಳು?" ಎಂದೆ.

"ನನಗೇನು ಗೊತ್ತು? ಅವಳನ್ನೇ ಕೇಳು ಹೋಗೋ!" ಎಂದು ಬಿಟ್ಟಳು ಭಾನು.

ಕೊಂಚ ಹೊತ್ತು ಏನೇನೋ ಮಾತುಗಳಾದುವು. ಮಾತಿನ ನಡುವೆ,

"ಭಾವ ಎಲ್ಲೆ ಭಾನು, ಇನ್ನೂ ಬರಲೇ ಇಲ್ಲ?" ಕೇಳಿದೆ.

"ಗಂಟೆ ಎಂಟಾಗ್ತಾ ಬಂತು ಬರ್ತಾರೆ...." ಅನ್ಯಮನಸ್ಕಳಾಗಿ ಹೇಳಿದಳು.

"ಅದ್ಸರಿ, ಅಷ್ಟು ಹೊತ್ತಿನಿಂದ 'ಸುಶೀಲೋಪಾಖ್ಯಾನ' ಹೇಳಿದ್ಯಲ್ಲ, 'ಭಾವ ಪುರಾಣ' ಹೇಳಲೇ ಇಲ್ಲ?"

"ಹೇಳೋದ್ಕಿಂತಾ, ನಾಳೆಯಿಂದ ನೀನೇ ನೋಡ್ತೀಯಲ್ಲಾ?" ನಗುತ್ತಾ ಹೇಳಿದಳು. ಆ ನಗೆ ನಿರ್ಜೀವವಾಗಿತ್ತು. ಗಂಟೆ ಒಂಭತ್ತಾಯಿತೆಂದು ಗಡಿಯಾರ ಢಣ್! ಢಣ್! ಎಂದು ಬಡಿದು ಸೂಚಿಸಿತು. ಊಟಕ್ಕೆಬ್ಬಿಸಿದಳು.

"ಭಾವಾನೂ ಬರ್ಲಿ ಬಿಡಮ್ಮ" ಎಂದೆ. ಮತ್ತೊಂದು ಅರ್ಧಗಂಟೆ ಕಳೆದನಂತರ ಭಾವನವರ ಸವಾರಿ ಚಿತ್ತೈಸಿತು. ಅವರು ದಿನವೂ ಬರುವ ಹೊತ್ತೇ ಅದಂತೆ! ಅವರು ಮಾಡುವ ಕೆಲಸಕ್ಕೆ ಹೊತ್ತು ಗೊತ್ತು ಏನೂ ಇಲ್ಲವೆಂದು ತೋರುತ್ತದೆ. ಹೆಂಡತಿ ಮಕ್ಕಳ ಮೇಲಿನ ಧ್ಯಾನವೂ ಇಲ್ಲದೆ ದುಡಿಯಬೇಕೆ? ಅನ್ನಿಸಿತು.

"ಚೆನ್ನಾಗಿದೀರಾ ಭಾವಾ?" ಎಂದೆ.

"ಹುಂ, ಚೆನ್ನಾಗಿದೀನಿ. ನೀವು ಬರುತ್ತಿರುವಂತೇನೇ ಹಾಸ್ಟಲಿನಲ್ಲಿಳಿಯೋ ಬದಲು ಒಂದೆಂಟು ದಿನ ನಮ್ಮನೇಲಿದ್ದು ಆಮೇಲೆ ಹಾಸ್ಟಲಿಗೆ ಹೋಗಿದ್ದರೆ?" ಎಂದರು.

"ಮೊದಲೇ ಎಲ್ಲಾ ಸಿದ್ಧವಾಗಿತ್ತು ಭಾವಾ. ಸ್ಟೇಷನ್ನಿನಿಂದ ನೇರವಾಗಿ ಹೊರಟು ಹೋದೆ. ಅಲ್ಲದೆ ಪದಾರ್ಥಗಳನ್ನು ಅಲ್ಲಿ ಇಲ್ಲಿ ಅಂತ ಸಾಗಿಸೋದು ವೃಥಾ ಶ್ರಮ. ಅದ್ಸರಿ ಭಾವ ಹತ್ತು ಗಂಟೇ ವರ್ಗೂ ಕೆಲ್ಸಾನೇ? ನೀವು ಬರೋವರ್ಗೂ ಪಾಪ ಭಾನು ಹೆಂಗಸು ಒಬ್ಬಳೇ ಕಾಲ ಕಳೀಬೇಕು" ಎಂದೆ.

"ಏಕೆ? ನಿಮ್ಮ ತಂಗೀಗೆ ಧೈರ್ಯ ಇಲ್ಲ ಅಂದ್ಕೊಂಡ್ರಾ? ಬಂದೆ, ಕೈ ಕಾಲು ತೊಳೆದುಕೊಂಡು ಬರ್ತೀನಿ" ಎಂದು ಅಂಗಳದ ಕಡೆ ನಡೆದ.

ಮುಂದೆ ಎಂತಹ ವಿಶೇಷವಾದ ಮಾತೂ ಮುಂದುವರೆಯಲಿಲ್ಲ.

ಊಟವಾಗುತ್ತಿರುವಂತೆಯೇ ನಿದ್ರೆಯಾವರಿಸಿತು. ನಿದ್ರಿಸುವ ಮುನ್ನ "ಭಾನು ಸುಖವಾಗಿದಾಳೆ ಅಷ್ಟೇ ಸಾಕು" ಎಂದುಕೊಳ್ಳುತ್ತಲೇ ನಿದ್ರಿಸಿದೆ.

ವಾರಕ್ಕೊಮ್ಮೆಯಾದರೂ ಏನಾದರೂ ತೆಗೆದುಕೊಂಡು ಹೋಗಿ ಭಾನುವನ್ನು ಮಾತನಾಡಿಸಿಕೊಂಡು, ಒಂದು ಹೊತ್ತು ಊಟಮಾಡಿಕೊಂಡು ಬರುತ್ತಿದ್ದೆ. ಇದೊಂದು ಅಭ್ಯಾಸವಾಗಿ ಹೋಯ್ತು. ಭಾವನವರ ದರ್ಶನ ಬಹಳ 'ಅಪರೂಪ'ವಾಗಿ ಹೋಯ್ತು. ಅವರು ಮನೆಯಲ್ಲಿರುವ ಹೊತ್ತೇ ಅಪರೂಪ. ಪಾಪ ಭಾನು ಒಬ್ಬಳೇ ಯಾವಾಗಲೂ ಏನಾದರೂ ಓದುತ್ತಲೋ, ಕಸೂತಿ ಹಾಕುತ್ತಲೋ, ಅಥವಾ ಮಗನೊಂದಿಗೆ ಆಡಿಕೊಳ್ಳುತ್ತಲೋ ಇರುತ್ತಿದ್ದಳು. ನನ್ನ ಮುಖ ಕಾಣುತ್ತಿರುವಂತೆಯೇ ಹಾರಿ ಬಂದು,

"ಬಂದೆಯಣ್ಣಾ" ಎಂದು ಆಪ್ಯಾಯತೆಯಿಂದ ಆಹ್ವಾನಿಸುತ್ತಿದ್ದಳು.

"ಈ ಏಕಾಂತ ಏಕೆ ತಡೆಯುತ್ತಿ ಭಾನೂ?" ಎಂದು ಕೇಳಿದರೆ,

"ಏನು ಮಾಡಲಣ್ಣಾ? ಹಣೆಯ ಬರೆಹ?", ಅಸಹಾಯಕ ಉತ್ತರ ಕೊಡುತ್ತಿದ್ದಳು.

* * *

ಎರಡು ಮೂರು ತಿಂಗಳುಗಳಲ್ಲಿ ಒಂದು ಸತ್ಯ ದರಿವಾಯ್ತು.

ಭಾನು ಅಶಾಂತಿಯಿಂದ ತೊಳಲುತ್ತಿದ್ದಾಳೆ – ದುಃಖದಿಂದ ಪರಿತಪಿಸುತ್ತಿದ್ದಾಳೆ – ಸುಖಕ್ಕೆ ದೂರವಾದವಳಂತೆ ಅತಿ ಪ್ರಯಾಸದಿಂದ ದಿನಗಳನ್ನು ಕಳೆಯುತ್ತಿದ್ದಾಳೆ, ಬರಸಿಡಿಲೆರಗಿದಂತೆ ತಲ್ಲಣಿಸಿದೆ. ಭಾನು ಅಶಾಂತಿಯ ಪಾಲಾಗಬೇಕೆ? ದುಃಖದ ಭಾರದಿಂದ ಕುಗ್ಗಬೇಕೇ? ಕಾರಣವೇನಿರಬುಹುದು? ಎಷ್ಟು ಯೋಚಿಸಿದರೂ ಏನೂ ತೋಚಲಿಲ್ಲ. ಭಾನು ಮಾತ್ರಾ ತುಂಬಾ ಬದಲಾಯಿಸಿ ಹೋಗಿದ್ದಾಳೆ. ಅನ್ಯಮನಸ್ಕತೆಯಿಂದ, ಉದಾಸೀನತೆಯಿಂದ, ಯಾವುದೂ ತನಗೆ ಸಂಬಂಧಿಸದಂತೆ ವರ್ತಿಸುತ್ತಿದ್ದಾಳೆ. ಭಾವ ಏನೋ ಕೇಳುತ್ತಾನೆ, ಅವಳು ಕೊಡುತ್ತಾಳೆ. ಇಲ್ಲವೇ ಕ್ಲುಪ್ತವಾಗಿ ಉತ್ತರಿಸುತ್ತಾಳೆ – ಅಷ್ಟೇ! ಗಂಡ ಹೆಂಡಿರು ಸಾಧಾರಣವಾಗಿ ಸರಸದಿಂದ ಸಲಿಗೆಯಿಂದ ಮಾತನಾಡಿದ ಸಂದರ್ಭವನ್ನು ನಾನು

ನೋಡಲೇ ಇಲ್ಲ. ಮುದ್ದು ಮುದ್ದಾಗಿ ಮಾತನಾಡುತ್ತಾ ಬುಗರಿಯಂತೆ ಮನೆ ಎಲ್ಲಾ ಓಡಾಡುವ ಮಗುವನ್ನು ಇಬ್ಬರೂ ಆಡಿಸುವುದಾಗಲೀ, ಮುದ್ದಿಸಿದ್ದನ್ನಾಗಲೀ ಏನನ್ನೂ ನಾನು ಕಾಣೆ. ತಂದೆಯಾದವನು ಮಗವನ್ನು ಒಂದು ದಿನವಾದರೂ ಎತ್ತಿಕೊಂಡು ತಿರುಗಾಡಿದ್ದನ್ನು ನಾನು ನೋಡಲಿಲ್ಲ. ಭಾನು – ರಾಜಶೇಖರರ ಜೀವನದಲ್ಲಿ ಅನುರಾಗವಾಗಲೀ, ಅಂತಃಕರಣವಾಗಲೀ, ಅಭಿಮಾನವಾಗಲೀ ಯವುದನ್ನೂ ಕಾಣಲಿಲ್ಲ.

ಛೆ! ಅವರನ್ನು ನಾನೇ ಅಪಾರ್ಥ ಮಾಡಿಕೊಂಡಿದ್ದೆನೋ ಏನೋ? ಅವರ ಸಂಸಾರದಲ್ಲಿ ನಾನು ಊಹಿಸುವ ಶಂಕೆಯ ಸುಳಿವೂ ಇಲ್ಲದಿರಬಹುದು. ಅವರೂ ಎಲ್ಲರಂತೆ ನಿಷ್ಕಳಂಕರಾಗಿ ಶಾಂತಿಯಿಂದ ಜೀವನ ನಡೆಸುತ್ತಿರಬಹುದು. ಹಾಗಿದ್ದರೆ, ಸುಖವಾದ ಗೃಹಿಣಿಯ ಮುಖದ ಮೇಲಿರಬೇಕಾದ ಕಿರುನಗೆಯಾಗಲೀ, ಸಂತಸದ ಸುಳಿವಾಗಲೀ ಏಕೆ ಕಾಣ್ತಿಲ್ಲ? ಕಾಂತಿಯ ಆಗರವಾಗಿರಬೇಕಾದ ಆ ಕಣ್ಣುಗಳಲ್ಲಿ ದೈನ್ಯತೆ ಏಕೆ ಕರಗದ ಮಂಜಿನಂತಿದೆ? ಯಾವಾಗಲೂ ಬಾನಾಡಿಯಂತೆ ಹಾಡುತ್ತಾ, ಮಯೂರಿಯಂತೆ ನಲಿಯುತ್ತಾ, ಜಿಂಕೆಯಂತೆ ಜಿಗಿಯುತ್ತಿದ್ದ ಭಾನು, ಭಾರ ಹೊತ್ತ ಎತ್ತಿನಂತೆ ಏಕಿದ್ದಾಳೆ? ಸಂತಸದ ಸಂಭ್ರಮವಿರಬೇಕಾದ ಮನೆಯಲ್ಲಿ ಮಸಣ ಮೌನವೇಕೆ?

ಭಾನುವನ್ನೇ ಕೇಳಿದರೆ?

ಏನೆಂದು ಕೇಳುವುದು?

ನನ್ನ ಅನುಮಾನ ಅನುಮಾನವಾಗೇ ಉಳಿದರೆ?

ಭಾನು ಏನಾದರೂ ತಿಳಿದುಕೊಂಡು ದುಃಖಿಸಿದರೆ?

* * *

ಶನಿವಾರದ ದಿನ ಸಂಜೆ ನಾನು ಭಾನುಮತಿಯ ಮನೆಗೆ ಹೋದಾಗ ಭಾವನವರು ಮನೆಯಲ್ಲಿಯೇ ಇದ್ದರು. ಗಂಡ ಹೆಂಡತಿ ಸಲಿಗೆಯಿಂದ ಮಾತನಾಡುತ್ತಿದ್ದುದನ್ನು ನೋಡಿ ಆಶ್ಚರ್ಯಗೊಂಡೆ.

"ಏನು ರಾಯರೇ! ಸೋಜಿಗ ನೋಡುತ್ತಿರುವಂತೆ ನಿಂತುಬಿಟ್ಟಿರಲ್ಲಾ?"

"ಅದೇ...ಅದೇ...ನಿಮ್ಮನ್ನೇ!" ಎಂದು ನಕ್ಕೆ. ಅದೇನೋ ಭಾವ ನಿಧಾನದಿಂದಿದ್ದ. ಸಂಭ್ರಮದಿಂದ ಮಾತನಾಡುತ್ತಿದ್ದ.

"ಅಲ್ಲಾ...ನೀವು ಸಕಲ ವಿದ್ಯಾ ಪ್ರವೀಣರಾಗುವವರೆಗೂ ಮದುವೆಯಾಗುವುದಿಲ್ಲವೆ? ಆ ಪುಣ್ಯವಂತೆ ಯಾರೋ ಸುಖವಾಗಿರುತ್ತಾಳೆ. ನಿಮ್ಮ ಮದುವೆಗೆಂದು ಒಂದೆಂಟು ದಿನ ರಜ ಹಾಕಿ ಬಂದು ಹಾಯಾಗಿರೋಣ ಅಂದ್ರೆ..."

ಭಾವ ಮಾತು ಮುಗಿಸುವುದರಲ್ಲಿಯೇ ಭಾನು ಅಡ್ಡಿ ಬಂದು,

"ಅದಕ್ಕೇನು ಬಂತು ಭಾಗ್ಯ? ಒಂದು ನೂರು ರೂಪಾಯಿ ಬಿಸಾಡಿದರೆ, ಹೋಟಲಿನವನು ಸಾಕು ಸಾಕು ಅನ್ನುವವರೆಗೂ ಉಪಚರಿಸುತ್ತಾನೆ. ಅಲ್ಲವೇನಣ್ಣಾ?" ಎಂದಳು ಭಾನು.

"ಅಣ್ಣ ಅಲ್ಲ ಅಕ್ಕ ಅಂತ ಕರಿ. ನಿಮ್ಮಣ್ಣನೂ ಒಬ್ಬ ಗಂಡಸು ಅಂದ್ಕೊಂಡ್ಯಾ?"

"ಪರವಾಗಿಲ್ಲ, ನಿಮ್ಮ ಜಾತೀನ ನೀವು ಚೆನ್ನಾಗಿ ಪತ್ತೆ ಹಚ್ಚೀರಿ."

"ಅದ್ಸರಿ, ಚಮತ್ಕಾರ ಬುದ್ಧಿವಂತಿಕೆ ಎಲ್ಲಾ ನಿಮ್ಮ ಅಣ್ಣ ತಂಗಿಯರ ಸೊತ್ತು ಅಂದುಕೋಬೇಡಿ. ನಿಮ್ಮಣ್ಣನಿಗಿರೋ ಅಷ್ಟು ಹಣ ನನಗಿದ್ದಿದ್ರೆ, ಮನೇಲಿ ಒಂದು ಕಾರು, ಕಾರಿನಲ್ಲಿ...."

"ಹುಂ! ಮನೇಲೊಂದು ಕಾರು, ಕ್ಲಬ್ಬಿನಲ್ಲಿ ಒಂದ್ಕಾರು."

"ಅಲ್ವೆ, ನಿಮ್ಮಣ್ಣನ ಹಾಗೆ, ಹೆಂಗಸಿನ ಹಾಗೆ ಹರಟೆ ಹೊಡೀತಾ ಕೂತಿರ್ತಿದ್ನೆ?"

ವಾದ ವಿವಾದದಲ್ಲೇ ಒಂದು ಗಂಟೆ ಕಳೆಯಿತು.

"ನಾಳೆ ಎಲ್ಲಾದ್ರೂ ಪಿಕ್ನಿಕ್ ಹೊರಡ್ತೀಯಾ?" ಎಂದ.

ಭಾನುವಿನ ಮುಖದಲ್ಲಿ ಸಂತೋಷ ಚಿಮ್ಮಿದ್ದು ಸ್ಪಷ್ಟವಾಗಿ ಕಂಡುಬರುತ್ತಿತ್ತು. ಎಷ್ಟು ಹೊತ್ತಿಗೆ ಹೊರಡುವುದು? ಏನೇನು ತೆಗೆದುಕೊಂಡು ಹೋಗುವುದು? ಹಿಂದಿರುಗುವುದು ಯಾವಾಗ? ಮುಂತಾದುವನ್ನೆಲ್ಲಾ ಚರ್ಚಿಸಿದೆವು. ಭಾವನವರಿಗೆ ಪುಳಿಯೋಗರೆ ಬೇಕಂತೆ, ನಾನು ಹೋಳಿಗೆ ಎಂದೆ. ಭಾನುವಿಗೆ ಕೊಬ್ಬರಿ ಮಿಠಾಯಿ ಎಂದರೆ ಪ್ರಾಣ, ಕೊನೆಗೆ ಮೂರನ್ನೂ ಸ್ವಲ್ಪ ಸ್ವಲ್ಪ ಮಾಡಬೇಕೆಂದು ನಿರ್ಣಯಿಸಿದೆವು. ಹಾಸಿಗೆಯ ಮೇಲೆ ತಲೆಯೂರುವವರೆಗೂ ನಮ್ಮ ಮಾತು ನಡೆದೇ ಇತ್ತು. ಆದರೂ ಭಾನು ಸಂತೋಷದಿಂದಿದ್ದಾಳೆಂದು ನಂಬಲು ನನ್ನ ಮನಸ್ಸು ಹಿಂಜರಿಯುತ್ತಿತ್ತು.

ಭಾನುಮತಿ ಬೆಳಗಿನ ಝಾವ ಮೂರುಗಂಟೆಗೇ ಎದ್ದಿರಬಹುದು. ಒಲೆಹೊತ್ತಿಸಿ ಏನೇನೋ ಮಾಡುತ್ತಿದ್ದಳು. ದೀಪ ಹತ್ತಿಸಿ ನನ್ನ ಮಂಚದ ಮುಂದೆಯೇ ಓಡಾಡುತ್ತಿದ್ದುದರಿಂದ ಎಚ್ಚರವಾಯ್ತು.

"ಭಾನು ಯಾವಾಗೆದ್ದೆ?" ಕೇಳಿದೆ.

"ಅಯ್ಯೋ! ನಿನಗ ಎಚ್ಚರವಾಗಿ ಹೋಯ್ತೇನೋ? ಇನ್ನು ಈ ಕಡೆ ಬರೋಲ್ಲ ಮಲಗಿಕೋ" ಎಂದು ಹೇಳಿ ದೀಪವಾರಿಸಿ ಹೊರಟು ಹೋದಳು. ಮುಖದ ತುಂಬು ಮುಸುಗೆಳೆದರೂ ನಿದ್ರೆ ಮಾತ್ರಾ ಹತ್ತಲಿಲ್ಲ. ಮಲಗಿ ಹೊರಳಾಡಲು ಮನಸಾಗಲಿಲ್ಲ. ಪಾಪ! ಭಾನು ಒಬ್ಬಳೇ ಎದ್ದು ಕೆಲಸ ಮಾಡುತ್ತಿದ್ದಾಳೆ. ಏನಾದರೂ ನನ್ನ ಕೈಲಾದ ಸಹಾಯ ಮಾಡಬೇಕೆನ್ನಿಸಿತು. ಆದರೆ ನನಗೆ ಏನು ಕೆಲಸವೂ ಬರದು. ಆದರೂ ಎದ್ದು ಹೋಗಿ ಕುಳಿತುಕೊಂಡೆ.

"ಇಷ್ಟು ಬೇಗ ಏಕೆದ್ಯೋ?" ಅಕ್ಕಿ ತೊಳೆಯುತ್ತಾ ಕೇಳಿದಳು ಭಾನು.

"ಏನೋ ನಿದ್ರೆ ಬರಲಿಲ್ಲ ಭಾನು. ನಿನ್ನ ಜೊತೆಗಾದ್ರೂ ಇರೋಣ ಅಂತ ಎದ್ದೆ" ಎಂದೆ.

"ಹುಂ. ಒಳ್ಳೆಯೋನು. ಹೋಗಲಿ ತೆಂಗಿನಕಾಯಿ ತುರೀತಿಯಾ?" ಎಂದಳು.

ಆಗೋಲ್ಲ ಎನ್ನಲಾರದೆ ಎದ್ದು ಹೋಗಿ ಮುಖ ತೊಳೆದ ಶಾಸ್ತ್ರ ಮಾಡಿದೆ. ಇಲ್ಲದಿದ್ದರೆ ಅಂತರಾತ್ಮ ಅಯ್ಯೋ, ಅನ್ನುತ್ತದಲ್ಲ! ತೆಂಗಿನಕಾಯಿಗಳನ್ನೊಡೆದು ಎಳೆನೀರನ್ನೆಲ್ಲಾ ಕುಡಿದೆ. ಭಾನು ಕೆಲಸಮಾಡುತ್ತಲೇ ಮಾತನಾಡುತ್ತಿದ್ದಳು.

"ಕಾಯಿ ತುರಿದಾಯ್ತೆ? ಈ ಏಲಕ್ಕಿ ಸುಲಿದು ಪುಡಿಮಾಡಿಬಿಡು. ಹಾಗೇ ಈ ಗೋಡಂಬಿಯನ್ನೂ ಬಿಡಿಸಿಬಿಡು. ಹುಂ ಬೇಗ ಬೇಗ ಮಾಡು?" ಎಂದಳು.

"ಸರೀಹೋಯ್ತೇ ತಾಯಿ? ಬೆಳಗಾಗೋ ಹೊತ್ತಿಗೆ ನನಗೆ ಅಡಿಗೇನೆಲ್ಲಾ ಕಲಿಸೊ ಹಾಗಿದ್ಯೆ!" ಎಂದು, ನಿಧಾನವಾಗಿ ತೆಂಗಿನಕಾಯಿ ತುರಿಯುತ್ತಿದ್ದೆ.

"ಒಳ್ಳೇದೇ ಆಯ್ತು. ನಿನ್ನ ಹೆಂಡತಿಗೆ ಸುಖವಾಗುತ್ತೆ" ನಗುತ್ತ ಹೇಳಿದಳು ಭಾನು.

"ಅದ್ಸರಿಯಮ್ಮ! ಅವಳು ಸುಖಪಡ್ಲಿ ಅಂತ ನನ್ನ ಕಷ್ಟಪಡು ಅಂತೀಯಾ?"

"ನಾಳೆ ನೀನು ಸುಖಪಡ್ಲಿ ಅಂತ ಅವಳು ಕಷ್ಟಪಡೋಲ್ವೆ?"

"ಊಂ! ಅದೇನೋಮ್ಮ ಒಟ್ಟಿನಲ್ಲಿ ನೀನು ನಿನ್ನೆಯ ದಿನದಿಂದ ತುಂಬಾ ಮಾತಾಡ್ತೀದಿ!" ನಗುತ್ತಲೇ ಹೇಳಿದ.

"ಅದ್ಸರಿ ಕೇಶು! ಗಂಡ ಹೆಂಡತಿ ವರ್ಷಕ್ಕೊಂದು ದಿನಾನಾದ್ರೂ ಅಡಿಗೇ ಮನೇಲಿ ಕೂತ್ಕೊಂಡು ಮಾತಾಡುತ್ತ ಕೆಲ್ಸ ಮಾಡ್ತಿದ್ರೆ ಚೆನ್ನಾಗಿರುತ್ತಲ್ವೆ?"

ಆ ಪ್ರಶ್ನೆ ಕೇಳಿದ ಅವಳ ಮುಖದಲ್ಲಿ ಅಪೂರ್ವ ಆಶಾ ಜ್ಯೋತಿಯೊಂದು ಹೊಳೆಯಿತು.

"ಅದನ್ನು ವಿವರಿಸಬೇಕೇ ಭಾನೂ! ಹಾಗಾದ್ರೆ ಹೋಗಿ ಭಾವನ್ನ ಎಬ್ಬಿಸಿಕೊಂಡು ಬರ್ಲಿ?"

"ಹುಂ, ಹುಂ, ಎಬ್ಬಿಸಪ್ಪ! ಏಕಪ್ಪ ನಿನ್ನ ಹಲ್ಲುಗಳು ಗಟ್ಟಿಯಾಗಿರೋದು ಇಷ್ಟವಿಲ್ಲವೆ?" ನಗುತ್ತ ಕೇಳಿದಳು ಭಾನು.

"ಭಾಪ್‌ರೇ! ನಿಮ್ಮೆಜಮಾನರಿಗೆ ಸ್ವಲ್ಪ ಕುದುರೆ ಗುಣನೂ ಇದೇಂತೀಯಾ?" ಎಂದೆ. ಅಷ್ಟರಲ್ಲಿ ಏನೋ ನೆನಪಿಗೆ ಬಂದು, "ಹೌದು, ಭಾನು ಇಷ್ಟೊಂದು ಕೆಲಸ ಯಾವಾಗ ಕಲಿತೆ? ನಿಮ್ಮಮ್ಮನ ಮನೇಲಿದ್ದಾಗ ಕಾಫಿ ಕಾಯಿಸೋಕೂ ಬರ್ತಿರ್ಲಿಲ್ಲ... ಏಳು ಗಂಟೆಗೆ ಅಲಾರಂ ಕೊಟ್ರೂ ಏಳ್ತಿರ್ಲಿಲ್ಲ?... ಮುಚ್ಚಿದ ಮುಸುಕು ತೆಗಿತಿರ್ಲಿಲ್ಲ. ಈಗ ನೋಡಿದರೆ...."

"ಇಷ್ಟು ದಿನಗಳ ನಂತರ ನನ್ನ ಬುದ್ಧೀನ ಮೆಚ್ಚೋನು ನೀನೊಬ್ಬ ಸಿಕ್ಕಿದೆ. ನನಗೆ ಪುನರ್ಜನ್ಮ ಬಂದಂತಾಯ್ತು."

ಅವಳ ಮಾತಿಗೆ ಅಡ್ಡಿಯಾಗಿ,

"ಅದೇನೇ ಭಾನು? ಅಷ್ಟೊಂದು ನಿರಾಸೆ ಮಾತಾಡ್ತಿದೀ?" ಎಂದೆ. ನನ್ನ ಪ್ರಶ್ನೆಗೆ ಉತ್ತರಿಸದೆಯೇ.

"ಅದ್ಸರಿ, ಯಾಲಕ್ಕಿ ಪುಡಿ ಮಾಡಿದ್ಯಾ? ಗೋಡಂಬಿ ಬಿಡಿಸಿದೆಯಾ? ಅಯ್ಯೋ ಇದೇನು ತೆಂಗಿನಕಾಯಿ ತುರಿಯೋದೋ? ಒಳ್ಳೆ ಉಪ್ಪೇರಿಗೆ ಆಗೋ ಹಾಗೆ ತುರಿದಿದ್ದೀ?" ಆಕ್ಷೇಪಣೆಯಂತೆಯೇ ಮಾತನಾಡಿದಳು. ನಾನು ಹುಸಿಮುನಿಸಿನಿಂದ ಕುಳಿತೆ. ಪಾಪ ತಾನೇ ನನ್ನ ಅಧ್ವಾನ್ನದ ಕೆಲಸಾನೆಲ್ಲಾ ಸರಿಪಡಿಸಿಕೊಂಡಳು.

ಆರು ಗಂಟೆಯ ಹೊತ್ತಿಗೆ ಕ್ಯಾರಿಯರುಗಳಿಗೆ ತುಂಬಿ ಸಿದ್ಧಪಡಿಸಿದಳು. ನನಗೆ ಸ್ನಾನಕ್ಕೆ ನೀರು ತೋಡಿದಳು. ಅಷ್ಟರಲ್ಲಿ ಮಗು ಎದ್ದು ಬಂದ. ಅವನಿಗೂ ಸ್ನಾನ ಮಾಡಿಸಿದಳು. ತಾನೂ ಮಿಂದು ತಿಳಿನೀಲಿಯ ರೇಶಿಮೆಯ ಸೀರೆಯುಟ್ಟು ಶುಭ್ರವಾಗಿ ಸಿದ್ಧಳಾದಳು.

ಭಾವನವರು ಎದ್ದು ಮೈ ಮುರಿಯುತ್ತಾ, ಊರಗಲ ಬಾಯಿ ತೆರೆದು ಆಕಳಿಸುತ್ತಾ ಬಂದರು. ಅವರ ಕೈಗೆ ಬ್ರಷ್ಷು, ಪೇಸ್ಟು ತಂದಿದ್ದಳು. ಅವರು ಸ್ನಾನ ಮಾಡಿ ಫಲಹಾರ ಮುಗಿಸಿ ವರಾಂಡಕ್ಕೆ ಬಂದಾಗ, ಯಾವನೋ ಒಬ್ಬ ಮುಠ್ಠಾಳ ಊರೇ ಸೂರೆ ಹೋಗುತ್ತಿರುವಂತೆ ಓಡಿ ಬಂದ.

"ರಾಜು! ರಾತ್ರಿ ಮೆಯಲಿನಲ್ಲಿ ರಾಮು ಬಂದ ಕಣೋ, 'ಈವತ್ತು ಹೇಗೂ ಭಾನುವಾರ, ರಾಜ ಎದ್ದ ಕೂಡಲೇ ಕರೆದುಕೊಂಡು ಬಾ' ಅಂದ" ಎಂದು ಹೇಳಿದ.

ಅದೇನು ಸಮಾಚಾರನೋ ಏನೋ 'ರಾಮು' ಎಂಬ ಹೆಸರು ಕೇಳುತ್ತಲೇ ಭಾವನವರ ಮುಖ ವಿದ್ಯುದ್ದೀಪದಂತೆ ಹೊಳೆಯಿತು.

"ಏನು ರಾಮು ಬಂದಿದಾನ್ಯೇ! ಎಂತಹ ಸಮಾಚಾರ ಹೇಳಿದ್ನೋ ಮರಿ! ನಡಿ ನಿನ್ನ ಹಿಂದೇನೇ ಬಂದೆ. ಹಾಗೇ ಆ ಮೂರ್ಖನೂ ಬಾ ಅನ್ನು" ಎಂದವನೇ ಒಳಗೆ ಬಂದು, "ಭಾನೂ, ನನ್ನ ಬಟ್ಟೆ ತೆಗೆದಿಡು. ಪ್ರಾಯಶಃ ನಾನು ಮಧ್ಯಾಹ್ನ ಊಟಕ್ಕೆ ಬರೋಕಾಗಲ್ಲ ಅಂತ ಕಾಣತ್ತೆ" ಎಂದು ಏನೋನೋ ಹೇಳುತ್ತಾ ಓಡಾಡುತ್ತಿದ್ದುದನ್ನು ನೋಡಿ ಆಶ್ಚರ್ಯವಾಯ್ತು. ಹಿಂದಿನ ದಿನ ರಾತ್ರಿ ತಾನೇ ಪಿಕ್ನಿಕ್ ಕಾರ್ಯಕ್ರಮ ಹಾಕಿದ್ದು ಮರೆತೇ ಹೋಯ್ತೇ?

* * *

ಇವತ್ತು ತೋಟಕ್ಕೆ ಹೋಗೋಣವೆಂದು ಹೇಳಿದ್ದಿರಿ! ಕ್ಯಾರಿಯರಿಗೆಲ್ಲಾ ಹಾಕಿ ಸಿದ್ಧಮಾಡಿದೆ."

ಹಿಂದು ಮುಂದು ತುಯ್ದಾಡುತ್ತಾ ಸಂಕೋಚಿಸುತ್ತಲೇ ಹೇಳಿದಳು ಭಾನು.

"ದೊಡ್ಡ ಕೆಲ್ಸ ಮಾಡಿದೆ. ತೋಟ ಏನೂ ಒಣಗಿ ಹೋಗೊಲ್ಲ. ಮುಂದಿನವಾರ ಹೋದರಾಯ್ತು. ಏನು ರಾಯ್ರೆ! ಹೋಟಲಿನಿಂದ ಊಟ ತರಿಸಿಕೊಂಡೆವೂಂತ, ಹಾಯಾಗಿ ಕ್ಯಾರಿಯರ್ ತೆಗೆದು ಅಣ್ಣ ತಂಗಿ ಇಬ್ರೂ ಊಟಮಾಡಿ" ನಗುನಗುತ್ತಾ ಹೇಳಿದ ರಾಜಶೇಖರ.

ಅವನ ಮಾತು ಕೇಳಿ ನನಗೆ ತುಂಬಾ ಬೇಸರವಾಯ್ತು. ಆದರೂ ಪ್ರಕಾಶಪಡಿಸದೆ ನಕ್ಕು ಸುಮ್ಮನಿದ್ದೆ. ರಾಜಶೇಖರ ಬಟ್ಟೆ ಹಾಕಿಕೊಂಡು ಹೊರಟುಹೋದ. ಐದು ನಿಮಿಷದಲ್ಲಿ ನಡೆದ ಈ ಹಠಾತ್ಘಟನೆಯಿಂದ ನನಗೆ ತಲೆತಿರುಗಿದಂತಾಯ್ತು. ಸಿಡಿಯುಸಿರೆಳೆದು ತಗ್ಗಿಸಿದ ತಲೆ ಎತ್ತಿ ನೋಡಿದೆ. ಭಾನು ಬಾಗಿಲುವಾಡಕ್ಕೆ ತಲೆಯೊರಗಿಸಿ ಶೂನ್ಯವನ್ನೇ ನೋಡುತ್ತಾ ನಿಂತುಬಿಟ್ಟಿದ್ದಳು. ಕಣ್ಣಿನಿಂದ ಹೊರಬಿದ್ದ ಕಂಬನಿಯ ಹನಿಗಳು ಕರುಣೆಯಿಂದ ಅವಳ ಕೆನ್ನೆ ಚುಂಬಿಸಿ ಕೆಳಗಿಳಿದು ಹೋದುವು. ಅದನ್ನು ನೋಡಿ ನನಗೇಕೋ ಮನಸ್ಸು ಕಸಿವಿಸಿಯಾಯ್ತು.

"ಛೇ! ಇಷ್ಟಕ್ಕೇಕೆ ಅಳಬೇಕು ಭಾನು? ಒಳ್ಳೆ ಹುಡುಗಿ. ಊರಿನಿಂದ ಗೆಳೆಯ ಬಂದನೆಂದರೆ ಎಂಥವನಿಗಾದರೂ ಸಂಭ್ರಮವಾಗುವುದು ಸಹಜ. ಪಿಕ್ನಿಕ್‌ಗೆ ಏನು ಬಂತು ಬಿಡು. ಇನ್ನೊಮ್ಮೆ ಹೋದರಾಯ್ತು. ಭಾವ ಹೇಳಿದ ಹಾಗೆ ಹಾಯಾಗಿ ಕುಳಿತು ಮಾತನಾಡೋಣ." ಸಮಾಧಾನಪಡಿಸುವ ಧ್ವನಿಯಲ್ಲಿ ಹೇಳಿದೆ.

"ನಿನಗೆ ಗೊತ್ತಿಲ್ಲಣ್ಣ. ಅವರು ಸ್ನೇಹಿತರನ್ನು ಕರೆಯಲು ಹೋಗಿಲ್ಲ. ಈ ದರಿದ್ರ ಇಸ್ಪೀಟಿನಿಂದಾಗಿ ನನ್ನ ಸಂಸಾರದಲ್ಲಿ ಸುಖವೇ ಸೊನ್ನೆಯಾಗಿ ಹೋಗುತ್ತಿದೆಯಣ್ಣ.... ನಿನಗೆ ಗೊತ್ತಿಲ್ಲ!" ಕಣ್ಣೊರಿಸಿಕೊಳ್ಳುತ್ತ ಹೇಳಿದಳು.

"ಭಾನೂ!" ಬೆಚ್ಚಿದೆ.

"ಹೌದು ಕೇಶೂ. ನಿನಗೆ ಹೇಗೆ ಹೇಳಲಿ?"

ತನ್ನಷ್ಟಕ್ಕೇ ತಾನೇ ಪಿಕ್ನಿಕ್ ಕಾರ್ಯಕ್ರಮ ಹಾಕಿದ. ಪಾಪ ಹೆಂಡತಿ ಸಂಭ್ರಮದಿಂದ ಅರ್ಧರಾತ್ರಿಯಿಂದ ಎದ್ದು ನಿದ್ದೆಗೆಟ್ಟು ಎಲ್ಲಾ ಸಿದ್ಧಪಡಿಸಿದರೆ.... ಎಲ್ಲವನ್ನೂ ಬೂದಿಯಲ್ಲಿ ಪನ್ನೀರು ಸುರಿದಂತೆ ಮಾಡಿ, ಜೂಜಾಡಲು ಹೋಗೋದೇ? ನನ್ನ ಆಶ್ಚರ್ಯಕ್ಕೆ ಅವಧಿ ಇಲ್ಲವಾಯ್ತು. ರಾಜಶೇಖರ ಹೋದುದಕ್ಕಲ್ಲ, ಭಾನು ಸಹಿಸಿಕೊಂಡಿದ್ದಕ್ಕೆ. ಇಸ್ಪೀಟಾಡುವ ವ್ಯಕ್ತಿಯನ್ನು ಸಹನೆಯಿಂದ ಸಹಿಸುತ್ತಿರುವುದಕ್ಕೆ. ಭಾನುಮತಿ ಮೊದಲಿನಿಂದಲೂ ಅಸಹ್ಯಸಿಕೊಳ್ಳುತ್ತಿದ್ದುದು ಅನೇಕ ವಿಷಯಗಳಲ್ಲಿ ಇಸ್ಪೀಟೂ ಒಂದು.

"ಗಂಡ ಜೂಜುಖೋರನಾದರೆ, ಅದನ್ನು ಸಹಿಸುವ ಶಕ್ತಿ ಯಾವ ಹೆಣ್ಣಿಗೂ ಇರಕೂಡದು" – ಒಮ್ಮೆ ಹೇಳಿದ್ದಳು."ಭಾನೂ! ಅಂತಹ ದೃಢ ತೀರ್ಮಾನ ಕೊಡಬೇಡ, ಈಗಿನ ಕಾಲದಲ್ಲಿ ಇಸ್ಪೀಟಾಡುವುದು ಊಟ ತಿಂಡಿಗಳಂತೆ ಮುಖ್ಯವಾದುದಾಗಿ ಹೋಗಿದೆ. ಅಂತಹ ವಿಷಯಗಳಲ್ಲಿ ಅಸಹ್ಯವನ್ನು ಹೆಚ್ಚಿಸಿಕೊಳ್ಳೋದು ಒಳ್ಳೆಯದಲ್ಲಮ್ಮ!" ಎಂದು ನಾನು ಹೇಳಿದಾಗ, ಒಂದು ರೀತಿಯ ವಿಚಿತ್ರ ದೃಷ್ಟಿಯಿಂದ ನೋಡುತ್ತಾ.

"ಅಣ್ಣ! ಈ ಮಾತು ಮನಃಪೂರ್ವಕವಾಗಿ ಹೇಳುತ್ತಿದ್ದಿಯಾ?" ಎಂದು ಕೇಳಿದಳು.

"ಹಾಗಾದರೆ, ಒಂದು ವೇಳೆ ನಿನ್ನ ಗಂಡನಿಗೆ ಇಸ್ಪೀಟು ತುಂಬಾ ಇಷ್ಟವಾಯ್ತು ಎಂದುಕೋ, ಆಗೇನು ಮಾಡ್ತೀ?"

"ಏನು ಮಾಡ್ತೀನೇ? ಬಿಡಿಸ್ತೀನಿ." ಎಂದಿದ್ದಳು. ಆ ಮಾತಿನಲ್ಲಿ ಅಂತಹ ಬಿಗಿ ಇತ್ತು.

"ಅವನು ನಿನ್ನ ಮಾತು ಕೇಳದಿದ್ರೆ?"

"ಏಯ್, ಇದೇನೋ ಹೀಗಂತೀ? ಗಂಡ ಹೆಂಡತಿ ಅಂದ ಮೇಲೆ ಒಬ್ಬರ ಮಾತನ್ನು ಮತ್ತೊಬ್ಬರು ಕೇಳದಿದ್ದರೆ ಆ ಅನುಬಂಧಕ್ಕೆ ಅರ್ಥವೇ ಇರುವುದಿಲ್ಲ."

ಏನೋ ಹೇಳಬೇಕೆನ್ನಿಸಿತು. ಅದರೆ ಏನು ಹೇಳಬೇಕೆನ್ನುವುದು ಹೊಳೆಯಲಿಲ್ಲ. ಅದೇ ಭಾನು.... ಇಂದು! ಮಂಚದ ಮೇಲೆ ಮಲಗಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ. ನನಗೆ ನಡುಕಬಂದಂತಾಯ್ತು. ಆ ಸಂಸಾರದ ಒಳಗುಟ್ಟೆಲ್ಲಾ ತಿಳಿದಂತಾಯ್ತು. ಭಾನು ಚಿಕ್ಕಂದಿನಿಂದಲೂ ಅತ್ತುದನ್ನು ನಾನೆಂದೂ ನೋಡದಿದ್ದುದು – ನೋಡಿದರೂ ಸಹಿಸದಿದ್ದುದು. ಹತ್ತಿರ ಕುಳಿತು ಮೃದುವಾಗಿ ತಲೆ ಸವರುತ್ತ.

"ಭಾನೂ! ಏಕಮ್ಮಾ ಅಳುತ್ತೀ?" ಎಂದೆ.

ಕೊಂಚ ಹೊತ್ತಿನ ನಂತರ ಕಣ್ಣೊರೆಸಿಕೊಂಡಳು.

"ಅಳು ಒಂದೇ ನನಗೆ ತೃಪ್ತಿ ತರುವುದು ಕಣಣ್ಣ."

ನಾನು ನಿರುತ್ತರನಾದೆ. ಭಾನುಮತಿಯ ಸಂಸಾರದಲ್ಲಿ ಸುಖ, ಸಂತೋಷಗಳಿಗೇ ಬರ. ಅವಳಿಗೆ ಸುಖವಿಲ್ಲ. ನಾನು ಊಹಿಸಿದ ಭಯಗಳೆಲ್ಲಾ ವಾಸ್ತವವಾಗೇ ಇದ್ದುವು. ಅಪ್ರಯತ್ನವಾಗಿ,

"ಭಾನೂ!" ಎಂದೆ. ಏನು ಎನ್ನುವಂತೆ ನೋಡಿದಳು. "ನಿನ್ನ ಬುದ್ಧಿವಂತಿಕೆಯಿಂದ ಭಾವನನ್ನು ತಿದ್ದಲಾರೆಯಾ?" ಎಂದೆ.

"ಅಣ್ಣ! ಚತುರತೆಯಿಂದ ಕಲ್ಲು ಕರಗಿಸಬಲ್ಲೆಯಾ? ಮಾನವರಲ್ಲಿ ಬಂಡೆಯಂಥವರು ಇರುತ್ತಾರೆಂದು ಗೊತ್ತಿರಲಿಲ್ಲ."

"ಭಾನೂ! ನೀನು ದುಡುಕುತ್ತಿದ್ದಿ ತಾಯಿ! ಒಬ್ಬನನ್ನು ನಾವು ಕಲ್ಲು ಎಂದು ಕರೆಯಬೇಕಾದರೆ ಸಾಕಷ್ಟು ಕಾರಣ ಬೇಕು. ಈ ಇಸ್ಪೀಟು ಅತಿ ಸಣ್ಣ ವಿಷಯವಮ್ಮ."

ಭಾನುಮತಿ ನನ್ನ ಮಾತಿಗೆ ಏನುತ್ತರವನ್ನೂ ಅವಳು ಕೊಡಲಿಲ್ಲ. ಮತ್ತೆ ನಾನೇ,

"ಹೋಗಲಿ, ಬದಲಾಯಿಸಲು ನೀನೇನಾದರೂ ಪ್ರಯತ್ನಿಸಿದ್ದೆಯಾ?" ನನ್ನ ಪ್ರಶ್ನೆ ಕೇಳಿ ಅವಳ ಕಣ್ಣಲ್ಲಿ ನೀರಾಡಿತು.

"ನಾನು ಸಂಪೂರ್ಣವಾಗಿ ಸೋತು ಹೋದೆನಣ್ಣ! ನನ್ನ ಗರ್ವಭಂಗವಾಯ್ತು. ಈ ಇಪ್ಪತ್ನಾಲ್ಕು ಗಂಟೆಗಳಲ್ಲಿ ಅನೇಕ ಸತ್ಯಗಳನ್ನರಿತೆ." ಬಿಕ್ಕಳಿಸುತ್ತಲೇ ಹೇಳಿದಳು. "ಅಣ್ಣಾ! ಇಂದಿನವರೆಗೂ ನನ್ನ ಕಷ್ಟ ಸುಖಗಳನ್ನು ನಾನು ಯಾರೊಂದಿಗೂ ಹೇಳಿಕೊಂಡಿರಲಿಲ್ಲ. ಅಮ್ಮ, ಸುಶೀಲರಿಗೂ ತಿಳಿಯದು. ಮನಸ್ಸು ಕಳವಳಗೊಂಡಾಗ, ಎಂದಾದರೂ ನಿನ್ನ ಹತ್ತಿರ ತೋಡಿಕೊಳ್ಳಬೇಕೆನಿಸಿತ್ತು. ನಿನ್ನನ್ನುಳಿದು ನನಗೆ ಯಾರೂ ಇಲ್ಲ. ನಿನ್ನಲ್ಲಿ ಏನೆಂದು ತೋಡಿಕೊಳ್ಳಲಿ! ಹೇಗೆ ಹೇಳಲಿ? ನಾನು ತುಂಬಾ ಹಾಯಾಗಿ, ಸುಖದ ಸುಪ್ಪತ್ತಿಗೆಯಲ್ಲಿಯೇ ಹೊರಳಾಡುತ್ತಿದ್ದೇನೆಂದು ಕನಸು ಕಾಣುತ್ತಿರುವ ನಿನಗೆ ಈ ನಗ್ನಸತ್ಯವನ್ನು ಹೇಗೆ ಹೇಳಲಣ್ಣ?"

ಎಂದವಳೇ ದಿಂಬಿನಲ್ಲಿ ಮುಖ ಹುದುಗಿಸಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಭಾನು ಹೀಗೇಕಾದಳು? ನೋಡುತ್ತಿದ್ದಂತೆಯೇ ಆಶ್ಚರ್ಯ ಅಧಿಕವಾಗುತ್ತಿತ್ತು.

"ಭಾನೂ! ಭಾವ ಯಾವಾಗಲಾದರೂ ಇಸ್ಪೀಟು ಆಡುತ್ತಾರೆಯೆ?" ನಿಧಾನವಾಗಿ ಕೇಳಿದೆ.

"ಯಾವಾಗಲಾದರೂ ಏನು ಬಂತು? ಪ್ರತಿ ದಿನ, ಪ್ರತಿ ಗಂಟೆ, ಪ್ರತಿ ನಿಮಿಷವೂ, ಅವರಿಗೆ ಕ್ಲಬ್ಬೇ ಮನೆ, ಇಸ್ಪೀಟಾಟವೇ ಸಂಸಾರ, ಸ್ನೇಹಿತರೇ ಹೆಂಡತಿ ಮಕ್ಕಳು! ಅವರಿಗೆ ಇನ್ನೇನೂ ಬೇಡ. ಮನೆ, ನರಕ; ಹೆಂಡತಿ–ರಾಕ್ಷಸಿ; ಮಗ–ಶತ್ರು; ಇನ್ನೇನು ಮಾಡ್ತಾರೆ?" ಕೊಂಚ ಹೊತ್ತು ನಾನೂ ಯೋಚಿಸಿದೆ.

"ಭಾನೂ! ನಿನಗೆ ಕಷ್ಟ ನನಗೆ ಗೊತ್ತಮ್ಮ. ಆದರೆ ಒಂದು ವಿಷಯ – ನಾವು ನಮ್ಮ ಪರಿಸ್ಥಿತಿಗಳನ್ನು ಯೋಚಿಸುವಾಗ ಇತರರ ಪರಿಸ್ಥಿತಿಯನ್ನು ಸ್ವಲ್ಪ ಯೋಚಿಸಬೇಕು. ನೋಡಮ್ಮ, ಈ ಆಧುನಿಕ ಯುಗದಲ್ಲಿ ಬಹಳ ಬದಲಾವಣೆ ಇದೆಯಮ್ಮ. ದೇಶ, ಕಾಲ ಪರಿಸ್ಥಿತಿಗಳಿಗನುಗುಣವಾಗಿ ಬದಲಾಗುವ ವಿಷಯಗಳನ್ನು ನಾವು ಕೊಂಚ ಮಟ್ಟಿಗಾದರೂ

ಅಭ್ಯಾಸಮಾಡಿಕೊಳ್ಳಲು ಪ್ರಯತ್ನಿಸಬೇಕು. ಸಿಗರೇಟು, ತಿರುಗಾಟ, ಇಸ್ಪೀಟು ಕ್ಲಬ್ಬು, ಸಿನಿಮಾ, ಡ್ಯಾನ್ಸು – ಇವೆಲ್ಲವೂ ನಾವು ಬಯಸುವ ನವ ನಾಗರೀಕತೆಯ ಪ್ರಭಾವವೇ – ಗೆಳೆಯ ಯಾವನಾದರೂ ಒಂದು ಸಿಗರೇಟು ಕೊಟ್ಟರೆ, ಥ್ಯಾಂಕ್ಸ್ ಎಂದು ಹೇಳಿ ತೆಗೆದುಕೊಳ್ಳದಿದ್ದರೆ ಅದನ್ನು ಅಸಭ್ಯತೆ ಅನ್ನುತ್ತಾರೆ.ಹತ್ತುಜನ ಸೇರಿ ಇಸ್ಪೀಟಾಡೋಣ ಎಂದಾಗ ಹಿಂದೆಗೆದರೆ ಹೇಡಿ, ಮುಟ್ಠಾಳ ಎನ್ನುತ್ತಾರೆ. ರಸ್ತೆಯಲ್ಲಿ ಭೇಟಿಯಾದ ಸ್ನೇಹಿತನನ್ನು ಹೋಟಲಿಗೆ ಕರೆದುಕೊಂಡು ಹೋಗಿ ಕಾಫಿ, ತರ್ಪಣ ಕೊಡದಿದ್ದರೆ ಅವಮಾನ. ಒಂದು ವೇಳೆ ಸಿನಿಮಾ ನೋಡಬೇಕೆನಿಸಿದಾಗ, ಗೆಳೆಯರು ಯಾರನ್ನೂ ಕರೆಯದೆ ಒಂಟಿಯಾಗಿ ಹೋಗುವುದು ನಾಚಿಕೆಕೇಡು.

ಆದುದರಿಂದ ಒಳ್ಳೆಯದೋ ಕೆಟ್ಟದ್ದೋ, ಯಾವುದೋ ಒಂದು. ಏನಾದರೊಂದು ಕೆಲಸ ಅನಿವಾರ್ಯ ಎನ್ನುವ ಪರಿಧಿಯಲ್ಲಿ ಬಂದುಬಿಡುತ್ತದೆ. ಈಗಿನ ಕಾಲದಲ್ಲಿ ಎಲ್ಲವನ್ನೂ ಒಳ್ಳೆಯದೇ ಎಂದು ಅಮೋದಿಸುವ ಗಂಡಸರು ಯಾವುದಕ್ಕೂ ಹಿಂದೆಗೆಯರು. ಕಾಲಾನುಗುಣವಾಗಿ ಒಳ್ಳೆಯದನ್ನಾಗಲೀ ಕೆಟ್ಟದ್ದನ್ನಾಗಲೀ ಅನುಭವಿಸುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು.

"ಹೌದು ಕೇಶು, ನಿಮ್ಮ ಭಾವ ಮದುವೆಯ ಮನೆಯಲ್ಲಿ ಸಿಗರೇಟು ಕೊಡಬಂದಾಗ ತಿರಸ್ಕರಿಸಿದೆ ಎಂದೆ? ನೆನಪಿದೆಯೆ?"

"ಅದಕ್ಕೂ ಇದಕ್ಕೂ ಗಂಟು ಹಾಕಬೇಡ ಭಾನೂ! ಇಬ್ಬರು ವ್ಯಕ್ತಿಗಳು ಒಂದೇ ರೀತಿ ಇರುತ್ತಾರೆಯೆ? ನಡೆವಳಿಕೆ ಒಂದಾಗಿರುತ್ತದೆಯೆ? ನಿನ್ನೆಯ ದಿನ ಭಾವ ನನ್ನನ್ನು ಹುಡುಗಿ ಎಂದು ಹಾಸ್ಯ ಮಾಡಿದ್ದನ್ನು ನೋಡಿದೆಯಲ್ಲಾ? ನಾನು ಸಿಗರೇಟು ಸೇದುವುದಿಲ್ಲವೆಂದೂ, ಇಸ್ಪೀಟು ಆಡುವುದಿಲ್ಲವೆಂದೂ, ನನಗೆ ಎಂತಹ ಆಟಪಾಟಗಳೂ ಬರುವುದಿಲ್ಲವೆಂದೇ ತಾನೇ ಅವರ ಎಣಿಕೆ? ದುರಭ್ಯಾಸಗಳಿಂದ ದೂರವಿರುವವರೆಲ್ಲರೂ ಪ್ರಪಂಚದ ದೃಷ್ಟಿಯಲ್ಲಿ ಅಸಮರ್ಥರು, ಹೇಡಿಗಳು. ಆದುದರಿಂದಲೇ ಅನೇಕ ಮಂದಿ ಏನೋ ದೊಡ್ಡಸ್ತಿಕೆ ಎಂದು ದುರಭ್ಯಾಸಗಳಿಗೆ ಶರಣು ಹೋಗತ್ತಾರೆ. ಅದು ಅವರವರ ಮನೋ ಮಾರ್ಗವನ್ನನುಸರಿಸಿ ರುತ್ತದೆ. ನಾನು ಹೇಳುವುದೇನೆಂದರೆ ಕಾಲದೊಂದಿಗೇ ಹೊಂದಿಕೊಂಡು ಬರುವ ಇಂತಹ ವಿಷಯಗಳನ್ನು ಏನೋ ಅಭ್ಯಾಸಗಳು ಎಂದು ಪರಿಗಣಿಸಬೇಕೇ ವಿನಹ, ಕೆಟ್ಟದ್ದೆಂದು ಚಿಂತಿಸಬಾರದು.

ಹಾಗೆ ನೋಡಿದರೆ, ಭಾನು, ಮಾನ-ಮರ್ಯಾದೆ, ಎಷ್ಟು ಹೆಣ್ಣುಮಕ್ಕಳಿಗಿಲ್ಲಾಮ್ಮ? ಮೈ ಕಾಣುವಂತಹ ನೈಲಾನ್ ಸೀರೆಗಳು, ಮೈಗೆ, ಮುಖಕ್ಕೆ ತುಟಿಗಳಿಗೆ ಎದ್ದು ಕಾಣುವಂತಹ ಬಣ್ಣಗಳು, ಜುಟ್ಟು ಕತ್ತರಿಸಿಕೊಳ್ಳುವುದು, ಗಂಡಸಿಗೆ ತಾವೂ ಸರಿಸಮಾನರೆಂದುಕೊಂಡು ಮೈಗೆ ಮೈ ತೀಡಿಕೊಂಡೇ ತಿರುಗಾಡುವುದು, ಇವೆಲ್ಲವನ್ನೂ ನೋಡುತ್ತಿದ್ದರೆ, ಅವರನ್ನು ಎಷ್ಟು ಅಸಹ್ಯ ದೃಷ್ಟಿಯಿಂದ ನೋಡಬೇಕು?

ಆದರೆ, ಅಂತಹ ದೃಷ್ಟಿಯಿಂದ ನೋಡುತ್ತೇವೆಯೆ? ಕಾಲ ಬದಲಾಗಿದೆ ಭಾನೂ? ವೇಷ ಭೂಷಣಗಳಲ್ಲಿ ಬದಲಾವಣೆ ಬಂದಿದೆ. ಅವರವರ ಇಷ್ಟಾನುಸಾರ ಏನೇನೋ

ಅಲಂಕರಿಸಿಕೊಳ್ಳುತ್ತಾರೆ, ಎಂದುಕೊಂಡು ಸಮರ್ಥಿಸಿಕೊಳ್ಳುವುದಿಲ್ಲವೆ? ಅದೇ ರೀತಿ ಗಂಡಸಿನ ಅಭ್ಯಾಸಗಳೂ – ಆದರೂ ದುರಭ್ಯಾಸಗಳಿಗೆ ಗಂಡಸರು ಮಾತ್ರ ಬಲಿಯಾಗುತ್ತಿದ್ದಾರೆಂದು ಭ್ರಮಿಸುತ್ತಿದ್ದೀ ಭಾನು. ಹಾಗೇ ಗಂಡಸರನ್ನು ಮೀರಿಸುವಂತೆ ಸಿಗರೇಟು ಸೇದಿಕೊಂಡು, ಇಸ್ಪೀಟಾಡುವ 'ಸೊಸೈಟಿ ಲೇಡೀಸ್' ಎಷ್ಟು ಜನರಿದ್ದಾರೆ ಗೊತ್ತೆಮ್ಮ?''

''ಗೊತ್ತು ಕೇಶು! ಅಂತವರಿಲ್ಲವೆಂದು ನಾನು ವಾದಿಸುವುದಿಲ್ಲ. ನಾನು ಹೆಣ್ಣು ಜಾತಿಯ ಅಭಿಮಾನದಿಂದ ಮಾತನಾಡುತ್ತಿಲ್ಲ. ತಪ್ಪು ಯಾರು ಮಾಡಿದರೂ ತಪ್ಪೇ! ಹುಡುಗಿಯರಲ್ಲಿರುವ ಅವಗುಣಗಳನ್ನು ನೀನು ವಿವರಿಸಿದೆಯಲ್ಲಾ? ಅವುಗಳಲ್ಲಿ ಒಂದೂ ನನ್ನಲ್ಲಿಲ್ಲವೆಂದು ಧೈರ್ಯವಾಗಿ ಹೇಳಬಲ್ಲೆ. ಆ ವಿಷಯ ನಿನಗೂ ಗೊತ್ತು. ಮದುವೆಯ ಜವುಳಿಯ ನಡುವೆ ನಿಮ್ಮ ಭಾವ ಒಂದು ನೈಲಾನ್ ಸೀರೆ ತಂದಿದ್ದರು. ಅದನ್ನುಡಲು ನನಗಿಷ್ಟವಿಲ್ಲ. ಆದರೂ ಅವರ ತೃಪ್ತಿಗಾಗಿ ನಾಲ್ಕಾರು ಬಾರಿ ಉಟ್ಟ ಶಾಸ್ತ್ರ ಮಾಡಿದೆ. ಅದು ಇನ್ನೂ ಹಾಗೇ ಇದೆ. ನಾನು 'ಫ್ಯಾಷನ್' ಆಗಿ ಸಿಂಗರಿಸಿಕೊಳ್ಳುವುದಿಲ್ಲವೆಂತಲೂ,. ನಿರಾಡಂಬರಳಾಗಿರುವುದೂ, ನಿಮ್ಮ ಭಾವನವರಿಗಿಷ್ಟವಿಲ್ಲ. ನೀನು ಹೇಳಿದಂತೆ ಸಹನೆಗೂ ಒಂದು ಮಿತಿ ಇರಬೇಕು. ವಿಪರೀತವಾದ ದುರ್ವ್ಯಾಪಾರ, ಅವಗುಣಗಳು ನನಗಿಷ್ಟವಾಗುವುದಿಲ್ಲ. ಯಾವುದಾದರೂ ಮಿತಿಯಲ್ಲಿ ಇರಬೇಕು. 'ಅತಿ ಸರ್ವತ್ರ ವರ್ಜಯೇತ್' ಎನ್ನುತ್ತದೆ ಸುಭಾಷಿತ. ಅಮೃತವಾದರೂ ಅತಿಯಾದಾಗ ವಿಷವಾಗುತ್ತದೆ.

ಹಬ್ಬದ ಒಂದು ದಿನ ಸಂತೋಷದಿಂದ ಗಂಡನೊಂದಿಗೆ ಕಳೆಯಬೇಕು ಎನ್ನುವ ಅತಿ ಸಾಧಾರಣವಾದ ಬಯಕೆಯನ್ನೂ ಈಡೇರಿಸಿಕೊಳ್ಳದಂಥ ದೌರ್ಭಾಗ್ಯದ ಸ್ಥಿತಿಯನ್ನು ಸಹಿಸುವುದು ಹೇಗೆ? ಅರ್ಥರಹಿತವಾದ ಈ ನಾಗರೀಕತೆ, ಸಭ್ಯತೆಗಳನ್ನು ಹೇಗೆ ಸಹಿಸಲಿ?'' – ಮಾತನಾಡುತ್ತಿದ್ದಂತೆ ಕೊಂಚ ನಿಲ್ಲಿಸಿ ಮತ್ತೆ ಆರಂಭಿಸಿದಳು.

''ಒಂದು ವಿಷಯ ಕೇಳಣ್ಣ, ಪರಿಸ್ಥಿತಿ ನಿನಗೇ ಅರ್ಥವಾಗುತ್ತದೆ. ಮೊನ್ನೆ ಸಂಕ್ರಾಂತಿಗೆ ಖಂಡಿತಾ ಬಾ ಎಂದು ಅಮ್ಮ ಕಾಗದ ಬರೆದಿದ್ದಳು. ನಾನು ಹೋಗಲಿಲ್ಲ. ಅಲ್ಲಿನವರೆಗೂ ಒಂದು ಹಬ್ಬವನ್ನೂ ಮಾಡಿರಲಿಲ್ಲ. ಏನೋ ಹಬ್ಬವನ್ನು ಇಲ್ಲಿಯೇ ಆಚರಿಸೋಣವೆನ್ನಿಸಿತ್ತು. ಹಬ್ಬ ಇನ್ನೂ ಎಂಟು ದಿನಗಳಿರುವಾಗಲೇ ಏನೇನೋ ಗಾಳಿ ಗೋಪುರಗಳನ್ನು ಕಟ್ಟಿದೆ. ಮತ್ತೇನೇನೋ ನಿರ್ಣಯಿಸಿಕೊಂಡೆ – ಹಬ್ಬದ ದಿನ ಯಾವ ಯಾವ ಸೀರೆಯುಡಬೇಕು – ಏನೇನು ತಿಂಡಿ ತಿನಿಸುಗಳನ್ನು ಮಾಡುವುದು – ಎಲ್ಲವನ್ನೂ ಒಂದು ಪಟ್ಟಿ ಬರೆದಿರಿಸಿಕೊಂಡೆ. ಅವರಿಗೆ ಎಲ್ಲಾ ತಿಳಿಸಿದೆ.

''ಹಬ್ಬದ ದಿನ ಹೊಸ ಹೊಸ ತಿಂಡಿಗಳನ್ನು ಮಾಡುತ್ತೇನೆ. ತಿಂದು, ಹಾಯಾಗಿ ಮಾತನಾಡುತ್ತಾ ಕುಳಿತುಕೊಳ್ಳೋಣ. ಸಂಜೆ ಎಲ್ಲಿಗಾದರೂ ತಿರುಗಾಡಲು ಹೋಗೋಣ. ಇದೊಂದು ಹಬ್ಬವನ್ನು ಸಂತೋಷದಿಂದ ಮಾಡಬೇಕೆನಿಸಿದೆ. ನಿಮ್ಮನ್ನು ನಾನು ಯಾವಾಗಲೂ ಏನೂ ಕೇಳಿಲ್ಲ. ಹಬ್ಬದ ದಿನ ಮಾತ್ರ ನೀವು ಮನೆಯಲ್ಲಿಯೇ ಇರಬೇಕು.

ನನಗೋಸ್ಕರ ಇರ್ತೀರಾ?" – ಅದೊಂದೇ ಕೋರಿಕೆಯನ್ನು ಅಂಗಲಾಚಿ ಕೇಳಿದೆ. ನೋಡಣ್ಣ! ಹೆಂಡತಿಯಾದವಳು ಅಷ್ಟೊಂದು ಗೋಗರೆಯುವ ಅಗತ್ಯವೇ ಇರಕೂಡದು. ಸಂಸಾರಿಯಾದವನಿಗೆ ಎಲ್ಲ ಯೋಚನೆಯೂ ಇರಬೇಕು. ಅವರು ನನ್ನ ಮಾತಿಗೆ ಏನು ಉತ್ತರವನ್ನೂ ಕೊಡಲಿಲ್ಲ. ಬದಲಾಗಿ ನಕ್ಕರು. ನನ್ನ ಕೋರಿಕೆಯನ್ನು ತಳ್ಳಿ ಹಾಕರು ಎಂದು ಕೊಂಡೆ. ಭೋಗಿ ಹಬ್ಬದ ದಿನವನ್ನು ಅತಿ ಸಂಭ್ರಮದಿಂದಲೇ ಪ್ರಾರಂಭಿಸಿದೆ. ಎಲ್ಲರೂ ಎರೆದುಕೊಂಡೆವು. ಉಪಹಾರದ ನಂತರ ದಿನಪತ್ರಿಕೆ ಓದುತ್ತಿದ್ದರು. ನಾನು ಅಡಿಗೆಗಾರಂಭಿಸಿದೆ. ಒಂದು ಅರ್ಧಗಂಟೆಯ ಕಾಲ ಕಳೆದಿರಬಹುದು. ಅಡಿಗೆಯ ಮನೆಯ ಬಾಗಿಲ ಹತ್ತಿರ ಬಂದು,

"ಹೊತ್ತೇ ಹೋಗುತ್ತಿಲ್ಲ ಕಣೇ!" ಎಂದರು.

"ಬಂದೆ. ಒಂದು ಕಾಲು ಗಂಟೆ ಕುಳಿತಿರಿ, ಬಂದು ಬಿಡುತ್ತೇನೆ" ಎಂದೆ.

"ಕಟ್ಟಿ ಹಾಕಿದಂತೆ ಮನೆಯಲ್ಲಿಯೇ ಕುಳಿತಿರಲು ಬೇಜಾರಾಗುತ್ತದೆ. ಹೊರಗೆ ಹೋಗಿ ಬಂದುಬಿಡುತ್ತೇನೆ" ಎಂದರು.

ಅವರ ಮಾತು ಕೇಳಿ ಆಶ್ಚರ್ಯದಿಂದ ತಲೆ ಎತ್ತಿ ನೋಡಿದೆ.

"ಈಗ ನೀವು ಹೊರಗೆ ಹೋದರೆ ಬಂದ ಹಾಗೇ! ಕೊನೆಗೆ ಈ ಹಬ್ಬದ ದಿನವಾದರೂ...!"

"ನಿನ್ನ ಗೋಳಿಗಿಷ್ಟು, ಹಬ್ಬದ ದಿನ ಅಂತಾನೇ ಹತ್ತು ಜನಸೇರುತ್ತಾರೆ. ಕೈ ಕಟ್ಕೊಂಡು ನಿನ್ಮುಂದೆ ಕೂತ್ಕೊಂಡು ಏನ್ಮಾಡ್ಬೇಕು?" ಎಂದರು.

ಮನೆಯಲ್ಲಿ ಕುಳಿತು ಏನು ಮಾಡುವುದಂತೆ? ಬೇರೆಯವರೆಲ್ಲಾ ಏನುಮಾಡುತ್ತಾರೆ? ಅಂದಿನಿಂದ ಹೇಳಿದ್ದೆಲ್ಲಾ ಹೊಳೆಯಲ್ಲಿ ಹೋಮವಾಯ್ತೆ? ಅಸಹನೆ ಉಕ್ಕಿಬರುತ್ತಿದ್ದರೂ ತಡೆದುಕೊಂಡು,

"ಅಲ್ಲಾಂದ್ರೆ, ನಾವಿಬ್ಬರಿದ್ದರೂ ಹೊತ್ತು ಹೋಗೊಲ್ಲ ಅಂತೀರಿ. ನೀವು ಹೊರಗೆ ಹೋದರೆ ನಾನೊಬ್ಬಳೇ, ನನಗೆ ಹೇಗೆ ಹೊತ್ತು ಹೋಗುತ್ತೆ?" ಎಂದು ಕೇಳಿದೆ.

"ಹುಂ! ಅದಕ್ಕೋಸ್ಕರ... ನನ್ನನ್ನು ಕಾವಲು ಕಾಯಿ ಅಂತೀಯಾ? ಹೊತ್ತು ಹೋಗದಿದ್ರೆ ನೆರೆಮನೆಗೆ ಹೋಗಿ ಹರಟೆ ಕೊಚ್ಚು!"

ಆ ಹರಿತವಾದ ಮಾತು ಕೇಳಿ ನನ್ನ ಕಣ್ತುಂಬಿ ಬಂತು.

"ಮನೆಯ ಯಜಮಾನರು – ನೀವು ಹೊರಗೆ ಸುತ್ತಲು ಹೋದಾಗ ನಾನು ಅವರಿವರನ್ನು ಹಲ್ಲುಕಿರಿದು ಮಾತನಾಡಿಸುತ್ತಾ ಅಲೆಯಲೆ? ಹಬ್ಬದ ದಿನ ನಾವಿಬ್ಬರೂ ಮನೆ ಬಾಗಿಲು ಹಾಕಿಕೊಂಡು ಅವರಿವರ ಮನೆ ಬಾಗಿಲು ಕಾಯಲು ಹೋಗೋದು ಚೆನ್ನಾಗಿರತ್ಯೆ? ಎಲ್ಲರ ಮನೆ ಗಂಡಸರೂ ಮನೇಲಿರೊಲ್ವೆ? ನಾವು ಸಂತೋಷದಿಂದ ಹಬ್ಬ ಮಾಡುವ ಹಂಬಲ ತೀರೋದು ಯಾವಾಗಂದ್ರೆ?"

"ಲೇ! ನಿನ್ನ ಮಾತಿಗೆ ನೀನೇ ಸಂತೋಷಪಡಬೇಕು. ನಿನಗೆಲ್ಲಿ ಹೋಗೋಕೂ ಇಷ್ಟವಿಲ್ದಿದ್ರೆ ಮಗನನ್ನು ಮುಂದೆ ಕೂಡಿಸಿಕೊಂಡು ಮನೇಲಿರು. ಹೆಂಗಸಿನ ಹಾಗೆ ಮನೇಲಿರೋಕೆ ನನ್ನ ಕೈಲಾಗೊಲ್ಲ."

"ನಾನು ಏನುತ್ತರವನ್ನೂ ಕೊಡಲಿಲ್ಲ. ತರಕಾರಿಯನ್ನು ಹೆಚ್ಚುತ್ತಾ ತಲೆತಗ್ಗಿಸಿದೆ. ಕಣ್ಣಿನಿಂದ ನೀರು ಕಾರಂಜಿಯಂತೆ ಉಕ್ಕಿಬಂತು. ತನಗಾಗಿ ಹಂಬಲಿಸುವ ಹೆಂಡತಿ ಮಕ್ಕಳನ್ನು ತಿರಸ್ಕರಿಸಿ, ಬೀದಿಯಲ್ಲಿ ಹೋಗೋ ಬಿಕನಾಸಿಗಳತ್ತ ಬಾಯಿಬಿಡುವ ಈ ಗೃಹಸ್ಥರನ್ನು ಏನೆನ್ನುವುದು? ಹಬ್ಬದ ದಿನವಾದರೂ ಮನೆಯಲ್ಲಿರಲಿ ಎಂದು ಬಯಸುವುದು ತಪ್ಪೆ? ನನ್ನವರೊಂದಿಗೆ ನಾನು ಸಂಭ್ರಮ ಸಂತೋಷಗಳಿಂದ ಹಬ್ಬವಾಚರಿಸಬೇಕೆನ್ನುವುದು ಅನ್ಯಾಯವೇ? ಅಂಥ ಅತಿ ಸಾಧಾರಣ ಕೋರಿಕೆಯನ್ನೂ ತೀರಿಸಿಕೊಳ್ಳಬಾರದೆ?"

* * *

ತುಂಬಿ ಬರುತ್ತಿದ್ದ ಕಣ್ಣನ್ನು ಒರೆಸಿಕೊಳ್ಳುತ್ತಾ ಮಗುವನ್ನು ಹತ್ತಿರ ಕೂಡಿಸಿಕೊಂಡು ಕುಳಿತೆ. ಹತ್ತು, ಹನ್ನೆರಡು... ಮೂರು... ಐದು... ಎಂಟು... ಹನ್ನೊಂದು! ರಾತ್ರಿ ಹನ್ನೊಂದು ಗಂಟೆಗೆ ಬಂದರು! ಎದ್ದು ಬಡಿಸಿದೆ. ಬೆಳಿಗ್ಗೆ ಮಾಡಿದ್ದ ಚಿತ್ರಾನ್ನ, ಮೈಸೂರು ಪಾಕು, ಎಲ್ಲವೂ ಹಾಗೇ ಇದ್ದುವು. ನಾನು ಅವುಗಳ ರುಚಿಯನ್ನೂ ನೋಡಿರಲಿಲ್ಲ. ಸಧ್ಯ, ಮನೆಗೆ ಬಂದರಲ್ಲ ಎನ್ನುವ ಸಂತೋಷದಿಂದ ಬಡಿಸಿದೆ. ಆ ಸಂತೋಷವಾದರೂ ಏಕಿರಬೇಕು ಎನ್ನುವಂತೆ, ಕೈ ಮೇಲೆ ನೀರು ಹಾಕುತ್ತಿರುವಂತೆಯೇ ಮತ್ತೆ ಬಟ್ಟೆ ಧರಿಸಿದರು.... ಆಗಿನ ಪರಿಸ್ಥಿತಿಯನ್ನು ಹೇಗೆ ಹೇಳಲಿ? ನನಗರಿವಿಲ್ಲದಂತೆ, ನನ್ನ ಮೈ ಕೋಪ, ದುಃಖಗಳಿಂದ ಕಂಪಿಸಿತು. ಅಕಸ್ಮಾತ್ತಾಗಿ ತಲೆಯೊಡೆದು ಆ ವ್ಯಕ್ತಿಯ ಮುಂದೆ ನಾನು ಸತ್ತು ಹೋದರೆ...! ...ಯಾವುದಾದರೊಂದು ಅವ್ಯಕ್ತಶಕ್ತಿ ಅವರನ್ನು ತಡೆದರೆ...? ಅಶರೀರವಾಣಿಯೊಂದು ಅವರನ್ನು ದೂಷಿಸಿದರೆ.. ಏನಾಗುತ್ತದೆ? ಹೊರಡಲಿದ್ದವರ ಕೈ ಹಿಡಿದುಕೊಂಡೆ.

"ಏನೂಂದ್ರೆ! ...ಅರ್ಧರಾತ್ರಿ ...ಒಂಟಿ ಹೆಂಗಸು ... ಮತ್ತೆ ಹೊರಡುತ್ತೀರಾ?" ಮಾತು ಮುಂದೆ ಹೊರಡಲಿಲ್ಲ.

"ಛೀ! ಇಷ್ಟಕ್ಕೆಲ್ಲಾ ಏಕೆ ಸಾಯ್ತೀ! ನಾನು ದೇಶಾಂತರ ಹೋಗ್ತಿದೀನೇ! ಸ್ವಾತಂತ್ರ್ಯ, ಸಮಾನತೆ ಬೇಕು ಅಂತ ಉಪನ್ಯಾಸ ಕೊಡ್ತೀರಿ. ಒಂದು ದಿನ ರಾತ್ರಿ ಒಬ್ಬೇ ಇರ್ಲಾರ್ಯ್ಯಾ? ಏನೂ ಪರವಾಗಿಲ್ಲ. ಬಾಗಿಲು ಹಾಕಿಕೊಂಡು ಮಲಗು."

ರೋಷದಿಂದ ಮಾತು ನಿಲ್ಲಿಸಬಹುದಾಗಿತ್ತು. ಆದರೆ ಅವರನ್ನು ಬದಲಾಯಿಸುವ ಅಗತ್ಯತೆ, ಜವಾಬ್ದಾರಿ ನನ್ನ ಮೇಲಿದೆ.

"ಹಗಲೆಲ್ಲಾ ಅಲ್ಲಿಯೇ ಇದ್ದಿರಲ್ಲಾ ರಾತ್ರಿಯೂ ಏನು ಹೇಳೀಂದ್ರೆ! ಇಪ್ಪತ್ನಾಲ್ಕು ಗಂಟೆ ಕಾಲವೂ ಮನೆ ಬಿಟ್ಟು ಇದೆಂಥಾ ಅಲೆದಾಟಾಂದ್ರೆ!" ಎಂದೆ.

"ಏಯ್! ನನಗೆಲ್ಲಾ ಗೊತ್ತಿದೆ. ಬಾಯ್ಮುಚ್ಚಿಕೊಂಡು ಬಿದ್ದಿರು. ಯಾವಾಗ ನೋಡಿದರೂ ಮನೆ, ಬಾಗಿಲು, ಹೆಂಡತಿ, ಅಂಗಳ, ಬಾವಿ, ಪರಕೆ, ಅನ್ನ ತಪ್ಪಲೆ – ದರಿದ್ರ ಗೋಳು! ಬಾಕಿ ದಿನಗಳಲ್ಲಿ ಆಫೀಸು ಅದು ಇರತ್ತೆ. ಅಡಿಗೆಯ ಮನೇಲಿ ಬಿದ್ದು ಸಾಯುವ ನಿನಗೇನು ಗೊತ್ತಾಗತ್ತೆ ಗಂಡಸರ ಅವಶ್ಯಕತೆಗಳು! ದೊಡ್ಡಾಗಿ ಹೇಳೋಕೆ ಬರ್ತಾಳೆ!"

"ಅವಶ್ಯಕತೆ ಇಷ್ಟಗಳು ಗಂಡಸಿಗೆ ಮಾತ್ರ ಸೀಮಿತವಲ್ಲ. ಹೆಂಗಸಿಗೂ ಇರುತ್ತವೆ. ಅವುಗಳನ್ನು ಪುರಸ್ಕರಿಸುವ ಧ್ಯಾನವೇನಾದರೂ ನಿಮಗಿದೆಯೆ? ಅಡಿಗೆಯ ಮನೆಯಲ್ಲಿ ಒದ್ದಾಡಲು ಬೇಸರಗೊಂಡೇ ಅಲ್ಲವೆ ನಿಮಗಾಗಿ ತಪಸ್ಸು ಮಾಡುವುದು?"

"ಅವಶ್ಯಕವಿಲ್ಲ. ಅದು ನಿನಗೆ ಅಭ್ಯಾಸ ತಾನೇ?" ಅವರ ಉತ್ತರ.

ಅಂದು ರಾತ್ರಿ ಎಷ್ಟು ಅತ್ತೆನೋ ಏನೋ? ಆ ತಿರಸ್ಕಾರವನ್ನು ಹೇಗೆ ತಡೆದೆನೋ ಯಾರಿಗೆ ಹೇಳಲಿ? ಯಾರಿಗೆ ಗೊತ್ತು? ನಾನು ಅತ್ತರೆ ಸಂತಾಪ ಸೂಚಿಸುವವರು ಯಾರು? ನಾನು ಮುನಿಸಿಕೊಂಡರೆ ಸಮಾಧಾನಪಡಿಸುವವರು ಯಾರು? ಅವರು ಮಾಡುವ ತಪ್ಪುಗಳನ್ನು ನಾನು ಎತ್ತಿ ತೋರಿಸುತ್ತೇನೆ, ವಿಮರ್ಶಿಸುತ್ತೇನೆ ಎಂದು ಅವರಿಗೆ ನನ್ನನ್ನು ಕಂಡರೆ ಕೋಪ. ನನ್ನನ್ನು ಕಂಡು ಸಿಡುಕುವುದಕ್ಕೆ ಅದೇ ಕಾರಣ. ಅವರಿಗೆ ಒಳ್ಳೆಯ ಅಭ್ಯಾಸಗಳೇ ಕಡಿಮೆ. ಅವರನ್ನು ಬದಲಿಸಲು ಪ್ರಯತ್ನಿಸಕೂಡದು. ವಾದಿಸಬಾರದು. ವಿಮರ್ಶಿಸಲಾಗದು. ಎಲ್ಲವನ್ನೂ ಆಮೋದಿಸಬೇಕು. ಪ್ರೋತ್ಸಾಹಿಸಬೇಕು. ಹೇಗಾಗುತ್ತದೆ.

" ಅಂದು ಹಗಲು ಊಟ ಮಾಡಲಿಲ್ಲ. ರಾತ್ರಿಯೂ ಬೇಕೆನಿಸಲಿಲ್ಲ. ಆದರೆ ಮಗುವಿಗೋಸ್ಕರ. ತಾಯಿಯಾಗಿ ಮಗುವನ್ನು ಉಪವಾಸ ಮಲಗಿಸಲೆ? ಒಂದು ತುತ್ತು ತಿಂದ ಶಾಸ್ತ್ರ ಮಾಡಿ ಮಗುವನ್ನು ಮಗ್ಗುಲಿಗೆ ಹಾಕಿಕೊಂಡು ಮಲಗಿದೆ. ಯಾರು ನಿದ್ರಿಸಲೀ ಬಿಡಲೀ ಬೆಳಗಾಗುತ್ತದೆ. ಆ ದಿನ ದೊಡ್ಡ ಹಬ್ಬ! ನಾನು ಗುಲಾಬಿರಂಗಿನ ಜರಿ ಸೀರೆಯುಟ್ಟು ಮಗುವಿಗೆ ಬಿಳಿಯ ಬಟ್ಟೆ ಹಾಕಬೇಕೆಂದಿದ್ದ ದಿನ. ಖೋವಾ ತಿಂದು ಸಿನಿಮಾ ನೋಡಬೇಕೆಂದಿದ್ದ ದಿನ! ಆದರೆ ಕಣ್ಣೀರಿನಿಂದ ಸಂಕ್ರಾಂತಿ ಲಕ್ಷ್ಮಿಗೆ ಸ್ವಾಗತ ಬಯಸದಾದೆ. ಸಾಧಾರಣವಾಗಿ ಅಡಿಗೆ ಮುಗಿಸಿ ಮಗುವಿಗೆ ಮಾತ್ರಾ ಹೊಸಬಟ್ಟೆ ಹಾಕಿದೆ. ಮಾಧ್ಯಾಹ್ನ ಹನ್ನೆರಡು ಗಂಟೆಗೆ ಬಂದರು. ಊಟಕ್ಕೆ ಬಡಿಸಿದೆ. ಅನ್ನ, ಸಾರು, ಚಟ್ನಿ.."

"ಇನ್ನೇನೂ ಮಾಡಲಿಲ್ಲವೆ?"

"ಇಲ್ಲ."

"ಏಕೆ?"

"ಯಾರಿಗೋಸ್ಕರ ಮಾಡಬೇಕು?"

"ಏಕೆ? ನಾನು ಸತ್ತೆ ಅಂದ್ಕೊಂಡ್ಯಾ?"

"..."

"ಹಬ್ಬದ ದಿನ ಎಲ್ಲರೂ ರುಚಿ ರುಚಿಯಾಗಿ ಮಾಡಿಕೊಂಡು ತಿನ್ನುತ್ತಾರೆ. ನನ್ನ ಕರ್ಮ! ಹುಂ! ನಾನು ಊಟಕ್ಕೆ ಬರೊಲ್ಲ ಅಂದ್ಕೊಂಡ್ಯಾ? ಅಥವಾ ಬರಬಾರದು ಅಂತ ಉದ್ದೇಶವಿತ್ತೋ!"

"ನೀವು ಬರಲಿ ಎಂದೋ, ಬರಬಾರದು ಎಂದೋ, ನನ್ನದು ಎಂತಹ ಉದ್ದೇಶ ಎಂಬುದು ನಿಮ್ಮ ಆತ್ಮವನ್ನು ಕೇಳಿ. ನೀವು ಮನೆಯಲ್ಲಿಲ್ಲದ್ದರಿಂದ ಏನೂ ಮಾಡಬೇಕೆನಿಸಲಿಲ್ಲ. ಮಾಡಲಿಲ್ಲ"

"ಓಹೋ! ನಾನು ಮನೆಗೆ ಬರದಿದ್ರೆ ಅಡಿಗೆ ಗಿಡಿಗೆ ಎಲ್ಲಾ ಬಿಟ್ಟು ಹಾಯಾಗಿ ಬಿದ್ಕೊಂಡಿರೋಣ ಅಂದ್ಕೊಂಡ್ಯಾ! ಎಷ್ಟು ದಿನ ಸಾಧಿಸ್ತಿಯೋ ನಾನೂ ನೋಡ್ತೀನಿ. ನಿನಗೆ ಬೇಕು ಅನ್ನೋದು ಬೇಡ ಅನ್ನೋದೂ ನನಗೆ ಬೇಕಾಗಿಲ್ಲ, ಹಬ್ಬದ ದಿನ ಏನಾದರೊಂದು ಮಾಡಬೇಕಾದ್ದೇ. ನೀನೂ ಸಾಧಿಸು, ನಾನೂ ನೋಡ್ತಿನಿ."

"ಸಾಧನೇನೇ! ಅದೂ ಒಂದು ಹೆಣ್ಣು ಸಾಧಿಸಿ ಗೆಲ್ಲುತ್ತಾಳೆ ಅಂದುಕೊಳ್ಳೋದೂ ಒಂದು ಭ್ರಮೆ. ನಿಮ್ಮ ಮೇಲಿನ ಸಾಧನೆಗೋಸ್ಕರ ನಾನು ಅಡಿಗೆ ಬಿಡಲಿಲ್ಲ."

"ಹಾಗಾದರೆ, ಹೆಮ್ಮೆ, ಅಹಂಕಾರ, ಅಷ್ಟೇ ತಾನೇ?"

"....."

"ಏಕೇ ಮಾತಿಲ್ಲ? ಹಾಗಾದರೆ ಯಾಕೆ ಮಾಡ್ಲಿಲ್ಲ?"

ನನಗೆ ಅಳಲು ಉಕ್ಕಿ ಉಕ್ಕಿ ಬಂತು. ಹುಚ್ಚಿಯಂತೆ ಬಿಕ್ಕಿ ಬಿಕ್ಕಿ ಅತ್ತೆ.

"ಥೀ! ಶನೀ! ಮನೆಗೆ ಬರೋ ಹೊತ್ತಿಗೆ ಸುಡುಗಾಡು ಅಳುಮುಖ. 'ನೀರುಗಣ್ಣು ಊರು ಹಾಳು ಮಾಡಿದಳಂತೆ' ಹಬ್ಬ ಇಲ್ಲ ಹಾಡಿ ಇಲ್ಲ. ಯಾವಾಗಲೂ ಹಾಳು ಅಳು! ಹುಂ! ಅಳು ನಿನ್ನ ಹಣೇ ಬರೆಹವೇ ಅಳು. ಸಾಯುವಾಗಲೂ ಅಳು!"

ಅನ್ನವನ್ನು ಬಿಟ್ಟು ಕೋಣೆಗೆ ಹೋಗಿ ಮಲಗಿಕೊಂಡರು. ಒಬ್ಬ ವ್ಯಕ್ತಿಯನ್ನು ಮತ್ತೊಬ್ಬ ವ್ಯಕ್ತಿ ವಿನಾಕಾರಣ ದಂಡಿಸುವುದಕ್ಕೆ, ಬಾಯಿಗೆ ಬಂದಂತೆ ಬೈಯುವುದು ಯಾವ ನ್ಯಾಯ? ಅದು ಎಲ್ಲರಿಗೂ ಏಕಿರೊಲ್ಲ? ಹಬ್ಬದ ದಿನ ಎಲ್ಲರೂ ರುಚಿ ರುಚಿಯಾಗಿ ತಿಂಡಿ ತಿನಿಸುಗಳನ್ನು ಮಾಡಿಸಿಕೊಂಡು ತಿಂದು ಸಂತೋಷದಿಂದ, ಹೆಂಡತಿ ಮಕ್ಕಳೊಂದಿಗೆ ಕಾಲ ಕಳೆಯುವುದಿಲ್ಲವೆ? ಅದನ್ನು ಕೇಳುವ ಅರ್ಹತೆ ನನಗಿಲ್ಲ. ಭಗವಂತಾ! ನಿನ್ನ ಸೃಷ್ಟಿಯ ಕ್ರಮದಲ್ಲಿ ಇದೂ ಒಂದು ಪಕ್ಷಪಾತವೆ? ಒಬ್ಬ ವ್ಯಕ್ತಿ ಮತ್ತೊಬ್ಬನಿಗೆ ಗುಲಾಮನೇ!

"ಕೊನೆಗೆ ನನ್ನ ಉದ್ದೇಶಗಳನ್ನು ಹೇಳಿಕೊಳ್ಳುವ ಅವಕಾಶವಾದರೂ ಇದ್ದಿದ್ದರೆ ಈ ಮೂಕವೇದನೆ ನನ್ನನ್ನು ದಹಿಸುತ್ತಿರಲಿಲ್ಲ! ಮಧ್ಯಾಹ್ನವಾದರೂ ಮನೆಯಲ್ಲಿರುತ್ತಾರೆ ಎಂದುಕೊಂಡೆ, ಆಗಲೇ ಒಲೆ ಹತ್ತಿಸಿ ಬೇಸಿನ್ ಲಾಡು ಮಾಡಿದೆ. ಹೊರಗೆ ಬರುವ ಹೊತ್ತಿಗೆ ಆಸಾಮಿ ಗೈರು ಹಾಜರಿ. ಸ್ಟ್ಯಾಂಡಿನ ಮೇಲೆ ಬಟ್ಟೆಗಳಿರಲಿಲ್ಲ. ವರಾಂಡದಲ್ಲಿ ಚಪ್ಪಲಿ ಇಲ್ಲ. ಆಶ್ಚರ್ಯಪಡುವುದಕ್ಕಾಗಲೀ, ದುಃಖಿಸುವುದಕ್ಕಾಗಲೀ ನನಗೆ ಶಕ್ತಿ ಇಲ್ಲ. ಅವರು ಏನು ಮಾಡಿದರೂ ಎಲ್ಲವನ್ನೂ ಸಹಿಸಿಕೊಂಡು ನಗುನಗುತ್ತಾ ಸ್ವಾಗತಿಸಬೇಕು. ಮನಸ್ಸು ಎಷ್ಟೇ ಕೆಟ್ಟಿದ್ದರೂ ಕಲಕಲನೆ ಓಡಾಡುತ್ತಾ ಅವರ ಕೋರಿಕೆಗಳನ್ನೆಲ್ಲಾ ತೀರಿಸಬೇಕು. ಅದು ನನ್ನ ಕೈಲಾಗದು ಕೇಸು. ನನಗೂ ಅಭಿಮಾನವಿಲ್ಲವೆ? ನನ್ನ ಮನಸಿಗೆ ನೋವಾಗೋಲ್ವೆ? ಹೆಣ್ಣಾದರೂ ನನಗೂ ಮಾನವತೆಯಿದೆ ಎಂದು ನನಗೆ ಈ ಶಿಕ್ಷೆಯೆ?

"ಮಾಯದ ಗಾಯವೊಂದನ್ನು ಮಾಡಿ ಮರಳಿದಳು ಸಂಕ್ರಾಂತಿ ಲಕ್ಷ್ಮಿ. ಅಮ್ಮನ ಆಹ್ವಾನವನ್ನು ಮನ್ನಿಸಿ ಊರಿಗಾದರೂ ಹೋಗಿದ್ದರೆ, ಅಕ್ಕ, ತಂಗಿ, ಹತ್ತು ಮಂದಿ ನೆಂಟರಿಷ್ಟರೊಂದಿಗೆ, ಅಕ್ಕರೆಯ ಅಮ್ಮನ ಆಪ್ಯಾಯತೆ ಪ್ರೇಮಾಭಿಮಾನಗಳನ್ನು, ಎಲ್ಲವನ್ನು ತೊರೆದು ನಾನು ಬೇಡಿ ಬಂದ ಭಾಗ್ಯ ಏನಾಯ್ತು?"

"ಹಬ್ಬ ಮುಗಿಯುತ್ತಿರುವಂತೆಯೇ ಕಾಗದ ಬರಿ ಎಂದಿದ್ದಳು ಅಮ್ಮ. ಅಮ್ಮನನ್ನು ಸಂತೋಷಪಡಿಸಲೆಂದು ಒಂದು ಸುಳ್ಳಿನ ಕಂತೆ ಕಟ್ಟಿ ಬರೆಯಬೇಕು. ಹಬ್ಬದ ಮರುದಿನ ಬೆಳಗಿನ ಝಾವವೇ ಎಚ್ಚರಿಕೆಯಾಯ್ತು. ಕಾಗದ ಬರೆಯಲು ಕುಳಿತೆ.

"ಅಮ್ಮಾ!

ಇಲ್ಲಿ ನಾವೆಲ್ಲಾ ಕ್ಷೇಮದಿಂದಿದ್ದೇವೆ. ಅಲ್ಲಿ ನಿಮ್ಮಗಳ ಆರೋಗ್ಯಕ್ಕೆ ಕಾಗದ ಬರಿ. ಚಿರಂಜೀವಿ ಮಗು ಆರೋಗ್ಯವಾಗಿದ್ದಾನೆ. ನಾವು ಹಬ್ಬವನ್ನು ತುಂಬಾ ಸಂಭ್ರಮದಿಂದ ಆಚರಿಸಿದೆವು. ಭೋಗಿ ಹಬ್ಬದ ದಿನ ಬಿಳಿಯ ಜರಿ ಸೀರೆ, ಹಬ್ಬದ ದಿನ ಅಕ್ಕ ಕೊಟ್ಟಿದ್ದ ಕೆಂಪು ಜರಿ ಸೀರೆಗಳನ್ನುಟ್ಟಿದ್ದೆ. ನಾನೂ ನನ್ನ ಕೈಲಾದಂಥ ತಿಂಡಿ ತಿನಿಸುಗಳನ್ನು ಮಾಡಿದ್ದೆ. ಏನೇ ಆದರೂ ನಮ್ಮೂರಿಗೇ ಬಂದಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು...."

ಬರವಣಿಗೆ ಮುಂದೆ ಸಾಗದೆ ಕಣ್ಣೀರು ತೊಟ್ಟಿತು. ಸೀರೆಯ ಸೆರಗಿನ ತುದಿಯಿಂದ ಮೆಲ್ಲಗೆ ಒತ್ತಿಕೊಂಡೆ, ಬಾಗಿಲ ಶಬ್ದವಾಯ್ತು. ಕೆಂಪಡರಿದ ಕಣ್ಣುಗಳಿಂದ ದುರುದುರು ನೋಡುತ್ತಾ ಒಳಗೆ ಬಂದು ಮಂಚದ ಮೇಲೆ ಕುಳಿತುಕೊಂಡರು.

"ಇಸ್ಪೀಟು, ಇಸ್ಪೀಟು ಅಂತ ಕೂಗಾಡ್ತಿತ್ತಲ್ಲೇ! ಅದರಿಂದ ಎಷ್ಟು ಸಂಪಾದಿಸಿದೆ ಗೊತ್ತೇನೇ? ನೂರಮುವತ್ತು ರೂಪಾಯಿ! ನಿನ್ಮಂದೇ ಮನೇಲೆ ಕೂತಿದ್ರೆ ಏನ್ಸಿಕ್ತಿತ್ತು ಮಣ್ಣು? ಹುಂ! ತೋಗೋ ಒಂದ್ನೈವತ್ತ್ರುಪಾಯಿ. ನಿನಗೆಂಥಾ ಸೀರೆ ಬೇಕೋ ತೋಗೋ" ಎಂದರು.

ಅವರ ಮಾತು ಕೇಳಿ ನಾನು ನಕ್ಕೆ. ಆ ನನ್ನ ನಗೆಯಲ್ಲಿ ಎಂತಹ ಗೂಢಾರ್ಥವಿದೆಯೋ ಎನ್ನುವುದು ಅವರಂಥವರಿಗೆ ಅರ್ಥವಾಗುವುದಿಲ್ಲ. ನನ್ನ ಮನಸ್ಸು ಆಕ್ರೋಶಿಸುತ್ತಿದೆ.

"ಛೀ! ಪಾಪೀ! ಅನ್ಯಾಯದ ಹಣಕ್ಕಾಗಿ ಬಾಯಿ ಬಿಡುವ ಪಾಪಿ, ಚಂಡಾಲಾ! ನಿನ್ನಂತೆಯೇ ಮನುಷ್ಯರೆಲ್ಲಾ ಮಾನವತೆಯನ್ನು ಮರೆತರೆ! ಗಾಯಗೊಂಡಿರುವ ಒಂದು ಹೃದಯವನ್ನು ನಿನ್ನ ಹಣದಿಂದ ಸಂತೋಷಪಡಿಸಬಲ್ಲೆಯಾ? ನಿನಗಾಗಿ ನಿನ್ನ ಹೆಂಡತಿ ಮಕ್ಕಳೆಷ್ಟು ವಿಲಪಿಸುತ್ತಾರೋ! ನಿನ್ನ ತಿರಸ್ಕಾರದಿಂದ ಎಷ್ಟು ಕುಗ್ಗಿದ್ದಾರೋ – ಅದು ಎಂದಿಗಾದರೂ ನಿನಗೆ ಅರ್ಥವಾಗುತ್ತದೆಯೆ? ನೀಚ ಹಣಕ್ಕಾಗಿ ನಿನ್ನವರ ಕಣ್ಣೀರು ಕರೆಸುವ ನೀನು; ನಿನ್ನ ಹೆಂಡತಿಯ ಕಣ್ಣೀರಿನ ಕಾವಿಗೂ ಕರಗದ ನೀನು, ಮನಸು ಹೃದಯಗಳಿಲ್ಲದ ನೀನೂ ಒಬ್ಬ ಮನುಷ್ಯನೋ? ಆ ಸತ್ಯ ನಿನಗೆಂದಿಗಾದರೂ ತಿಳಿಯುತ್ತದೆಯೆ?"

ಎಂದು ಬಿಡಬೇಕೆಂದೂ, ರೋಷ ತಗ್ಗುವವರೆಗೂ ಬೈಯ್ಯಬೇಕೆಂದು ತವಕ ಪಡುತ್ತಿದ್ದ ಮನಸ್ಸನ್ನು ಮೂದಲಿಸಿ ನಕ್ಕು–

"ನನ್ನ ಮೈಗೆ ಬಟ್ಟೆಗೆ ಗತಿ ಇಲ್ಲದಂತಾದಾಗ ಮೈಗೆ ಬೆಂಕಿ ಹಚ್ಚಿಕೊಂಡು ಮಾನವನ್ನು ಉಳಿಸಿಕೊಳ್ಳುತ್ತೇನಾಗಲೀ ಇಂಥ ಪಾಪಿಷ್ಟ ಹಣದಿಂದ..."

"ಅಹ್ಹಹ್ಹಹ್ಹಾ!" ಎಂದು ಉರುಳುರುಳಿ ನಕ್ಕರು. "ಹುಂ, ಆದರ್ಶವಾದಿ! ಪ್ರತಿ ಹೆಂಗಸೂ ಇಂಥ ಹಿರಿಯ ಸಪ್ಪೆ ಆದರ್ಶವನ್ನೇ ಹಿಡಿದಿದ್ದರೆ..."

"ಎಂದೋ ಚೆನ್ನಾಗಿರುತ್ತಿತ್ತು."

"ಇಲ್ಲ ಇಲ್ಲ, ಗಂಡು ಮುಂಡೇ ಮಕ್ಕಳೆಲ್ಲಾ ಮೂಗು ಹಿಡಿದುಕೊಂಡು ಸನ್ಯಾಸ ಸ್ವೀಕರಿಸಬೇಕಾದ್ದೇ! ಕೊನೆಗೆ ಸ್ನೇಹಿತರ ಮನೆಗಳಲ್ಲಿ ಆಡಿದರೂ ಕೂಡ, ಅವರ ಮನೆಯವರು ಕಾಫೀ, ಟೀ, ಮಾಡ್ಕೊಡ್ತಾರೆ."

"ದುರದೃಷ್ಟವಂತರು! ಏನ್ಮಾಡ್ತಾರೆ?"

"ಅದು ಅವರ ದುರದೃಷ್ಟವಲ್ಲ. ನಿನ್ನದು! ಹುಂ, ನಿನ್ನ ಕರ್ಮ! ನಾನೇ ಒಂದು ಉಲನ್ ಪ್ಯಾಂಟು ಹೊಲಿಸ್ಕೋತೀನಿ."

"ಭಗವಂತಾ! ನಿನಗೆ ಕೋಟಿ ನಮಸ್ಕಾರ ನಮ್ಮಪ್ಪ!" ಎಂದುಕೊಂಡು ಹಗುರವಾಗಿ ನಿಡಿಯುಸಿರೆಳೆದೆ. ಕಾಗದ ಬರೆಯುತ್ತಾ ಕುಳಿತೆ.

"ಏನೇ ಬರೀತಿರೋದು?"

ಏನೋ ಹೊಳೀತು. "ಒಂದು ಕಥೆ!"

"ಓಹೋ! ಏನ್ಕಥೆ!"

"ಗಂಡ ಎಲ್ಲವನ್ನೂ ತಿರಸ್ಕರಿಸಿ ಜೂಜಾಡಲು ಹೋದಾಗ ಹೆಂಡತಿ ಕುಳಿತು ಅಳುವ ಕಥೆ."

"ಏಕಳ್ತಾಳೆ? ತನ್ನನ್ನೂ ಕರೆದುಕೊಂಡು ಹೋಗಲಿಲ್ಲ ಅಂತಾನೇ! ನಿನ್ನ ಬುದ್ಧಿ ನಿನ್ನ ಮುಖ ಇದ್ದ ಹಾಗೇ ಇದೆ. ಮನೆಗೆ ಬರೋ ಹೊತ್ಗೆ ಏನೋ ಒಂದು ಗೋಳು. ಇಸ್ಪೀಟು ಆಡೋದು ತಪ್ಪೂಂತ ಯಾವ ಬೇಕೂಫ ಹೇಳ್ತಾನ್ಗೆ? ಕರ್ಕೊಂಬಾ, ಒದ್ದು ಬುದ್ಧಿ ಹೇಳ್ತೇನೆ. ನಾನು ಕುಡಿದು ಕುಪ್ಪಳಿಸ್ತಿದೇನ್ಯೆ? ಅಥವಾ 'ಬಾಗಿಲು ಹಾಕಿದ' ಮನೆ ಮುಂದೆ ಪಹರೆ ತಿರುಗುತ್ತಿದೇನ್ಯೆ? ಏನು ನಿನ್ನುದ್ದೇಶ?"

"ಕುಡಿದು ಕುಪ್ಪಳಿಸಿದರೂ, ಕಳ್ಳತನ ದರೋಡೆ ಮಾಡಿದ್ರೂ, ಖೂನಿ ಮಾಡಿದ್ರೂ, ಅವನವನು ಮಾಡೋ ಕೆಲ್ಸಾನ ಅವನವನು ಸಮರ್ಥಿಸಿಕೋತಾನೆ. ಅವೆಲ್ಲಾ ತಪ್ಪು ಅಂತ ನೀವು ವಿಮರ್ಶಿಸೋದು...." ಅಭಿಮಾನದಿಂದ ಕಣ್ಣೀರು ಕೆಳಗೆ ಬೀಳದಂತೆ ಕೆನ್ನೆಗೆ ಕೈಯೂರಿ ಎದ್ದು ಹೋಗಲಿದ್ದಾಗ,

"ಡರ್ಟಿ ರ್‍ಯಾಸ್ಕಲ್! ನಿದ್ದೆ ಮಾಡೋಣ ಅಂತ ಮನೆಗೆ ಬರೋ ಹೊತ್ಗೆ, ದೀಪ ಹಾಕ್ಕೊಂಡು ಕೂತ್ಕೊಂಡು ಕಥೆ ಬರೀತಾಳಂತೆ ಕಥೆ! ಮಹಾ ಲೇಖಕಿ!" ಮಾತು ಮೂಗು ಎಂತಹ ಅಹಂಕಾರ ಮೂದಲಿಕೆ!

ನ್ಯಾಯವಾಗಲೀ ಅನ್ಯಾಯವಾಗಲೀ ಅಧಿಕಾರಕ್ಕೆ ದಾಸನಾದ ಗಂಡು, ಹೆಣ್ಣು ಬಾಯ್ತೆರೆದು ಮಾತನಾಡಿದರೆ ಸಹಿಸಲಾರ. ತನ್ನನ್ನೇ ನಂಬಿ ಬದುಕುತ್ತಿರುವ ಹೆಂಡತಿ ಮಕ್ಕಳನ್ನು ಸುಖಪಡಿಸಲಾರದ ಪರೋಪಕಾರಿ. ಬೋಳಿಸುವ ಗೆಳೆಯರಿಗಾಗಿ ತನ್ನ ಸರ್ವಸ್ವನ್ನೂ ಸೂರೆಗೊಡಬಲ್ಲ. ತನ್ನ ಮನೆಯ ದೀಪವನ್ನು ದಾನ ಮಾಡಿ, ಬೆಳಗೂ ನಾಯಿ ಓಡಿಸುತ್ತಾನೆ. ಬೀದಿಯಲ್ಲಿ ದೀಪ ಹಚ್ಚಿ ಖರ್ಚು ಮಾಡಲು ಹಿಂಜರಿಯುವ ಜಿಪುಣ ಚಕ್ರವರ್ತಿ ವಿಲಾಸಕ್ಕಾಗಿ ನೂರಾರು, ಸಾವಿರಾರು ರೂಪಾಯಿಗಳನ್ನು ಧಾರಾಳವಾಗಿ ಖರ್ಚು ಮಾಡುತ್ತಾನೆ. ತಾನು ಬಯಸಿದ್ದೇ ಬಯಕೆ! ಮಾಡಿದ್ದೇ ಕೆಲಸ! ಆಡಿದ್ದೇ ಆಟ! ಹೇಳಿದ್ದೇ ನ್ಯಾಯ! ತನ್ನ ಮಾತೇ ಅಪ್ಪಣೆ! ಈಗ ಹೇಳು ಏನು ಅಗತ್ಯತೆ, ಅವಶ್ಯಕತೆಗಳನ್ನು ನೋಡಿ ಇತರರ ಪರಿಸ್ಥಿತಿಗಳನ್ನು ಅರ್ಥಮಾಡಿಕೊಳ್ಳಬೇಕು?"

ಒಂದೇ ಸಮನೆ ಹೇಳಿ ನಿಲ್ಲಿಸಿದಳು ಭಾನುಮತಿ.

* * *

ನಾನು ಒಂದೂ ಮಾತನಾಡದೆ ಅವಳ ಮಾತನ್ನೇ ಕೇಳುತ್ತಿದ್ದೆ. ನಾನು ಭಾನುವಿನ ದಾಂಪತ್ಯದಲ್ಲಿ ಅನುರಾಗ, ಮಮಕಾರಗಳನ್ನುಳಿದು ಮತ್ತಾವ ಭಾವನೆಗಳಿಗೂ ಅವಕಾಶವಿಲ್ಲವೆಂದು ತಿಳಿದಿದ್ದ ನಾನು, ಸ್ವಲ್ಪ ನಿಜವನ್ನು ತಿಳಿದ ಆ ಸಮಯದಲ್ಲಿ ಏನು ಹೇಳಲಿ? ಏನು ಮಾತೂ ಆಡಲಾರದೆ ಮೂಕನಂತೆ ಮೌನದ ಮರೆ ಹೊಕ್ಕೆ. ಭಾನುವಿನ ಹೃದಯದಲ್ಲಿ ಗಂಡನ ಮೇಲೆ, ಗಂಡು ಜಾತಿಯ ಮೇಲೇ ಇಷ್ಟೊಂದು ಏಹ್ಯ ಭಾವನೆ, ಈರ್ಷ್ಯೆ! ಕೋಪಗಳಿವೆ! ಎನ್ನಿಸಿತು.

ಅವಳ ಸುದೀರ್ಘ ಆರೋಪಣೆಗೆ ಉತ್ತರ ಕೊಡಬೇಕೆನ್ನಿಸಿತು.

"ಭಾನೂ! ನೀನು ಹೇಳಿದ್ದನ್ನು ನಾನು ಅರ್ಥ ಮಾಡಿಕೊಳ್ಳಲಿಲ್ಲವೆಂದಲ್ಲಮ್ಮ. ಒಂದು ವಿಷಯ ಕೇಳ್ತೀಯಾ? ನಮ್ಮ ಆಶೆ, ಆಶಯಗಳು, ಕೋರಿಕೆ, ಅಭಿರುಚಿಗಳು ಎಲ್ಲವನ್ನೂ ಒಂದು ನಿಮಿಷ ಕಾಲ ದೂರವಿರಿಸು. ಭಾವ ಚಿಕ್ಕಂದಿನಿಂದಲೂ ಹೇಳುವವರು, ಕೇಳುವವರಿಲ್ಲದೆ, ಹೆದರಿಕೆ, ಬೆದರಿಕೆಗಳಿಲ್ಲದೆ, ಭಯ ಭಕ್ತಿಗಳಿಲ್ಲದೆ ತನ್ನ ಇಷ್ಟಾನುಸಾರ ಸ್ವೇಚ್ಛೆಯಿಂದ ಬೆಳೆದವನು. 'ಅಂಕೆ ಇಲ್ಲದೆ ಕಪಿ ಲಂಕೆ ಸುಟ್ಟಿತು' ಎನ್ನುವುದಿಲ್ಲವೆ ಹಾಗೆ, ತಾನು ಬಯಸಿದ್ದು ನಡೆಯಬೇಕು! ಅದು ಮೂರ್ಖತೆಯಾಗಲೀ, ಅಥವಾ ಚುರುಕುತನವಾಗಲೀ ಯಾವುದಾದರೂ ಒಂದೇ. ಅರ್ಥ ರಹಿತ ಸ್ವೇಚ್ಛ ವ್ಯಕ್ತಿಯನ್ನು ಎಂತೆಂತಹ ದುರ್ವ್ಯಾಪಾರಗಳು ದಾರಿಗೆಳೆಯುತ್ತವೋ ಎನ್ನುವುದನ್ನು ನೀನು ಗ್ರಹಿಸಲಾರೆಯಾಮ್ಮ? ನೀನು.."

"ತಡಿ ಕೇಶೂ! ಮದುವೆಗೆ ಮುಂಚೆ ನಿಮ್ಮ ಭಾವ ಹೇಗೆಂತ ಕೇಳಿದೆಯಲ್ಲ. ಆಗ ನಿನಗೆ ಈ ಅನುಮಾನಗಳು ಬರಲಿಲ್ವೆ? ಹಾಗೆ ಬಿಡಿಯಾಗಿ, ಅಂಕೆಯಿಲ್ಲದೆ ಬೆಳೆದ ವ್ಯಕ್ತಿಯಲ್ಲಿ ಇಂತಹ ದುರಭ್ಯಾಸಗಳು ನೆಲೆಯಾಗಿರುತ್ತವೆಂದು ನೀನು ಸ್ವಲ್ಪವಾದರೂ ಅನುಮಾನ ತೋರಿಸಿದ್ದಿದ್ದರೆ... ಅಣ್ಣಾ..."

"ಭಾನೂ! ಹೇಗೆ ಹುಚ್ಚಿಯಂತೆ ಮಾತಾಡ್ತೀಯಮ್ಮ? ಈತನ ಈಗಿನ ನಡೆವಳಿಕೆಯನ್ನು ನೋಡಿ ಹೀಗೆ ಸರಿಹೋಗಿಸಿಕೊಳ್ಳಬೇಕೆಂದು ನಿನಗೆ ಸೂಚಿಸುತ್ತಿದ್ದೇನಮ್ಮ. ಆದರೆ ನಡೆದು ಹೋದುದಕ್ಕೆ ಚಿಂತಿಸಿದರೇನಮ್ಮ ಉಪಯೋಗ? 'ಮಿಂಚಿದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ'ವೆನ್ನುವ ಗಾದೆ ನಿನಗೆ ಗೊತ್ತಿಲ್ಲವೆ? ಯಾರಾದರೂ, ನುಂಗಿದ ತುತ್ತಿನ ರುಚಿ ಬಯಸುತ್ತಾರೆಯೆ? ಅಥವಾ ಚೆಲ್ಲಿದ ಹಾಲನ್ನು ಬಳಿದು ತೆಗೆದಿರಿಸಲಾಗುತ್ತದೆಯೆ? ಇಪ್ಪತ್ತೈದು ವರ್ಷಗಳ ಕಾಲದ ಬಾಳಿನಲ್ಲಿ ಅಭ್ಯಾಸವಾಗಿ ಬಂದ ನಡೆವಳಿಕೆಗಳನ್ನು ಒಮ್ಮೆಲೇ ಬದಲಾಯಿಸಲಾಗುತ್ತದೆಯೇಮ್ಮ? ನೀನೇ ಸಹನೆವಹಿಸಬೇಕು ತಾಯಿ? ಆವೇಶ ಸಲ್ಲದಮ್ಮ!"

"ಅಣ್ಣಾ! ಹಬ್ಬದ ದಿನ, ಒಂದೇ ಒಂದು ದಿನ ಮನೇಲಿರಿ ಎಂದು ಅಂಗಲಾಚಿ ಗೋಗರೆದು ಕೇಳಿದ ಹೆಂಡತಿಯನ್ನು ತಿರಸ್ಕರಿಸಿ ಹೋದ ವ್ಯಕ್ತಿಯಲ್ಲಿ ಯಾವ ಜನ್ಮಕ್ಕೆ ಬದಲಾವಣೆ ಬರುತ್ತದೆ ಎನ್ನುತ್ತೀ? ನನ್ನ ಸಹನೆಯಿಂದೇನುಪಯೋಗ? ಸಂತೋಷಕ್ಕೆಲ್ಲಿಯ ಅವಕಾಶ? ಸಹಕಾರಕ್ಕೇತರ ಬೆಲೆ?"

"ಆತುರಬೇಡ ಭಾನು! ನಾನು ಭಾವನನ್ನು ವಹಿಸಿಕೊಂಡು ಮಾತನಾಡುತ್ತಿಲ್ಲ. ನೀನು ಶಾಂತಿಯ ಮರೆಹೋಗುವುದೊಂದುಳಿದು ಬೇರೆ ದಾರಿ ಇದೆಯೆ? ಅವನಿಗೆ ಜೂಜಿನ ಮೋಜೇ ವಿನಹ, ನಿನ್ನ ಮೇಲೆ ದ್ವೇಷವಿದೆ ಎನ್ನುತ್ತೀಯಾ? ನೀನೇ ಯೋಚಿಸು!" ಭಾನು ನಿಡಿಯುಸಿರೊಂದೆಳೆದಳು.

"ನೀನು ತಿಳಿದುಕೊಂಡಿರುವುದು ತುಂಬಾ ಕಡಿಮೆ ಕೇಶೂ! ನೀನು ವಿದ್ಯಾಭ್ಯಾಸಕ್ಕೆ ಈ ಊರಿಗೆ ಬರುತ್ತೇನೆಂದು ಬರೆದಾಗ ನನಗೆ ತುಂಬಾ ಭಯವಾಯ್ತು ಗೊತ್ತೇ? ಏಕೆಂದರೆ, ನನ್ನ ಸಂಸಾರದ ಒಡಕು ನಿನಗೆಲ್ಲಿ ತಿಳಿದುಬಿಡುತ್ತದೋ ಎಂಬ ಶಂಕೆ! ಆದರೆ, ಈ ದಿನ ನಾನೇ ಎಲ್ಲಾ ಹೇಳುತ್ತಿದ್ದೇನೆ. ನನ್ನ ನೋವು ಹೇಗೆ ಹೇಳಿದರೆ ನಿನಗರ್ಥವಾಗುತ್ತದಣ್ಣ? ಎಷ್ಟು ಚಿಂತೆಯಿಂದ ಕೊರಗುತ್ತಿದ್ದೇನೆಂಬುದು ನಿನಗೆ ಹೇಗೆ ಗೊತ್ತಾಗುತ್ತದೆ? ಅದು ಹೇಳಿದರೆ ಅರ್ಥವಾಗದು. ನೀನೇ ಅರ್ಥಮಾಡಿಕೊಳ್ಳಬೇಕು!"

ಅವಳ ಮಾತು ಕೇಳುತ್ತಾ ಸುಮ್ಮನಿದ್ದೆ. ಏನೋ ಕೇಳಬೇಕೆನಿಸಿತು. ಆದರೆ ಅದು ಸಕಾಲವಲ್ಲ. ಭಾನು ಸ್ವಭಾವತಹ ಆವೇಶದ ಹುಡುಗಿ. ಗಂಡನ ನಡೆವಳಿಕೆ ಅನುಚಿತ ವೆನಿಸಿದರೆ, ತನ್ನ ಆಸೆಯ ಹಾಲು ಒಡೆಯಿತೆಂದೇ ಒದ್ದಾಡುತ್ತಾಳೆ. ಭಾವನಿಗಿಂತಲೂ ಅತಿ ಜಾಸ್ತಿಯಾಗಿ ಜೂಜಾಡುವಂಥವರು ನೂರಾರು ಮಂದಿಯನ್ನು ನೋಡಿದ್ದ ನಾನು ದುಡುಕುವುದರಲ್ಲಿ ಅರ್ಥವಿಲ್ಲ. ಆ ಹುಯಿಲಿನಲ್ಲಿ ಅವರು ಏನು ಮಾಡಿದರೂ ಆಶ್ಚರ್ಯವಿಲ್ಲ. ಸಾವಧಾನದಿಂದ ಮಾತಿನ ಧಾಟಿಯನ್ನು ಬೇರೆಡೆಗೆ ತಿರುಗಿಸಿದೆ. ಶಾಲೆಯ ದಿನಗಳನ್ನು ನೆನಪು ಮಾಡಿದೆ. ಅಂದಿನ ಮಿತ್ರ ವೃಂದವನ್ನೆಲ್ಲಾ ನೆನಪಿನ ತೆರೆಯ ಮೇಲೆ ತಂದೆ. ಕಾಲೇಜಿನ ವಿಷಯಗಳನ್ನೆಲ್ಲಾ ಹೇಳುತ್ತಿದ್ದೆ.

ಗಂಟೆ ಹನ್ನೆರಡು ಹೊಡೆಯಿತು.

"ಹಸಿವಾಗ್ತಿದೆ ಭಾನೂ! " ಎಂದೆ. ತಕ್ಷಣ ಮೇಲೆದ್ದಳು ಭಾನು.

"ಕೆಲಸಕ್ಕೆ ಬಾರದ ಹರಟೆಯಲ್ಲಿ ಕಾಲ ಕಳೆಯಿತು. 'ಮಾತಿನಿಂದ ಮನೆ ಹಾಳು, ತೂತಿನಿಂದ ಒಲೆ ಹಾಳು' – ಎನ್ನುವ ಗಾದೆಯಂತಾಯ್ತು. ಎದ್ದು ಬಾ," ಎಂದಳು. ಮೌನವಾಗೇ ಕ್ಯಾರಿಯರ್ ತೆಗೆದು ಬಡಿಸಿದಳು.

ಯಾವ ಕ್ಷಣದಲ್ಲಿ ಏನಾಗುತ್ತದೆಂದು ಹೇಳಲಾಗುವುದಿಲ್ಲವೆಂದು ಹೇಳುವುದು ಇದಕ್ಕೇನೇನೋ? ತೋಟದಲ್ಲಿ ಕೊಳದ ಹತ್ತಿರ ಆಲದಮರದ ಬಿಳಲುಗಳ ನಡುವೆ ಕುಳಿತು ತಿನ್ನುವ ಬಯಕೆ ಏನಾಯ್ತು?

"ನೀನಿರೋದ್ರಿಂದ ಸರಿಹೋಯ್ತು. ಇಲ್ಲವಾಗಿದ್ರೆ ಈ ಕ್ಯಾರಿಯರ್ ಹೀಗೇ ಇರ್ತಿತ್ತು ಕೇಶು" ಎಂದಳು ಭಾನು.

ಅದೇ ತಪ್ಪು ಭಾನು. ನೀನು ಮಾಡಬೇಕಾದ್ದು ಉಪವಾಸ ಜಾಗರಣೆಗಳನ್ನಲ್ಲ. ನೀನು ಉಪವಾಸವಿದ್ದೀ ಅಂತ ಅನುಕಂಪ ತೋರಿಸೋರೂ ಇಲ್ಲ. ಹಸಿವೆಯಡಗಿಸಲು, ಹೊಟ್ಟೆಗೆ ತಿಂಡಿ ತಿನ್ನೋಕೂ ಎಂತಹ ಅಭಿಮಾನ ಭಾನು?

"ಏನೋಪ್ಪ! ಈ ಮನೇಲಿ ಏನ್ಮಾಡ್ತೀವ್ಹೋ ಮಾಡೊಲ್ವೋ, ಬೇಯಿಸಿದ್ದು ತಿನ್ನುತ್ತೇವೆಯೋ ಇಲ್ಲವೋ ಒಂದೂ ಗೊತ್ತಾಗೊಲ್ಲ. ಅದಕ್ಕೆ ಕಾರಣ ಅವರೊಬ್ಬರೇ ಅಲ್ಲ. ನಾನೂ ಏನಾದರೊಂದು ತಪ್ಪು ಮಾಡುತ್ತಲೇ ಇರುತ್ತೇನೆ. ತಿಂಡಿ ಕೊಟ್ಟವಳು ನೀರು ಕೊಡುವುದನ್ನೇ ಮರೆತಿರುತ್ತೇನೆ. ಒಂದೊಂದ್ಸಾರಿ ಕಾಫಿಗೆ ಸಕ್ಕರೆ ಹಾಕದೇ ಕೊಟ್ಟಿರ್ತೀನೆ. ಮಜ್ಜಿಗೆ ಬಡಿಸಿದಾಗ ಉಪ್ಪೇ ಹಾಕಿರೊಲ್ಲ. ಇವೆಲ್ಲ ಮರೆವಿನಿಂದಾದ ತಪ್ಪುಗಳೇ ಇರಬಹುದು. ಆದರೆ ಅವುಗಳ ಪರ್ಯವಸಾನ ಮಾತ್ರ ತುಂಬಾ ತೀವ್ರವಾಗಿರುತ್ತದೆ. ನಾನು ತಮ್ಮನ್ನು ಅಲಕ್ಷಿಸುತ್ತಿದ್ದೇನೆ. ತಮ್ಮ ಕೆಲಸಗಳನ್ನು ಮನಃಪೂರ್ವಕವಾಗಿ ಮಾಡುವುದಿಲ್ಲ. ತಮ್ಮ ಮೇಲೆ ಕೊಂಚವಾದರೂ ಪ್ರೇಮ ಗೌರವಗಳಿದ್ದರೆ ಹೀಗೆ ಅಲಕ್ಷ್ಯತೆಯಿಂದ ವರ್ತಿಸುತ್ತಿರಲಿಲ್ಲ ಎನ್ನುತ್ತಾರೆ. ಇವೆಲ್ಲಕ್ಕೂ ಎಂತಹ ಸಮಾಧಾನ ಕೊಡಲಿ? ಏನು ಹೇಳಿದರೂ ಉಪಯೋಗವಿಲ್ಲ."

"ನೀನೇನು ಹೇಳಿದರೂ ನನಗೆ ಬೇಕಾಗಿಲ್ಲ. ಮರೆತೇ ಮಾಡಲಿಲ್ಲವೋ, ಉದ್ದೇಶಪೂರ್ವಕವಾಗೇ ಮಾಡಲಿಲ್ಲವೋ ನನಗದರ ಸಮಜಾಯಿಷಿ ಬೇಕಾಗಿಲ್ಲ. ನಾನು ಕಂಡಿದ್ದೇ ಸತ್ಯ. ನನ್ನ ಮೇಲೆ ನಿನಗೆ ಶ್ರದ್ಧೆ, ಗೌರವ ಪ್ರೇಮಗಳಿದ್ದಿದ್ದರೆ ಆ ದಾರಿಯೇ ಬೇರೆ. ಅವುಗಳಿಲ್ಲದ್ದರಿಂದಲೇ ಮರೆವು ಬರುವುದು, ಇಲ್ಲವೆನ್ನುತ್ತೀಯಾ?"

ನಾನು ಮಾಡಿದ್ದು ತಪ್ಪು ಆದರೆ ಆ ತಪ್ಪಿನ ಉದ್ದೇಶ ಅವರು ಊಹಿಸಿದ್ದು ಮಾತ್ರವಲ್ಲ. ಅವರನ್ನು ಅಲಕ್ಷಿಸಿ, ಅಗೌರವಗೊಳಿಸಿ ನಾನು ಸಾಧಿಸುವಂಥ ಲಾಭವೇನೂ ಇಲ್ಲ. ಹಾಗೆ ಮಾಡಲು ನನ್ನ ಅಂತರಾತ್ಮ ಎಂದೂ ಅಂಗೀಕರಿಸದು, ಒಪ್ಪುವುದೂ ಇಲ್ಲ. ಸಕ್ಕರೆ ಬೆರೆಸದೆ ಕಾಫಿ ಕೊಟ್ಟಾಗ, "ಸಕ್ಕರೆ ಹಾಕಿಲ್ಲ, ಸಕ್ರಿ ಹಾಕೆ" ಎಂದರೆಷ್ಟು ಹೊಂದಿಕೆಯಾಗಿರತ್ತೆ? ಆ ಸಣ್ಣ ತಪ್ಪಿಗೆ ಅಪಾರ್ಥ ಕಲ್ಪಿಸಿ ಬೈಯ್ಯುವುದು ದೊಡ್ಡಸ್ತಿಕೆಯೆ? ನಾನು ಮಾಡುವ ತಪ್ಪುಗಳು ಅಕ್ಷಮ್ಯವೂ ಅಲ್ಲ, ಸರಿಪಡಿದಂಥವೂ ಅಲ್ಲ. ದಂಪತಿಗಳಲ್ಲಿ ಹೊಂದಾಣಿಕೆ ಇರಬೇಡವೆ? ಅವರಲ್ಲಿ ಲೋಪಿಸಿರುವುದೇ ಅದು. ಅತಿ ತೀಕ್ಷ್ಣವಾಗಿ ವಿಮರ್ಶಿಸಿ, ತಿನ್ನುವುದನ್ನೋ ಕುಡಿಯುವುದನ್ನೊ ಬಿಟ್ಟು ಎದ್ದು ಹೋಗುತ್ತಾರೆ.

ಯಾವಾಗಲಾದರೂ ಮನೆಯಲ್ಲಿದ್ದಾಗ ಏನಾದರೂ ತಿಂಡಿ ಮಾಡಿದರೆ ಆಗ, "ತಿನ್ನುತ್ತೀರಾ, ಬೇಕೇ, ತರಲೇ?" ಎಂದು ಅಡಿಗಡಿಗೂ ಉಪಚರಿಸುತ್ತಿರಬೇಕು. ಬೇಕು ಎಂದು ತಾವೇ ಕೇಳಬಾರದೆ?

"ನಿಮಗೆ ಬೇಕು ಅನ್ನಿಸಿದಾಗ ತೆಗೆದುಕೊಂಡು ಬಾ ಅನ್ನಿ, ಇಲ್ಲವೇ ತೆಗೆದುಕೊಂಡು ತಿನ್ನಿ. ಅದು ಬಿಟ್ಟು ಬೀಗರಿಗೆ, ನೆಂಟರಿಗೆ ಉಪಚರಿಸುತ್ತಿರುವುದು ಯಾವಾಗಲೂ ನಡೆಯತ್ಯೇ!" ಎಂದರೆ,

"ನೆಂಟರಿಗೆ ಉಪಚಾರ ಮಾಡೋಕಾಗತ್ಯೇ? ಗಂಡನಿಗೆ ಮಾಡಬಾರದೆ? ಆ ಜವಾಬ್ದಾರಿ ಹೆಣ್ಣಾದ ನಿನಗಿರಬೇಕು ಕಣೆ." ಅದು ನನಗೆ ಸಿಗುತ್ತಿದ್ದ ಉತ್ತರ.

ಕೆಲವರ ತತ್ತ್ವ ಉದ್ದೇಶಗಳು ಸತ್ಯದೂರವಾಗಿರುತ್ತವೆ. ಯಾವಾಗಲೂ, ಯಾರಾದರೂ ಉಪಚರಿಸುತ್ತಿರಬೇಕು. ಮಾತುಮಾತಿಗೂ ಅಪಾರ್ಥ ಕಲ್ಪಿಸಬೇಕು. ಎಷ್ಟೆಂದು ತಡೆ

ಯುವುದು? ನಾನು ಎಷ್ಟೇ ಶ್ರದ್ಧೆಯಿಂದ ಕೆಲಸ ಮಾಡುತ್ತಿದ್ದರೂ, ಜವಾಬ್ದಾರಿ ಇಲ್ಲವೆನ್ನುತ್ತಿರುತ್ತಾರೆ. ಕೈಜಾರಿ ಒಂದು ಕಪ್ಪು ಒಡೆದರಾಗಲೀ, ಕನ್ನಡಿ ಕೈಜಾರಿ ಚೂರಾಗಲೀ ಅವಕ್ಕಾಗಿ ಅಷ್ಟಾಗಿ ಯೋಚಿಸುವುದಿಲ್ಲ. ಏನೋ ಅಜಾಗರೂಕತೆಯಿಂದ ಆಗುತ್ತದೆ. ಅವಕ್ಕೆಲ್ಲಾ ಚಿಂತಿಸಿ ಮಂಚಹಿಡಿದರೇನುಪಯೋಗ? ಮುಂದೆ ಜಾಗರೂಕತೆಯಿಂದಿದ್ದರಾಯ್ತು. ಆದರೆ ಅದು ಅವರ ದೃಷ್ಟಿಯಲ್ಲಿ ಅಕ್ಷಮ್ಯ ಅಪರಾಧ.

"ಹುಂ! ಹೆಂಗಸರು ಲಕ್ಷಣವಾಗಿ ಹೊಸಹೊಸ ಪದಾರ್ಥಗಳನ್ನು ಹೊಂದಿಸಿಕೊಂಡು ಹಸನಾಗಿ ಸಂಸಾರ ಸಾಗಿಸುತ್ತಾರೆ. ನೀನೂ ಇದ್ದೀ. ನಿನ್ನಲ್ಲಿ ಹೆಂಗಸಿನ ಲಕ್ಷಣಗಳೇ ಇಲ್ಲ. ಗಂಡುಬೀರಿಯಂತೆ, ಕೈಗೆ ತಾಕಿದ್ದನ್ನು ನೂಕಿ, ಕಾಲಿಗೆ ತಗುಲಿದ್ದನ್ನು ಒದ್ದು, ಅಹಂಕಾರದಿಂದ ಮೆರೆಯುತ್ತೀ. ಎಚ್ಚರಿಕೆಯಿಂದ ಹಿಡಿದುಕೊಂಡಿದ್ದರೆ ಕಪ್ಪು ಏಕೆ ಕೈಜಾರುತ್ತಿತ್ತು? ಕನ್ನಡಿ ಮಗುವಿಗೆ ಸಿಗುವಂತೆ ಏಕಿರಿಸಬೇಕು? ನಿನಗೆ ಬುದ್ಧಿ, ಶ್ರದ್ಧೆಗಳು ಎಂದಿಗೆ ಬರುತ್ತವೋ ಆ ಭಗವಂತನಿಗೇ ಗೊತ್ತು. ಪಾಪ! ಅವನಿಗೂ ಅರ್ಥವಾಗತ್ತೋ ಇಲ್ವೋ?" ಅದೇ ಅವರ ಧೋರಣೆ.

ನನಗೊಂದು ಅನುಮಾನ ಕೇಶು. ಯಾರ ಮನೆಯಲ್ಲೂ ಗಾಜು ಒಡೆಯೊಲ್ವೆ? ಮಕ್ಕಳು ಪದಾರ್ಥಗಳನ್ನು ಹಾಳುಮಾಡುವುದಿಲ್ಲವೆ? ಈ ತಪ್ಪುಗಳು ನನ್ನ ಮನೇಲಿ ಮಾತ್ರ ಆಗತ್ತೆ? ಒಂದು ಕಪ್ಪು ಕೈಜಾರಿ ಒಡೆದದ್ದಕ್ಕೆ ಅಷ್ಟು ರಾದ್ಧಾಂತವೇ? ದುರದೃಷ್ಟದಿಂದ ಆದ ತಪ್ಪಿಗೆ ನಿಂತಂತೆಯೇ ನಡುಗುತ್ತಾ, ಮುಂಬರಲಿರುವ 'ದಾಳಿ'ಯನ್ನು ಎದುರಿಸುವ ಶಕ್ತಿ ಇಲ್ಲದೆ, ಅಳುತ್ತಾ – "ಛೀ! ಮನುಷ್ಯಳಾಗಿ ಬಾಳುತ್ತಿದ್ದೇನೆಯೆ ನಾನು? ಉಪ್ಪಿನ ಜಾಡಿಯ ಮೇಲೆ ಮುಚ್ಚಳವಿಲ್ಲವೆಂದೋ, ಸಕ್ಕರೆಗೆ ಇರುವೆ ಮುತ್ತಿದೆ ಎಂದೋ, ಮಾವಿನ ಕಾಯಿಯನ್ನು ಬಿಸಲಿನಲ್ಲಿಡಲಿಲ್ಲವೆಂದೋ, ಕಾಫಿಯ ಲೋಟ ಕಿಟಕಿಯಲ್ಲಿದೆ ಎಂದೋ, ಮಗು ಪರಕೆ ಕಡ್ಡಿ ಹಿರಿದು ಹಾಕುತ್ತಿದ್ದಾನೆಂದೋ, ಛೀತ್ಕರಿಸಿಕೊಂಡು, ಹಾಯಾಗಿ ತಿಂದು ಮಲಗುತ್ತೇನೆ. ಇನ್ನು ನನ್ನಲ್ಲಿ ಬದಲಾವಣೆ ಬರದೆಂದೂ, ಇಷ್ಟೇ ನನ್ನನ್ನು ಕಟ್ಟಿಕೊಂಡಿದ್ದು ಅವರ ಕರ್ಮವಂತೆ, ಅನುಭವಿಸುತ್ತಿದ್ದಾರಂತೆ! ದಿನದಿನವೂ ಈ ಸಾಧನೆಯನ್ನು ಯಾವ ಹೆಂಗಸು ತಡೆಯುತ್ತಾಳೆ? ಅಡಿಗೆಯ ಮನೆಗೆ ಬಂದು ನೀರು ಕುಡಿಯುವುದಕ್ಕೇ ಪೌರುಷಪಡುವ ಗಂಡಸುತನ ಇಷ್ಟು ಸಣ್ಣ ಸಣ್ಣ ಹೆಂಗಸರ ವಿಷಯಗಳಿಗೆ ತಲೆ ಹಾಕಿ ಬೈದಾಡಲು ಹೇಗೆ ಅಂಗೀಕರಿಸುತ್ತದೆ? ಏನೋ ಹಾಗೇ ಯೋಚಿಸುತ್ತಿದ್ದರೆ ಹುಚ್ಚು ಹಿಡಿದಂತಾಗುತ್ತದೆ!" ಎನ್ನುತ್ತಾ ಅನ್ನ ಕಲಿಸುತ್ತಿದ್ದಳು ಭಾನುಮತಿ.

ನಾನು ಎಲ್ಲವನ್ನೂ ಕೇಳಿಸಿಕೊಂಡೆ. ಭಾನುವಿನ ಸ್ಥಿತಿಯನ್ನೂ ಅರ್ಥಮಾಡಿಕೊಂಡೆ. ಆದರೂ,

"ಭಾನೂ! ನೀನು ಎಲ್ಲವನ್ನೂ ತರ್ಕಿಸಬೇಡಮ್ಮ. ಭಾವನಿಗೆ ಸರಿಹೋಗುವಂತೆಯೇ ನಡೆದುಕೊಂಡರಾಗದೆ?" ಎಂದೆ.

ತಕ್ಷಣ ತಲೆ ಎತ್ತಿ ನನ್ನ ಮುಖವನ್ನೇ ನೋಡುತ್ತಾ,

"ನಿನಗೂ ಕೋಪ ಬಂದಿತಲ್ಲವೆ?" ಎಂದು ಕೇಳಿದಳು. ನಾನು ತಲೆಯನ್ನು ಅಡ್ಡವಾಗಿ ಆಡಿಸುತ್ತಾ,

"ಇಲ್ಲಮ್ಮ, ಯಾವ ಗಂಡಸಾದರೂ ಹೆಣ್ಣಿನ ಮನಸ್ಸನ್ನು ಅರ್ಥಮಾಡಿಕೊಳ್ಳಬಲ್ಲನೇ? ಎಂದು ಯೋಚಿಸುತ್ತಿದ್ದೇನೆ. ಉಹುಂ! ಕೊನೆಗೆ ಕೊನೆಗೆ ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದೂ ಇಲ್ಲ. ಏಕೆಂದರೆ ತಾನು ಗಂಡಸು!"

"ಹೌದು! ಹಂಚಿಯ ಕಡ್ಡಿಗಿಂತಲೂ, ಹತ್ತಿಗಿಂತಲೂ ಹಗುರಳಾದ ಹೆಣ್ಣಿಗೆ ಒಂದು ಮನಸ್ಸು, ಅದರಲ್ಲೂ ಏನೋ ಒಂದು ಇದೆ ಎಂದುಕೊಳ್ಳುವುದೇ? ಅವಳನ್ನು ಅರ್ಥ ಮಡಿಕೊಳ್ಳಲೇನಿದೆ! ಅಷ್ಟೇ ತಾನೇ?"

"ಹುಚ್ಚೀ! ನೀನು ಎಷ್ಟು ಎಡವುತ್ತಿದ್ದೀಯೋ ನಿನಗೆ ಗೊತ್ತೇ! ನಿನ್ನ ಸ್ವಂತ ಅನುಭವದಿಂದ ಒಟ್ಟಾರೆ ನಿರ್ಣಯಗಳನ್ನು ಮಾಡುವುದು ಸರಿಯೇನಮ್ಮ?"

"ಎಡವುತ್ತಿರುವುದು ನಾನಲ್ಲ. ಒಂದು ವಿಷಯವನ್ನು ತೋರಿಸಿದರೆ ಹೆಣ್ಣನ್ನು ಸಮರ್ಥಿಸುವವರೇ ಅಪರೂಪ. ಗಂಡಿಗೆ ಏನು ಪ್ರತ್ಯೇಕತೆ ಇದೆ? ಗರಿಗೆದರಿ ಹಾರಾಡುವ ಸ್ವೇಚ್ಛೆಯಿದೆ. ಅದು ಈಗಲೂ ಇದೆ, ಎಂದಿಗೂ ಇರುತ್ತದೆ. ಇನ್ನು ಹೇಳಿದರೆ ನನಗೆ ಅಸೂಯೆ ಎಂದುಕೊಳ್ಳಬಹುದು. ನೀನೂ ಅಷ್ಟೆ ಅನ್ನುತ್ತೀಯಾ?"

"ಏಕೆ ನಾನು ಗಂಡಸಲ್ಲವೆನ್ನುತ್ತೀಯಾ?"

"ಇರಬಹುದು. ಆದರೆ ನಿನ್ನಲ್ಲಿ ಯಾವುದೋ ಒಂದು ವಿಶಿಷ್ಟತೆ ಇದೆ. ನಿನ್ನನ್ನು ನಂಬಿದವರನ್ನು ನೀನೆಂದೂ ಅನ್ಯಾಯದ ಪಾಲು ಮಾಡುವುದಿಲ್ಲ. ನಿನ್ನನ್ನು ಪ್ರೇಮಿಸುವವ ರನ್ನು ದ್ವೇಷಿಸುವುದಿಲ್ಲ. ನಿನ್ನನ್ನು ಬಯಸಿ ಬಂದವರನ್ನು ನೀನು ನೂಕಿಬಿಡುವುದಿಲ್ಲ."

"ಅದು ನಿನ್ನ ಭ್ರಮೆ. ಕಾಲ ಯಾರನ್ನು ಹೇಗೆ ಬದಲಾಯಿಸುತ್ತದೆಂದು ಯಾರೂ ಹೇಳಲಾರರು. ನೀನು ಈಗ ಹೇಳಿದ ಮಾತುಗಳನ್ನು ನಾಳೆ ನನ್ನ ಹೆಂಡತಿಯ ಬಾಯಿಂದ ಕೇಳಬೇಕು. ಈ ಉದ್ದೇಶಗಳೆಲ್ಲಾ ಅವಳ ಹೃದಯದಲ್ಲಿ ನಾಟಿರಬೇಕು. ಆಗ ನಾನು ನಿನ್ನ ಊಹೆಗೆ ಸರಿಯಾದವನೆಂದು ಅಂಗೀಕರಿಸುತ್ತೇನೆ."

"ಖಂಡಿತ ಹಾಗೆಯೇ ಆಗುತ್ತದೆ. ಕಾಲ ಎಲ್ಲರನ್ನೂ ಬದಲಿಸುವುದಿಲ್ಲ! ಕೆಲವು ವ್ಯಕ್ತಿಗಳು ಕಾಲಾತೀತರಾಗಿರುತ್ತಾರೆ."

* * *

ಊಟ ಮುಗಿದಿತ್ತು. ಮೇಲೆ ಮಾತ್ರ ಗಾಂಭೀರ್ಯತೆಯಿಂದಲೇ ಮಾತನಾಡುತ್ತಿದ್ದೆ ನಾಗಲೀ ಮನಸ್ಸೆಲ್ಲಾ ಯಾವುದೋ ಕಹಿಯಾದ ಪ್ರಸಂಗಗಳ ಕಥೆ ಕೇಳಿದಂತೆ ಕಳವಳಗೊಂಡಿತ್ತು. ಅದೇ ತಾನೇ ನಿದ್ರೆಯಿಂದ ಎದ್ದ ಸೋದರಳಿಯನನ್ನು ಎತ್ತಿಕೊಂಡು ಅವನಿಗೆ ಹೊಸ ಹೊಸ ಮಾತುಗಳನ್ನು ಹೇಳಿಕೊಡುತ್ತಾ ಕುಳಿತೆ.

"ಏ ಪಾಪು! ನಿನಗೆ ಈ ದಿನ ಮಗ್ಗಿ ಹೇಳಿಕೊಡ್ತೀನಿ. ಕಲಿತುಕೋತೀಯಾ?" ಎಂದೆ ನಿದ್ರೆಯ ಮತ್ತಿನಿಂದೆಚ್ಚೆತ್ತು, ಒಪ್ಪಿಗೆಯಿಂದ ತಲೆಯಾಡಿಸಿದ.

"ನಾನು ಹೇಳಿದಂತೆ ಹೇಳ್ತೀಯಾ? ... ಒಂದು."

"ಒದು"

"ಏಯ್, ಒದು ಅಲ್ಲ, ಒಂದು ಕಣೋ!"

"ಒದ್ದು."

"ಮತ್ತೆ ಅದೇನೇ? ಒದ್ದು ಅಂತಿ ಏಕೋ?"

"ನಾ ಹಾಗೇ ಅಂತೀನಿ."

"ಹಾಗೇ ಅಂದ್ರೆ ಒದೀತೀನಿ."

"ಏಕೆ ಒದೀತಿ?"

"ಬಾಯಿ ಮುಚ್ಕೋ ಬೇಕೂಫ್? ಹೇಳಿದ ಹಾಗೆ ಕೇಳೋದು ಬಿಟ್ಟು ಎದಿರುವಾದು ಸುತ್ತೀಯಾ? ಚೋಟುದ್ದದ ಪೋರ!"

"ನನ್ನಾಕೋ ಬೇತೀಯಾ?"

ಅವನ ಪ್ರಶ್ನೆ ಕೇಳಿ ವಿಚಿತ್ರ ದೃಷ್ಟಿಯಿಂದ ಅವನನ್ನೇ ನೋಡುತ್ತಿದ್ದೆ. ಭಾನು ಯಾವಾಗ ಬಂದಳೋ, ಕೆನ್ನೆಗೆ ಕೈ ಆನಿಸಿ ನಿಂತಿದ್ದಳು. ನನ್ನನ್ನೇ ನೋಡುತ್ತಾ.

"ನೋಡಿದೆಯಾ ಕೇಶು ನನ್ನ ಮಗ?"

"ಹೌದಮ್ಮ, ನಿನ್ನ ಮಗನೇ" ಎಂದೆ. ಭಾನು ಅವನನ್ನೆತ್ತಿಕೊಂಡು ಕೆನ್ನೆಗೆ ಮುತ್ತು ಕೊಟ್ಟಳು.

"ಭಾನೂ, ನಿನ್ನ ಮಗ ಡಾಕ್ಟರೇ! ಲಾಯರೇ! ಆಕ್ಟರೇ! ಯಾರು?" ಎಂದೆ ನಗು ನಗುತ್ತಾ.

"ದೊಡ್ಡ ದೊಡ್ಡ ಆಸೆಗಳನ್ನಿರಿಸಿಕೊಂಡು, ಒಂದು ಸಾರಿ ನಿರಾಸೆಗೊಂಡರೂ ಬುದ್ಧಿ ಬರಲಿಲ್ಲವೆನ್ನುತ್ತೀಯಾ? ಈಗ ಆಸೆಯೂ ಇಲ್ಲ. ಯೋಗ್ಯತೆಯೂ ಇಲ್ಲ. ಹೊಟ್ಟೆ ಬಟ್ಟೆಗೆ ಲೋಪವಾಗದಂತೆ ನೀತಿಯಿಂದ ಬಾಳಿದರೆ ಸಾಕು" ಎಂದು ನಿಡಿದಾದ ಉಸಿರೊಂದೆಳೆದು ಹತ್ತಿರ ಕುಳಿತುಕೊಂಡಳು. ಅಷ್ಟರಲ್ಲಿ ನನ್ನ ಮನಸ್ಸು ಸಂತೋಷವನ್ನು ಮರೆತು ಸಪ್ಪೆಯಾಯ್ತು.

"ಏಕಮ್ಮಾ ಅಂತಹ ವೈರಾಗ್ಯದ ಮಾತನಾಡ್ತೀ? ನಾನಿರುವವರೆಗೂ ನಿನಗೂ ನಿನ್ನ ಮಕ್ಕಳಿಗೂ ಯಾವ ಕೊರತೆಯೂ ಇಲ್ಲವೆಂದು ತಿಳಿದುಕೋ ಭಾನು. ನಿನ್ನ ಮಗನನ್ನು ಒಬ್ಬ ಖ್ಯಾತ ವೈದ್ಯನನ್ನಾಗಿ ಮಾಡುತ್ತೇನೆ. ನನಗೇ ಕೊಟ್ಟುಬಿಡುತ್ತೀಯಾ?"

"ಕರೆದುಕೊಂಡು ಹೋಗು. ಅವರಪ್ಪನಿಗೆ ಅರ್ಧ ಭಾರ ತಗ್ಗಿದಂತಾಗುತ್ತದೆ. ಇನ್ನುಳಿದ ಅರ್ಧ ಭಾರ ಕಡಿಮೆಯಾಗುವುದಿಲ್ಲವೆಂದುಕೋ!"

ಅವಳ ಮಾತು ಕೇಳಿ ನನಗೇಕೋ ಕೋಪ ಬಂತು.

"ಭಾನು, ಹಾಗೆಲ್ಲಾ ಮಾತನಾಡಬೇಡವೆಂದು ನಿನಗೆಷ್ಟು ಹೇಳುತ್ತಿದ್ದೇನೆ! ನಿನ್ನ ಧೋರಣೆ ನಿನ್ನದೇನೇ? ಪ್ರತಿ ವಿಷಯವನ್ನು ಏಕಷ್ಟು ವಿಶೇಷವಾಗಿ ಯೋಚಿಸುತ್ತೀ? ಮಗನನ್ನು

ಭಾರವೆಂದು ತಿಳಿದುಕೊಳ್ಳುವ ತಂದೆಯೂ ಇರುತ್ತಾನೆನ್ನುವುದನ್ನು ನಿನ್ನ ಬಾಯಿಂದ ಕೇಳಿ ತಿಳಿದುಕೊಂಡೆ. ಇಲ್ಲ ಸಲ್ಲದ ನಿಂದೆಯನ್ನು ಆರೋಪಿಸುವುದು ಮಾತ್ರ ನಿನಗೆ ಸರಿಯೇನೋ?"

ಒಂದರೆಕ್ಷಣ ನಗುತ್ತಾ ನೋಡಿದಳು ಭಾನು.

"ಹೌದು ಒಳ್ಳೆಯ ಮನಸ್ಸಿಗೆ ಕೆಟ್ಟ ವಿಷಯವೆಂದೂ ಹಿಡಿಯದು. ಮನುಷ್ಯರೆಲ್ಲಾ ನಿನ್ನಂತೆಯೇ ಪ್ರೀತಿಯನ್ನೇ ಹಂಚಿಡುತ್ತಾರೆಂದುಕೊಂಡರೆ, ಅದು ತಪ್ಪು. ತಾಯಿಯಾಗಲೀ ತಂದೆಯಾಗಲೀ, ಹೆಂಡತಿಯಾಗಲೀ, ಮಗನಾಗಲೀ, ಮಮಕಾರ ಹೃದಯಕ್ಕೆ ಎಲ್ಲಾ ಒಂದೇ.

"ನಿಮ್ಮ ಭಾವ ಎಂದಾದರೂ ಮಗನನ್ನು ಎತ್ತಿಕೊಂಡು ಮುದ್ದಾಡಿದ್ದನ್ನು ನೀನು ನೋಡಿದೆಯಾ? ಆಡುತ್ತಿರುವ ಮಗುವನ್ನು ಬೀದಿಯಲ್ಲಿ ಹೋಗುವವರೂ ಎತ್ತಿಕೊಂಡು ಮುದ್ದಾಡಿ ಹೋಗುತ್ತಾರಲ್ಲ! ಹೆತ್ತ ತಂದೆಗೆ ಅಷ್ಟು ಅಭಿಮಾನವೂ ಬೇಡವೇ?"

"ಚೆನ್ನಾಯ್ತು ಇಷ್ಟಕ್ಕೆಲ್ಲಾ..."

"ಹಾಗಲ್ಲಣ್ಣ! ತಂದೆ ಮಗನನ್ನು ಎತ್ತಿಕೊಂಡು ಮುದ್ದಾಡುವುದಿಲ್ಲವೆನ್ನುವುದನ್ನು ಹಗುರ ಮಾಡಿ ತಳ್ಳಿ ಹಾಕಲಾಗದು. ಇನ್ನು ಬೆಳಿಗ್ಗೆ ಕಣ್ಣು ಹೊಸಗಿ ಏಳುತ್ತಿರುವಾಗಲೇ ಪಾಪ ಆ ಮಗುವನ್ನು ನೋಡಿ ಸಿಡುಗುಟ್ಟುತ್ತಾರೆ.. ನಾನು ಐದು ಗಂಟೆಗೆಲ್ಲಾ ಎದ್ದು ಹಿಂದುಗಡೆಗೆ ಹೋಗಿರುತ್ತೇನೆ. ಒಂದೊಂದು ಬಾರಿ ಅವನೇ ಎದ್ದು ನೆಟ್ಟಗೆ ಬರುತ್ತಾನೆ. ಒಂದೊಂದು ಸಾರಿ ಅಳುತ್ತಿರುತ್ತಾನೆ. ಆಗ ಅವರಿಗೆ ನಿದ್ರಾಭಂಗವಾಗುತ್ತದೆ. ಆಗ ರೋಷದಿಂದ."

"ಛೀ! ಶನಿ ಮುಂಡೇದೇ ಏಳೋವಾಗ್ಲೇ ಅತ್ತು ಸಾಯೋದು?" ಎಂದು ರೇಗಿಕೊಂಡು ಒಂಟಿ ರೆಟ್ಟೆ ಹಿಡಿದು ಎಳೆತಂದು ಕೋಣೆಯ ಹೊರಗೆ ಕುಕ್ಕರಿಸಿ ತಾವು ಬಾಗಿಲು ಬಿಗಡಾಯಿಸಿ ಮಲಗುತ್ತಾರೆ. ಎಂಟಾದರೂ ಏಳೊಲ್ಲ. ಒಂಬತ್ತಾದರೂ ಏಳೊಲ್ಲ. ಹೆದರಿಕೆಯಿಂದ ಆ ಕಂದ ಅಳುತ್ತಿರುವುದನ್ನು ನೋಡಿದಾಗ ನನ್ನ ಹೊಟ್ಟೆ ಉರಿದು ಹೋಗುತ್ತದೆ. ಏನು ಕೆಲಸವಿದ್ದರೂ ಬಿಟ್ಟು ಅವನನ್ನು ಎತ್ತಿಕೊಳ್ಳುತ್ತೇನೆ. ಆಗ ಬೇಡ ಬೇಡವೆಂದರೂ ಕಣ್ಣು ತುಂಬಿ ಬಂದು ಕೋಡಿ ಕೋಡಿಯಾಗಿ ಹರಿದುಹೋಗುತ್ತದೆ. ಸಾಮಾನ್ಯವಾಗಿ ಮಕ್ಕಳು ತಂದೆಯ ಎದೆಯ ಮೇಲೆ ಮಲಗಿ ನಿದ್ರಿಸುತ್ತಾರಂತೆ. ಅಂತಹ ಅದೃಷ್ಟ ಇಂತಹ ದೌರ್ಭಾಗ್ಯರಿಗೆಲ್ಲಿರುತ್ತದೆ? ಆದುದರಿಂದಲೇ ಸಾಮಾನ್ಯವಾಗಿ ನಾನು ಏಳುವಾಗಲೇ ಅವನನ್ನು ಹೆಗಲಮೇಲೆ ಹಾಕಿಕೊಂಡು ಬಂದುಬಿಡುತ್ತೇನೆ. ಅಡಿಗೆಯ ಮನೆಯಲ್ಲಿ ಚಾಪೆ ಹಾಕಿ ಮಲಗಿಸಿ ಬೆಚ್ಚಗೆ ಹೊದ್ದಿಸುತ್ತೇನೆ. ಎಳೆಯ ಮಗುವಿನ ಅಳುವಿಗೇ ನಿದ್ರಾಭಂಗವಾಯ್ತು ಎನ್ನುವ ಸುಕುಮಾರರು, ಜೂಜಿಗಾಗಿ ಹಗಲು ರಾತ್ರಿ ಜಾಗರಣೆಯನ್ನಾದರೂ ಮಾಡಬಲ್ಲರು. ಅದನ್ನು ಯಾರೂ ಕೇಳದಿದ್ದರೂ ಅವರ ಅಂತರಾತ್ಮವು ಕೇಳುವುದಿಲ್ಲವೆನ್ನುತ್ತೀಯಾ?

ಇನ್ನು ಅವರು ತಿಂಡಿ ತಿನ್ನುವಾಗ, ಊಟ ಮಾಡುವಾಗಲಂತೂ ಅವನ ಗಾಳಿಯೂ ಅಲ್ಲಿ ಸುಳಿಯಕೂಡದು. ಅವನು ಇವರಿಗೆ ದೃಷ್ಟಿಹಾಕುತ್ತಾನೆಯೆ? ಅವರು ಊಟಮಾಡುವಷ್ಟು ಹೊತ್ತು ಅವನನ್ನು ಅಂಗಳದಲ್ಲಿ ಸುತ್ತಾಡಿಸುತ್ತಿರಬೇಕು. ಸಾಲದ್ದಕ್ಕೆ ಹತ್ತಿರ ಕುಳಿತು ಬಡಿಸುವುದಿಲ್ಲವೆಂದು ಆಕ್ಷೇಪಣೆ! ಅಕಸ್ಮಾತ್ ಅವನು ನನ್ನ ಹಿಂದೆ ಬಂದರೆ,

"ಛೀ! ದರಿದ್ರ ಮುಂಡೇದು! ಕಾಲು ಮುರಿದು ಕುಂಟಾಗಿದ್ರೆ ಚೆನ್ನಾಗಿತ್ತು" ಎಂದು ಸಿಡುಕುತ್ತಾರೆ.

ನನ್ನನ್ನು ಏನಂದ್ರೂ ತಡೆಯಬಲ್ಲೆ, ಆದರೆ ಪಾಪ ಮಗುವನ್ನು ಅಂದರೆ ಸಹಿಸಲಾರೆ. ಆಗ ನಾನೇನಾದ್ರೂ ಮಾತನಾಡಿದರೆ ಅನ್ನ ಬಿಟ್ಟು ಎದ್ದುಹೋಗುತ್ತಾರೆಂದು ಗೊತ್ತು. ಆದರೂ ನಾನು ಸುಮ್ಮನಿರುವುದಿಲ್ಲ.

"ಅಲೆದಾಡೋಕಲ್ಲವಾದರೂ ಅವನು ತನ್ನ ಹೊಟ್ಟೆ ಹೊರೆದುಕೊಳ್ಳೋಕಾದರೂ ಕಾಲಿರಬೇಕು. ಅವನ ಭಾರವನ್ನು ನೀವೇನೂ ಹೊರುತ್ತಿಲ್ಲವಲ್ಲ! ಅವನನ್ನು ಬಾಯಿಗೆ ಬಂದಂತೆ ಅನ್ನಬೇಡಿ!"

"ಏನ್ಮಾಡ್ತೀಯೇ?"

"ಏನೂ ಇಲ್ಲ. ಹಾಗೆಲ್ಲಾ ಅನ್ನಬೇಡಿ ಅಂತ ಕೇಳ್ಕೋತೀನಿ."

"ಹುಂ! ನಾನು ನಿನ್ನ ಕೈಲಿ ಬುದ್ಧಿ ಹೇಳಿಸ್ಕೋಬೇಕು. ನೀನು ಹೇಳೋದು, ನಾನು ಕೇಳೋದು. ಅದು ಈ ಜನ್ಮದಲ್ಲಿಲ್ಲ. ಗೊತ್ತಾಯ್ತೇನ್?"

ಒಮ್ಮೊಮ್ಮೆ ನನಗೂ ಕೋಪ ಮಿತಿ ಮೀರುತ್ತದೆ.

"ಭಾವ ಅಷ್ಟೊಂದು ಮೂರ್ಖನಾಗಿ ವರ್ತಿಸ್ತಾನ್ಯೇ?"

"ನೋಡು ಕೇಶು! ನಂಬೋದು ಬಿಡೋದೂ ನಿನ್ನಿಷ್ಟ. ಮುಂದೆ ಕೇಳು. ಅವರು ಮನೆಯಲ್ಲಿರುವಷ್ಟು ಹೊತ್ತೂ ಅವನು ಅಳಕೂಡದು. ಚೇಷ್ಟೆ ಮಾಡಬಾರದು. ಆಟದ ಸಾಮಾನುಗಳನ್ನಿರಿಸಿಕೊಂಡು ಆಡಕೂಡದು. ತಂದೆ ಎಂಬ ಸಲಿಗೆಯಿಂದ ಹತ್ತಿರ ಹೋಗಬಾರದು. ನಿಶ್ಶಬ್ದವಾಗಿರಬೇಕು, ಇಲ್ಲ ನಿದ್ರಿಸುತ್ತಿರಬೇಕು, ಇಲ್ಲವೇ ಒಂದು ಮೂಲೆಯಲ್ಲಿ ನಿಶ್ಶಬ್ದವಾಗಿ ಬೊಂಬೆಯಂತೆ ಕುಳಿತಿರಬೇಕು. ಚೇಷ್ಟೆ ಮಾಡದೆ, ಶಬ್ದ ಮಾಡದೆಯೇ ಆಡಬೇಕು. ಅದಕ್ಕೆ ವಿರುದ್ಧವಾಗಿ ಅವನು ಶಬ್ದ ಮಾಡುತ್ತಾ ಆಟವಾಡಿದರೆ,ಕೂಗುತ್ತಾ ಮನೆಯಲ್ಲಿ ಓಡಾಡಿದರೆ, ಹಸಿವೆ ಎಂದು ಅತ್ತರೆ, ನಿದ್ರೆ ಬಂದಿತೆಂದು ಹಟ ಮಾಡಿದರೆ, ಆ ಅಪರಾಧಕ್ಕೆಲ್ಲಾ ನಾನೇ ಹೊಣೆ.

ನಾನೇ ಮಗನನ್ನು ಹಡೆದಿದ್ದೇನೆಂದು ಮೆರೆಯುತ್ತೀನಂತೆ, ಹುಚ್ಚು ಹುಚ್ಚಾಗಿ ಮುದ್ದು ಮಾಡಿ ಹಾಳುಮಾಡುತ್ತಿದ್ದೇನಂತೆ, ಒಂದು ಕ್ರಮದಲ್ಲಿ ಬೆಳೆಸದೆ ಹಾಳುಮಾಡುತ್ತಿದ್ದೇನಂತೆ. ಮಾತು ಮಾತಿಗೂ ಅಳುವುದನ್ನು ಕಲಿಸುತ್ತಿದ್ದೇನಂತೆ. ಒಟ್ಟಿನಲ್ಲಿ ಮನೆ ಹಾಳುಮಾಡುತ್ತಿದ್ದೇನಂತೆ. ಹೌದಲ್ಲವೇ?" ಎಂದು ನನ್ನನ್ನೇ ಪ್ರಶ್ನಿಸಿದಳು. ಕೇಳುತ್ತಿದ್ದಂತೆ ನನಗೆ ಮೈಮೇಲೆ ಮುಳ್ಳು ಬಂದಂತಾಯ್ತು.

"ಹುಂ, ಆಮೇಲೆ?"

"ಒಮ್ಮೆ ಅವನಿಗೆ ಅಜೀರ್ಣವಾಯ್ತು. ಭೇದಿಯಾಗುತ್ತಿದ್ದುದರಿಂದ ಎರಡು ಮೂರು ದಿನ ಔಷಧಿ ಪಥ್ಯ ಮಾಡಿದೆ. ಕಡಿಮೆಯಾಗುವ ಬದಲು ಜಾಸ್ತಿಯಾಯ್ತು. ಇನ್ನು ಉಪಯೋಗವಿಲ್ಲವೆಂದು ಡಾಕ್ಟರಿಗೆ ತೋರಿಸಬೇಕು ಎಂದೆ. ಅದಕ್ಕೇನುತ್ತರ ಬಂತು ಗೊತ್ತೇ?"

"ನೀನು ಬಂದರೆ ಡಾಕ್ಟರು ಅಂತ ಹಾರಾಡ್ತೀ. ಅವನಿಗೆ ಋಣ ತೆತ್ತಲ್ಲದ ನಿನಗೆ ತೃಪ್ತಿ ಇಲ್ಲವೇನೋ! ಪಕ್ಕದ ಮನೆಯ ಅಜ್ಜಿಯನ್ನು ಕೇಳಿ ಕಷಾಯ ಹಾಕಿಕೊಡು, ನನಗೆ ಆಫೀಸಿಗೆ ಹೊತ್ತಾಯ್ತು. ಇನ್ನೂ ಜಾಸ್ತಿಯಾದರೆ ನಾಳೆ ನೋಡೋಣ" ಎಂದರು.

"ಎರಡು ಮೂರು ದಿನಗಳಿಂದಲೂ ಈ ಕಷಾಯಗಳನ್ನು ಹಾಕುತ್ತಲೇ ಇದ್ದೇನೆ. ಏನುಪಯೋಗವೂ ಇಲ್ಲವಾಯ್ತು. ಮಗು ಕಣ್ಣು ಬಿಡಲಾರದೆ ಒದ್ದಾಡುತ್ತಿದೆ. ಇನ್ನೂ ಹೆಚ್ಚಾದರೆ ಏನು ಮಾಡಬೇಕು ಹೇಳಿ."

"ಅಬ್ಬಬ್ಬ! ಎಲ್ಲಕ್ಕೂ ಏಕೆ ಹಾಗೆ ಕೂಗಾಡ್ತೀಯೇ? ಎರಡು ದಿನದಿಂದ ಇದ್ದದ್ದೇ! ಇವತ್ತು ಒಂದು ದಿನ ನೋಡೋಣ."

"ನೋಡೋಣ! ಪ್ರಾಣ ಹೋಗುತ್ತಿದ್ದರೂ ನೋಡೋಣ! ಅದೆಂದೂ ಆಗೊಲ್ಲ. ಶಕ್ತಿ ಮೀರಿ ಪ್ರಯತ್ನಿಸ್ತೀನಿ!"

ತಕ್ಷಣ ರಿಕ್ಷಾ ಮಾಡಿಕೊಂಡು ಮಗುವನ್ನೆತ್ತಿಕೊಂಡು ಹೊರಟೆ. ಒಂದು ಅಂಗಡಿಯಲ್ಲಿ ನನ್ನ ಕೈಯ ಉಂಗುರವನ್ನು ಮಾರಿ ಡಾಕ್ಟರಲ್ಲಿಗೆ ಹೋದೆ. ಮಗುವಿಗೆ ಇಂಜಕ್ಷನ್ ಕೊಡಿಸಿ ಮಲಗಿಸಿದ ನಂತರ ನನಗೆ ನೆಮ್ಮದಿಯಾಯ್ತು. ನಾನು ಬೀದಿಬೀದಿ ಸುತ್ತುತ್ತೇನೆ. ಅದರಿಂದ ತನಗೆ ಅಗೌರವವಾಯ್ತು ಅಂತ ರಾದ್ಧಾಂತ ಮಾಡಿದರು. ಅದು ಬೇರೆ. ಈಗ ಹೇಳು ಯಾವ ತಂದೆ ತನ್ನ ಮಗನನ್ನು ನೋಡಿಕೊಳ್ಳುವುದಿಲ್ಲ?"

"ಏನು ಹೇಳಲಿ? ಹೇಗೆ ಹೇಳಲಿ? ಇದೆಲ್ಲಾ ಕೇಳುವುದಕ್ಕೇ ಕಠೋರವಾಗಿವೆ. ತನ್ನ ಮಕ್ಕಳನ್ನು ಪ್ರೀತಿಯಿಂದ ಅಪ್ಪಿಕೊಳ್ಳದ ತಂದೆ ತಂದೆಯೇ? ಹಸುಗಂದನ ಚೇಷ್ಟೆಯಿಂದ ಸಂತೋಷಪಡದ ಮನುಷ್ಯ ಮನುಷ್ಯನೇ? ನಿಶ್ಶಬ್ದಕ್ಕೋಸ್ಕರ ಒದ್ದಾಡುವವನು ಸಂಸಾರವನ್ನೇಕೆ ಕಟ್ಟಿಕೊಳ್ಳಬೇಕು? ವರ್ಷದ ಮಗುವಿಗೆ ಕ್ರಮ ಶಿಕ್ಷಣ ಕಲಿಸಬೇಕನ್ನುವವರು ಹಗಲು ರಾತ್ರಿ ಮನೆಯತ್ತ ಗಮನವಿಲ್ಲದೆ ಜೂಜಿಗಾಗಿ ಏಕೆ ಅಲೆದಾಡಬೇಕು? ಹಣವೆಂದರೇ ಬಾಯಿ ಬಿಡುವವರು, ತನ್ನ ಮಗುವನ್ನೂ ಅಲಕ್ಷಿಸುವಂತಹ ವ್ಯಕ್ತಿ ನೂರಾರು ಹಾಳು ಮಾಡುವುದೇಕೆ? ಅರ್ಥರಹಿತ ವಾದ ಈ ವಿಷಯಗಳಿಗೆ ನಾನೇನು ಅರ್ಥ ಕಲ್ಪಿಸಲಿ? ತಾನು ಚಿಕ್ಕಂದಿನಲ್ಲಿಯೇ ತಾಯಿ ತಂದೆಯರನ್ನು ಕಳೆದುಕೊಂಡುದರಿಂದ ತನ್ನ ಮಗನಾದರೂ ಆ ಪ್ರೀತಿಯನ್ನು ಅನುಭವಿಸಲು ಅವಕಾಶ ಕೊಡಬಾರದೆ? ..... ಏಕಣ್ಣ ಮಾತೇ ಇಲ್ಲ?"

"ನಾನೇನು ಮಾತನಾಡಲಮ್ಮ? ತಾಯಿ, ನೀನು ಎಲ್ಲವನ್ನೂ ನೋಡಿಕೊಳ್ಳುತ್ತೀಯಲ್ಲ ಎಂದು ಅವನು ಏನೂ ಹಚ್ಚಿಕೊಳ್ಳದೆ ತಿರಗುತ್ತಿದ್ದಾನೆಯೇ ವಿನಹ, ಮಗನನ್ನು ಅಸಹ್ಯಿಸಿಕೊಂಡು..."

ಭಾನುವಿಗೆ ಕೋಪಬಂತು.

"ಹುಂ! ಮದುವೆ ಮಾಡಿಕೊಂಡು ಸಂಸಾರ ಹೂಡಿ ಜವಾಬ್ದಾರಿಯನ್ನು ನಿರ್ವಹಿಸುವ ಸಮಯದಲ್ಲೂ ಆ ವ್ಯಕ್ತಿ ಬದಲಾಗುವ ಅಗತ್ಯತೆ ಇಲ್ಲವೆನ್ನುತ್ತೀಯಾ?" ... ಒಂದರೆಘಳಿಗೆ ನಿಲ್ಲಿಸಿದಳು. ಪುನಹ, ... "ಅಣ್ಣ ಒಂದು ವೇಳೆ ಶಾರದ ನನ್ನ ಸ್ಥಿತಿಯಲ್ಲಿದ್ದರೆ ನೀನು ಇಷ್ಟು ಶಾಂತಿಯಿಂದಿರುತ್ತಿದ್ದೆಯಾ?"

"....."

"ಹುಂ! ಇಷ್ಟು ದಿನವೂ ನನ್ನ ಕಷ್ಟ ಸುಖಗಳನ್ನು ವಿಚಾರಿಸುವ ಅಣ್ಣನೊಬ್ಬನಿದ್ದಾನೆ ಅವನೊಂದಿಗೆ ಹೇಳಿಕೊಂಡರೆ ನನಗೆ ಸಹಾನುಭೂತಿಯನ್ನಾದರೂ ಸೂಚಿಸುತ್ತಾನೆಂದು, ಖಂಡುಗ ಆಸೆಯಿಂದ ಇದ್ದೆ. ಕೊನೆಗೆ ನನ್ನೆದೆಯ ಅಳಲನ್ನು ಅರ್ಥ ಮಾಡಿಕೊಂಡಿದ್ದೀ ಎಂದಿದ್ದರಾದರೂ ನನಗೆ ತೃಪ್ತಿಯಾಗುತ್ತಿತ್ತು. ಇನ್ನು ನನಗೆ ಯಾರೂ ಇಲ್ಲ. ಯಾರೂ ಇಲ್ಲ." ಉದ್ರಿಕ್ತಳಾದ ಭಾನುಮತಿ ಮುಖ ಮುಚ್ಚಿಕೊಂಡು ಅಳುತ್ತಿದ್ದುದನ್ನು ನೋಡಿ ನನಗೆ ತಲೆಯೇ ತಿರುಗಿದಂತಾಯ್ತು. ನನಗೂ ದುಃಖ ಉಕ್ಕಿ ಬಂತು. ಭಾನುಮತಿಯ ಕೈಹಿಡಿದುಕೊಂಡು,

"ಭಾನೂ! ಅಮ್ಮಾ! ನನ್ನನ್ನೆಷ್ಟು ತಪ್ಪು ತಿಳಿದುಕೊಂಡೆಯೇ ತಾಯಿ?" ಎಂದೆ.

ತಲೆ ಎತ್ತಿ ನೋಡಿದಳು ಭಾನುಮತಿ.

"ನೋಡಮ್ಮ, ನೀನು ಯಾವುದೋ ಅಶಾಂತಿಯಿಂದ ಆಂದೋಳನೆ ಪಡುತ್ತಿದ್ದೀ ಎಂದು ನಾನೆಂದೋ ಗ್ರಹಿಸಿದೆ. ಆದರೆ ಕೇಳಲು ನನಗೆ ಧೈರ್ಯವಿರಲಿಲ್ಲ. ಈ ದಿನ ನೀನು ಹೇಳಿದ ವಿಷಯನ್ನೆಲ್ಲಾ ಕೇಳಿ ನನ್ನ ಮನಸ್ಸು ಎಷ್ಟು ಕ್ಷೋಭೆಗೊಂಡಿದೆಯೋ ನಿನಗೆ ಗೊತ್ತೆ! ನಿನ್ನ ಕಣ್ಣಿಂದ ನೀರು ಬಂದರೆ ಅದು ನನ್ನನ್ನು ಹೇಗೆ ಹಿಂಸಿಸುತ್ತದೆಯೋ ಅದನ್ನು ನೀನು ಗ್ರಹಿಸಿದ್ದೀಯಾ? ಭಾನೂ! ನಿನ್ನನ್ನು ನಾನು ಅರ್ಥ ಮಾಡಿಕೊಂಡಿಲ್ಲವೆಂದೆಯಾ? ಆದರೆ ನನ್ನ ಭಾವನೆಗಳನ್ನು ವ್ಯಕ್ತಪಡಿಸಿ ನಿನ್ನನ್ನು ಇನ್ನೂ ನಿರಾಸೆಯ ಕತ್ತಲೆಗೆ ತಳ್ಳಿದರೆ ಉಪಯೋಗವೇನು? ಮೃದುವಾದ ನಿನ್ನ ಮನಸ್ಸು ಚೆದುರಿಹೋದರೆ, ನಿನ್ನ ಗಂಡನ ಮೇಲೆ ನೀನು ಅಸಹ್ಯಪಟ್ಟುಕೊಂಡರೆ – ಒಡೆದ ಕನ್ನಡಿ ಸರಿ ಹೋಗುತ್ತದೆಯೆ? ನಿನ್ನ ಮನಸ್ಸನ್ನು ಮತ್ತೂ ಹಾಳುಮಾಡಲು ನನ್ನನ್ನು ಸಹಾಯ ಮಾಡು ಎನ್ನತ್ತೀಯಾ? ಇಷ್ಟು ದಿನಗಳ ಬಾಂಧವ್ಯವನ್ನು ಎಷ್ಟು ಹಗುರ ಮಾಡುತ್ತೀ ಭಾನೂ?"

"ಅಣ್ಣಾ! ಎನ್ನುತ್ತಾ ಭಾನುಮತಿ ನೀರು ತುಂಬಿದ ಕಣ್ಣುಗಳಿಂದ ನನ್ನನ್ನೇ ನೋಡುತ್ತಾ ಕುಳಿತಳು."

"ಭಾನೂ! ಶಾರದೆ ನನ್ನ ತಂಗಿಯೇ ಆಗಿರಬಹುದು. ಆದರೆ ಅವಳಿಗೆ ಯಾವ ರೀತಿಯಲ್ಲಿಯೂ ಈ ಅಣ್ಣನ ಅವಶ್ಯಕತೆಯೇ ಇಲ್ಲ. ಬೇಕಾದಷ್ಟು ಸೀರೆ ಬಟ್ಟೆಗಳು, ನಗ ನಾಣ್ಯಗಳು, ಪದಾರ್ಥಗಳು ಎಲ್ಲವನ್ನೂ ಅಪ್ಪ ಅಮ್ಮ ಹೇರಳವಾಗಿ ಒದಗಿಸುತ್ತಾರೆ. ಶಾರದಳ ಮನಸ್ಸು ನಿನ್ನ ಮನಸ್ಸಿನಂತೆ ಮೃದುವಾದುದಲ್ಲ. ಅಲ್ಲದೆ ಅಂಥವರಿಗೆ ಮಾನಸಿಕವಾದ ಕ್ಲೇಶವೇ ಇರುವುದಿಲ್ಲ. ಅಣ್ಣನಾಗಿ ನಾನು ಏನೋ ಒಂದು ರೀತಿಯಲ್ಲಿ ಸಹಾಯ ಮಾಡುವುದಾದರೆ ಅದು ನಿನಗೇ ಭಾನು."

"ಕ್ಷಮಿಸಣ್ಣ. ನಾನು ಆವೇಶಕ್ಕೊಳಗಾಗುತ್ತೇನೆಂದು ನೀನೇ ಹೇಳುತ್ತಿರುತ್ತೀಯಲ್ಲವೆ? ನನಗೆ ಯಾರೂ ಇಲ್ಲವೆಂದುಕೊಂಡೆನಾದರೂ – ಅದು ನಿಜವಲ್ಲ. ನನಗೆ ನೀನಿದ್ದೀ. ನಿನ್ನ ವಿನಹ ನನ್ನನ್ನು ಪ್ರೀತಿಸುವವರು ಯಾರೂ ಇಲ್ಲ" ಎನ್ನುತ್ತಾ ತುಂಬಿ ಬಂದಿದ್ದ ನನ್ನ ಕಣ್ಣೊರೆಸಿದಳು. ಒರೆಸಲು ಬಂದ ಕೈಯನ್ನು ಹಾಗೇ ಹಿಡಿದುಕೊಂಡೆ.

"ಹಾಗನ್ನಬಾರದಮ್ಮ! ಎಲ್ಲಕ್ಕೂ ಮೊದಲು ನಿನಗೆ ಭಾವ. ಅವನಾದ ಮೇಲೇ ನಾವೆಲ್ಲಾಮ್ಮ. ಯಾವಾಗಲೂ ಒಬ್ಬ ವ್ಯಕ್ತಿಯನ್ನು ಅಷ್ಟು ವಿಸರ್ಜಿಸಬಾರದು, ನಿನ್ನ ಒಳ್ಳೆಯದು, ಕೆಟ್ಟದ್ದು, ಕಷ್ಟ, ಸುಖಗಳನ್ನು ನೋಡಬೇಕಾದವನು ಭಾವನೇ!"

ನಿರ್ಜೀವದ ನಗೆ ನಕ್ಕಳು ಭಾನುಮತಿ.

"ನನ್ನ ಒಳ್ಳೆಯದು – ಕೆಟ್ಟದ್ದು, ಕಷ್ಟ – ಸುಖಗಳು! ಆ ದಾಂಪತ್ಯ ಧರ್ಮ ಈ ಸಂಸಾರದಲ್ಲಿ ಮಾತ್ರ – ಇಲ್ಲಣ್ಣ!"ನಾನೇನೂ ಉತ್ತರ ಕೊಡಲಿಲ್ಲ.

"ನಾನೇನೂ ಹೇಳಿದರೂ ಕೆಡುಕಾಗಿಯೇ ಇರುತ್ತದೇನೋ!" ಕೊಂಚ ಹೊತ್ತಾದ ನಂತರ ಹೇಳಿದಳು.

ಹೇಳು ಎನ್ನುವಂತೆ ಮುಖ ನೋಡಿದೆ. ಏನು ಕೇಳಬೇಕಾಗುತ್ತದೋ ಎಂದು ಭಯವಾಯ್ತು. "ಮಗು ಹುಟ್ಟುವ ಮುನ್ನ ಒಂದು ಸಾರಿ ನನಗೆ ಜ್ವರ ಬಂತು. ರಾತ್ರಿ ಅವರು ಬರುವ ಹೊತ್ತಿಗೆ ಮಲಗಿಕೊಂಡಿದ್ದೆ. ರಾತ್ರಿ ಬಂದವರೇ, "ಏಕೆ ಮಲಗಿದ್ದೀ?" ಎಂದು ಕೇಳಿದರು.

"ಏಕೋ ಜ್ವರ ಬಂದಹಾಗಿದೆ, ತಲೆನೋವು ತಡೆಯಲಾಗಲಿಲ್ಲ ಮಲಗಿಕೊಂಡೆ" ಎಂದೆ.

"ಹುಂ! ರಾತ್ರಿ ಊಟ ಬಿಟ್ಟು ಉಪವಾಸ ಬಿದ್ದುಕೋ! ಬೆಳಗಾಗುವ ಹೊತ್ತಿಗೆ ಅದೇ ಸರಿಯಾಗುತ್ತದೆ. ಅದೇನು ಮಾಡುತ್ತದೆ" ಎಂದರು.

ಕೊನೆಗೆ ಹಣೆಯನ್ನು ಮುಟ್ಟಿ ನೋಡಲಿಲ್ಲ. ಚಳಿಯಾಗುತ್ತಿದ್ದರೆ ಮೈಮೇಲೊಂದು ಹೊದ್ದಿಕೆಯನ್ನೆಳೆಯುವಷ್ಟು ಸೌಜನ್ಯತೆ ಇಲ್ಲವಾಯ್ತು. ನಾನೇ ಎಳೆದು ಹೊದೆದುಕೊಂಡೆ.

ಮಧ್ಯ ರಾತ್ರಿಯಲ್ಲಿ ಯಾವಾಗಲೋ ಎಚ್ಚರವಾಯ್ತು. ದೀಪ ದೊಡ್ಡದಾಗಿ ಉರಿಯತ್ತಿತ್ತು. ಹಾಸಿಗೆಯ ಮೇಲೆ ಅವರಿರಲಿಲ್ಲ. ಬೀದಿಯ ಬಾಗಿಲು ಮುಂದೆ ಮಾಡಿತ್ತು. ಅದು ಮಾಮೂಲಾದರೂ ಅದೇಕೋ ಹೆದರಿಕೆಯಿಂದ ಎದೆ ಧಡ ಧಡಗುಟ್ಟುತ್ತಿತ್ತು. ಎದ್ದು ಬೀದಿ ಬಾಗಿಲ ಅಗಳಿ ಹಾಕಿ ಹಿಂದಿರುಗುವಾಗ ತಲೆ ಝೋಲಿ ಹೊಡೆಯಿತು. ಕುಕ್ಕರಿಸಿಕೊಂಡೆ. ಮೈ ಮುಖವೆಲ್ಲಾ ಬೆವೆತು ಹೋಗತ್ತಿತ್ತು. ವಿಪರೀತ ಬಾಯಾರಿಕೆಯಾಗುತ್ತಿತ್ತು. ಬಿಸಿ ನೀರು ಕಾಯಿಸುವ ಸಹನೆ ಶಕ್ತಿಗಳಿಲ್ಲದೆ ತಣ್ಣೀರನ್ನೇ ಕುಡಿದು ಮಲಗಿದೆ. ನಿದ್ರೆ ಮಾತ್ರ ಹತ್ತಲಿಲ್ಲ. ಸುಮಾರು ಹನ್ನೆರಡೂವರೆ ಒಂದು ಗಂಟೆಯ ಸುಮಾರಿಗೆ ಬಂದರು. ಬಾಗಿಲು ತೆಗೆದೆ.

"ಬೇಗ ಬಂದು ಬಿಡೋಣವೆಂದುಕೊಂಡು ಹೋದೆ ಹೊತ್ತಾಗಿ ಹೋಯ್ತು! ಹೇಗಿದೆ ಜ್ವರ?" ಎನ್ನುತ್ತಾ ಮಂಚದ ತುದಿಯಲ್ಲಿ ಕುಳಿತರು.

"ಹಾಗೇ ಇದೆ."

"ಏನು ಪರವಾಗಿಲ್ಲ. ಬೆಳಗಾಗುವ ಹೊತ್ತಿಗೆ ಸರಿ ಹೋಗುತ್ತದೆ" ಎಂದರು.

ಸರಿ ಹೋಗದ ಮಾತ್ರ ಯಾರಿಗೇನು ಕೊರತೆ? ಧೈರ್ಯ ಹೇಳಿಬನ್ನಿ ಎಂದು ಇವರನ್ನು ಯಾರಾದರೂ ಬೇಡಿಕೊಂಡಿದ್ದರೇ? ಬೇಳಗಾಗುವ ಹೊತ್ತಿಗೆ ಜ್ವರ ಮತ್ತೂ ಜಾಸ್ತಿಯಾಯ್ತು ಅದು ಅವರಿಗೆ ಗೊತ್ತಾಗಲಿಲ್ಲ.

"ಅಡಿಗೆ ಕೈಲಾಗೊಲ್ಲವೋ?"

"ಆಗುವುದಿಲ್ಲ."

"ಹೋಗ್ಲಿ ಬಿಡು. ನಾನು ಹೋಟಲಿನಲ್ಲಿ ತಿನ್ನುತ್ತೇನೆ. ನಿನಗೇನಾದರೂ ಬೇಕೋ?"

"ಏನೂ ಬೇಡ."

"ಸರಿ" ಎಂದು ತಮ್ಮ ಪಾಡಿಗೆ ತಾವು ಹೊರಟುಹೋದರು.

ಜ್ವರ ತಗ್ಗದಿದ್ದರೆ ಡಾಕ್ಟರನ್ನು ಕರೆದುಕೊಂಡು ಬರಬೇಕೆಂದು, ಜ್ವರದಿಂದ ನರಳುತ್ತಿರುವವರಿಗೆ ಏನಾದರೂ ಬ್ರೆಡ್ಡು, ಕಾಫಿ ತಂದುಕೊಡಬೇಕೆಂದೂ ತಿಳಿಯದೆ? ನನ್ನ ಕಣ್ಣುಗಳು ತುಂಬಿ ಬಂದುವು. ಗರ್ಭಿಣಿಯರು ಉಪವಾಸವಿರಬಾರದೆಂದೂ ಅವರಿಗೆ ಗೊತ್ತಿಲ್ಲ. ಹೊಟ್ಟೆಯಲ್ಲಿರುವ ಮಗುವಿಗೋಸ್ಕರವಾಗಿಯಾದರೂ ಏನಾದರೂ ತಿನ್ನಬೇಕು. ಏನು ತಿನ್ನುವುದು? ಯಾರು ತಂದು ಕೊಡುತ್ತಾರೆ? ಹತ್ತು ಗಂಟೆಯವರೆಗೂ ಹಾಗೇ ಮಲಗಿದ್ದೆ. ಬೀದಿಯಲ್ಲಿ ಸೋಡಾ ಮಾರುತ್ತಿದ್ದರು. ಎದ್ದು ಹೋಗಿ ಸೋಡಾ ಮಾರುವವನನ್ನು ಕರೆದೆ. ಒಳಗೆ ಬಂದು ದುಡ್ಡಿಗಾಗಿ ಎಲ್ಲಾ ಕಡೆಯೂ ಹುಡುಕಾಡಿದೆ. ಅಲಮ್ಯೆರಾ, ಮೇಜು,ಪ್ಯಾಂಟುಗಳು, ಡಬ್ಬಿಗಳು, ಎಲ್ಲಾ ಕಡೆಯೂ ಹುಡುಕಿದೆ. ಎಲ್ಲೂ ಒಂದು ಚಿಕ್ಕಕಾಸೂ ಇರಲಿಲ್ಲ. ದಿನ ತುಂಬಿ, ತುಂಬಾ ಜ್ವರದಿಂದ ನರಳುತ್ತಾ, ತಿನ್ನುವುದಕ್ಕೇನೂ ಇಲ್ಲವಾದಾಗ ಸೋಡಾ ಕುಡಿಯಲೂ ದುಡ್ಡಿಲ್ಲವಾಗಿತ್ತು. ನೋಡಿದೆಯಾ? ನನ್ನ ಗಂಡನ ಸಂಪಾದನೆಯನ್ನು ನಾನೆಷ್ಟು ಅನುಭವಿಸುತ್ತಿದ್ದೇನೋ? ಮನೆಯ ಮಡದಿಯಾಗಿ ಎಷ್ಟು ಸ್ವಾತಂತ್ರವನ್ನು ಸಂಪಾದಿಸಿಕೊಂಡಿದ್ದೇನೋ? ಕಣ್ಣೊರಿಸಿಕೊಳ್ಳುತ್ತಾ ಹೊರಗೆ ಬಂದು.

"ಬೇಡ ಹೋಗಪ್ಪ ದುಡ್ಡೆಲ್ಲೂ ಸಿಕ್ಕಲಿಲ್ಲ" ಎಂದೆ.

"ಪರವಾಗಿಲ್ಲಾಮ್ಮ, ನಾಳೆ ಕೊಡಿ" ಎಂದ ಆ ಹುಡುಗ.

"ಬೇಡಪ್ಪ?" ಎಂದವಳೇ ಒಳಗೆ ಬಂದುಬಿಟ್ಟೆ. ಐದು ಹತ್ತು ನಿಮಿಷಗಳಾದರೂ ಅವನು ಬೀದಿಯಲ್ಲಿ ಸೋಡಾ ಮಾರುತ್ತಿದ್ದ. ಎದ್ದು ಹೋಗಿ ಮತ್ತ ಕರೆದೆ,

"ನೋಡಪ್ಪಾ, ನಾಳೆಯೂ ನನ್ನ ಹತ್ತಿರ ಹಣವಿರುವುದಿಲ್ಲ. ಜ್ವರ ಬಂದು ನಿನ್ನೆಯಿಂದ ಹೊಟ್ಟೆಗೇನೂ ಇಲ್ಲ. ದಾಹ ವಿಪರೀತವಾಗಿದೆ. ಒಂದೇ ಒಂದು ಸೋಡ.... ಹಾಗೇ ಕೊಡ್ತೀಯಾ?"

ನನ್ನ ಮಾತು ಕೇಳಿ ಅವನು ಬೆಕ್ಕಸ ಬೆರಗಾದ.

"ಹೌದಪ್ಪ, ನನಗೆ ಸೋಡಾ ಕುಡಿಯಬೇಕೆನ್ನಿಸಿದೆ ನನಗೆ ಹಣ ಸಿಕ್ಕಾಗ ಖಂಡಿತಾ ಕೊಡುತ್ತೇನೆ. ಒಂದು ಸೋಡಾ ಕೊಡುವುದಿಲ್ಲವೇ?"

ಕೊಂಚ ಹೊತ್ತಿನ ನಂತರ, "ಕೊಡ್ತೀನಮ್ಮಾ" ಎನ್ನುತ್ತಾ ಗಾಡಿಯ ಬಳಿಗೋಡಿದ. ಆ ದಿನ ಆ ಸೋಡಾಕ್ಕಾದ ಬೆಲೆ ಅಮೃತಕ್ಕೂ ಇಲ್ಲ. ಆ ಸೋದರ ತೋರಿಸಿದ ದಯೆಯನ್ನು ಎಂದೆಂದಿಗೂ ಮರೆಯುವಂಥದಲ್ಲ ಮತ್ತೆ ಪಡೆಯುವಂಥದಲ್ಲ. ಖಾಲಿ ಸೀಸಾವನ್ನು ಅವನ ಕೈಗೆ ಕೊಡುತ್ತಾ "ನನಗೆ ಹುಟ್ಟಲಿರುವ ಮಗು ನಿನ್ನಂಥಾ ಉತ್ತಮ ಗುಣವನ್ನು

ಪಡೆಯಬೇಕು'' ಎಂದೆ. ಅವನು ನಗುತ್ತಾ ಹೊರಟುಹೋದ. ದಿಕ್ಕಿಲ್ಲದವರಿಗೆ ದೇವರೇ ದಿಕ್ಕು ಎನ್ನುತ್ತಾರೆ. ವಿಶ್ವಾಸ ಕರುಣೆಗಳಿಂದ ಅವನು ಕೊಟ್ಟ ಸೋಡಾ, ಔಷಧಿಯಂತೆ ಕೆಲಸ ಮಾಡಿತು. ಸಂಜೆಯ ಹೊತ್ತಿಗೆ ಜ್ವರ ಕಡಿಮೆಯಾಯ್ತು. ಎದ್ದು ಅಡಿಗೆ ಮಾಡಿದೆ. ಹೇಳುತ್ತಾ ನಿಲ್ಲಿಸಿದಳು ಭಾನು. ನಾನು ಭಾನುವಿನ ಮುಖವನ್ನೇ ನೋಡುತ್ತಾ, ಆವೇಶದಿಂದ ಕೇಳುತ್ತಿದ್ದೆ.

''ಭಾನೂ ನಿನಗೆಂದೂ ಹಣ ಕೊಡುವುದಿಲ್ಲವೆ?''

''ಅದನ್ನು ಬೇರೆ ಕೇಳಬೇಕೆ?''

''ಹೋಗಲಿ ನೀನು ಯಾವಗಲಾದರೂ ಕೇಳಿದ್ದೀಯಾ?''

''ಬೇಕಾದಷ್ಟು ಸಾರಿ, ನನಗೇನಾದರೂ ಬೇಕಾಗುತ್ತದೆಂದೂ, ಘಳಿಗೆ ಘಳಿಗೆಗೂ ಕೇಳಲು ಆಗುವುದಿಲ್ಲವೆಂದೂ, ಆಗಾಗ ನಾಲ್ಕಾಣೆಯೋ, ಎಂಟಾಣೆಯೋ ಕೊಡಿ ಎಂದು ಅರ್ಥವಾಗುವಂತೆ ಕೇಳಿದೆ. ಲಜ್ಜೆ ಬಿಟ್ಟು ಬೇಕಾದಾಗಲೆಲ್ಲಾ ಕೇಳುತ್ತಲೇ ಇದ್ದೆ. ಅಕಸ್ಮಾತ್ತು ಒಂದಾಣೆ ಕೊಟ್ಟರೆ ಅದಕ್ಕೆ ವಿವರವಾಗಿ ಖರ್ಚು ವಿವರ ಕೊಡಬೇಕು. ಹಾಗೆ ಹೇಳುವುದು ನನಗಿಷ್ಟವಿಲ್ಲ. ಕೇಳುವುದನ್ನೂ ಬಿಟ್ಟುಬಿಟ್ಟೆ. ನಾನು ಊರಿಗೆ ಹೋದಾಗ ಅಮ್ಮ ಐದೋ ಹತ್ತೋ ಕೊಡುತ್ತಿದ್ದಳು. ಅದನ್ನೇ ಎಚ್ಚರಿಕೆಯಿಂದ ಉಪಯೋಗಿಸುತ್ತಿರುತ್ತೇನೆ. ಅಲ್ಲದೆ ಹಣವನ್ನು ಎಷ್ಟು ಎಚ್ಚರಿಕೆಯಿಂದ ಉಪಯೋಗಿಸಿದರೂ ಕರಗುತ್ತದೆಯೇ ವಿನಹ ಬೆಳೆಯುತ್ತದೆಯೆ? ಅವರ ಸಂಪಾದನೆಯ ವಿಷಯದಲ್ಲಿ, ಈ ಸಂಸಾರದ ಖರ್ಚಿನ ವಿಷಯದಲ್ಲಿ ನಾನು ಸ್ವಲ್ಪವೂ ಜವಾಬ್ದಾರಿವಹಿಸಿಕೊಳ್ಳಕೂಡದು. ಸ್ವತಂತ್ರಿಸಿ ಒಂದು ವಸ್ತುವನ್ನೂ ನಾನು ಕೊಳ್ಳಕೂಡದು.

ಒಂದು ಸಾರಿ ಬೀದಿಯಲ್ಲಿ ನಾಜೂಕಿನ ಸಾಮಾನುಗಳು ಮಾರಾಟಕ್ಕೆ ಬಂತು. ನೆರೆಹೊರೆಯವರೆಲ್ಲಾ ಗುಂಪುಗೂಡಿ ಸಾಮಾನುಗಳನ್ನು ನೋಡುತ್ತಿದ್ದರು. ನಾನೂ ಬೀದಿಯ ಬಾಗಿಲಿನಲ್ಲಿ ನಿಂತೆ. ಅವರವರಿಗೆ ಇಷ್ಟವಾದುದನ್ನು ಅವರವರು ಕೊಂಡುಕೊಳ್ಳುತ್ತಿದ್ದರು ಪಕ್ಕದ ಮನೆಯಾಕೆ ನನ್ನನ್ನು ಬಲವಂತಪಡಿಸಿದರು. ಊದಿನಕಡ್ಡಿ ಹಚ್ಚಿಡುವ ಪಿಂಗಾಣಿಯ ಸ್ತಂಭ ಒಂದನ್ನು ತೆಗೆದುಕೊಂಡೆ. ತುಂಬಾ ಚೆನ್ನಾಗಿತ್ತು. ನೆರೆಮನೆಯಾಕೆ ಒಂದೂವರೆ ರೂಪಾಯಿ ಸಾಲ ಕೊಟ್ಟರು. ಇವರು ಮನೆಗೆ ಬಂದಾಗ ಅದನ್ನು ತೋರಿಸಿ ದುಡ್ಡು ಕೇಳಿದೆ.''

''ನಿನ್ನನ್ನು ಯಾರು ತೆಗೆದುಕೋ ಎಂದವರು?'' ಎಂದು ಪ್ರಶ್ನಿಸಿದರು.

ಪ್ರಶ್ನೆ ಕೇಳಿ ಅವಕ್ಕಾಗಿ ಹೋದೆ. ಯಾರು ಕೊಳ್ಳಲು ಹೇಳಬೇಕು? ಮನೆಗೋಸ್ಕರ ನನಗೆ ಇಷ್ಟವಾದ ವಸ್ತುವನ್ನು ನಾನೇಕೆ ಕೊಂಡುಕೊಳ್ಳಕೂಡದು? ಇಷ್ಟು ಸಣ್ಣ ವಿಷಯಕ್ಕೂ ಗೃಹಿಣಿಯಾಗಿ ನನಗೆ ಸ್ವತಂತ್ರವಿಲ್ಲವೇ? ತಮ್ಮನ್ನು ಕೇಳದೆ ನನ್ನಿಷ್ಟ ಬಂದಂತೆ ವರ್ತಿಸಿದ್ದರಿಂದ ಆ ಸಾಲ ತೀರಿಸುವ ಅಗತ್ಯ ತಮಗಿಲ್ಲ. ಅದು ತೀರ್ಪು. ಏನು ಮಾಡಲಿ? ಆ ಸಾಲವನ್ನು ಹೇಗೆ ತೀರಿಸುವುದು? ನೆರೆಮನೆಯಾಕೆ ತೆಗೆದುಕೊಳ್ಳುತ್ತಾರೇನೋ ಎಂದು ಆಕೆಯನ್ನು ಕೇಳಿದಾಗ, ತನ್ನ ಸೊಸೆಯ ಹತ್ತಿರ ಬೆಳ್ಳಿಯದೇ ಇದೆ ಎಂದಳು. ಇನ್ನ್ಯಾರಿಗಾದರೂ ಮಾರಲು ನೋಡಿದರೆ

ಏನೆಂದು ತಿಳಿದುಕೊಳ್ಳುತ್ತಾರೆ? ತಡೆಯಲಾರದೆ ದುಃಖ ಉಕ್ಕಿ ಬಂತು, ಏನೋ ಹೋಳಿದಂತಾಯ್ತು. ಅಕ್ಕಿ ಅಳೆದು ಕೊಟ್ಟು ಸಾಲ ತೀರಿಸಿಕೊಂಡೆ.

"ಆಕೆಯ ಸಾಲ ತೀರಿಸಿದೆಯಾ?" ಎಂದು ಕೇಳಿದರು.

"ನನ್ನ ಹತ್ತಿರವಿತ್ತು ಕೊಟ್ಟೆ. ಮೊದಲು ನೀವೇ ಕೊಡುತ್ತಿರೇನೋ ಎಂದು ಕೇಳಿದೆ." ಘನ ವಿಜಯವನ್ನು ಸಾಧಿಸಿದವರಂತೆ ನಕ್ಕು,

"ಸಂಸಾರದ ಜವಾಬ್ದಾರಿ ನಿನಗೂ ಬೇಕಲ್ಲವೆ?"

"ಹೌದು ದುಡ್ಡು ಖರ್ಚು ಮಾಡುವ ವಿಷಯದಲ್ಲಿ ಮಾತ್ರ ನನಗೆ ಸಂಸಾರದ ಜವಾಬ್ದಾರಿ ಕೊಡಿ."

"ಸರಿ, ನನ್ನ ಜವಾಬ್ದಾರಿ, ನನ್ನ ಸ್ವತಂತ್ರತೆಗಳು ಒಂದೆಡೆಗಿರಿಸು. ತಿಂಗಳಿಗೆ ನೂರೈವತ್ತು ರೂಪಾಯಿ ಸಂಬಳ ಬರುವಾಗ ಕೊನೆಗೆ ತಿಂಗಳಿಗೆ ಒಂದು ಹತ್ತು ರೂಪಾಯಿಯನ್ನಾದರೂ ಉಳಿಸಿಕೊಳ್ಳದಿದ್ದರೆ, ಮುಂದೆ ಬೇಕಾಗುವ ಅಗತ್ಯಗಳಿಗೆ ಏನು ಮಾಡಬೇಕು? ಮದುವೆಯಲ್ಲಿ ಹೊಲೆಸಿಕೊಂಡ ಬಟ್ಟೆಗಳೇ ಇಲ್ಲಿಯವರೆಗೂ ಬಂದುವು. ಯಾವ ಖರ್ಚಾದರೂ ಜಾಸ್ತಿಯಾಗುತ್ತದೆಯೇ ವಿನಾ ಕಡಿಮೆಯಾಗುತ್ತಿಲ್ಲವಲ್ಲ! ಈಗಲೇ ನಾವು ಸಾಲಗಾರರ ಪಾಲಾದರೆ ನಾಳೆ ನಮ್ಮ ಮಗುವಿನ ಗತಿ ಏನಾಗಬೇಕು? ಇಂತಹ ವಿಷಯವನ್ನು ಎಷ್ಟು ಬಾರಿ ವಿವರಿಸಿದ್ದೇನೆ ಗೊತ್ತೆ? ಯಾವ ಪ್ರಯೋಜನವೂ ಇಲ್ಲ. "ಮೂರ್ಖನಿಗೆ ಬುದ್ಧಿಯನ್ನು ನೂರ್ಕಾಲ ಪೇಳಿದರೆ ಗೋರ್ಕಲ್ಲ ಮೇಲೆ ಮಳೆ ಸುರಿದಂತೆ ಸರ್ವಜ್ಞ!" ಎನ್ನುವಂತಾಯ್ತು.

ಹಣದ ವಿಷಯ ಅವರು ನನಗೇನೂ ಹೇಳುವುದಿಲ್ಲ. ಎಷ್ಟು ಬರುತ್ತದೆ? ಎಷ್ಟು ಖರ್ಚಾಗುತ್ತದೆ? ಎಷ್ಟು ಉಳಿಯುತ್ತದೆ? ಇಲ್ಲವೇ ಎಷ್ಟು ಸಾಲವಾಗುತ್ತದೆ? ಮೊದಲಿಗೆ ನಮ್ಮ ಯೋಗ್ಯತೆ ಏನು? ನಾವೆಷ್ಟರಲ್ಲಿದ್ದೇವೆ? ಈ ದಿನ ನನ್ನ ಸಂಸಾರದ ಸ್ಥಿತಿ ಏನು ಎಂದರೆ ನನಗೆ ಗೊತ್ತಿಲ್ಲ. ನನಗೆ ಜರತಾರಿ ಸಿರೆಯನ್ನು ತೆಗೆದುಕೊಳ್ಳುವ ಆಸೆಯಿದೆ. ಆದರೆ ಆ ಯೋಗ್ಯತೆ ನನಗಿದೆಯೋ ಇಲ್ಲವೋ ನನಗೆ ಗೊತ್ತಿಲ್ಲ. ನಾನು ಏನನ್ನು ಬಯಸಬಹುದೋ, ನನ್ನ ಯಾವ ಬಯಕೆ ಪೂರಯಿಸಬಲ್ಲದೋ ನನಗರ್ಥವಾಗದು.

"ದುಡ್ಡಿನ ವಿಷಯ ನಿನಗೆ ಅನವಶ್ಯಕ. ನಿನ್ನಿಂದ ಒಂದು ಪೈಸಾ ಸಂಪಾದನೆ ಇಲ್ಲವಾದಾಗ, ನೀನು ಒಂದು ಪೈಸೆ ಕೊಡಲಾಗದಾಗ ಉಳಿಯುತ್ತದೋ, ಅಳಿಯುತ್ತದೋ ನಿನಗೇಕೆ? ಆ ತೊಂದರೆ ನಾನನುಭವಿಸುತ್ತೇನೆ. ನೀನು ಸುಮ್ಮನೆ ಸುಖವಾಗಿರು" ಎನ್ನುತ್ತಾರೆ. ನಾನೆಷ್ಟು ಸುಖಪಡುತ್ತಿದ್ದೇನೋ ನೋಡಿದೆಯಾ? ಹಣದ ವಿಷಯ ಒಂದನ್ನು ಕೇಳದಿದ್ದರೆ ಎಲ್ಲವೂ ಸುಖವೇನೋ. ಒಬ್ಬರ ಪರಿಸ್ಥಿತಿಯನ್ನು ಮತ್ತೊಬ್ಬರು ತಿಳಿದುಕೊಳ್ಳಬೇಕೂಂತಾರೆ. ಒಬ್ಬರ ಕಷ್ಟ ಸುಖಗಳನ್ನು ಮತ್ತೊಬ್ಬರು ಹಂಚಿಕೊಳ್ಳಬೇಕೂಂತಾರೆ. ಅದು ಈ ಸಂಸಾರದಲ್ಲಿ ಹೇಗೆ ಸಾಧ್ಯವಾಗುತ್ತದೆ? ಒಂದು ವೇಳೆ ನನಗೆ ಹೇಳಿದರೆ, ನಾನು ಇಷ್ಟೊಂದು ಖರ್ಚು ಹೇಗಾಯಿತು? ಎಂದು ಕೇಳುತ್ತೇನೆ. ಇಂತಿಂತಹ ಖರ್ಚು ಅನವಶ್ಯಕವೆಂದು ಹೇಳುತ್ತೇನೆ. ಅವರಿಂದಲೇ ನಾನು ಆ ವಿಷಯಗಳಲ್ಲಿ ತಲೆಹಾಕಬಾರದು!

ನೋಡು ಕೇಶು, ನಮ್ಮೂರಿಗೆ ಹೋದರೆ ಅಕ್ಕಂದಿರು, ಅಮ್ಮ ಎಲ್ಲರೂ ರವಿಕೆ ಬಟ್ಟೆ ಮತ್ತು ಇತರ ವಸ್ತುಗಳನ್ನು ಕೊಡುತ್ತಾರೆ. ಎಲ್ಲವನ್ನೂ ತೆಗೆದುಕೊಳ್ಳುವುದೇ ನನ್ನ ಕೆಲಸವಾಗಿದೆಯಾಗಲೀ ಯಾರಿಗೂ ಏನು ಕೊಡಲಾಗಲಿಲ್ಲ. ಅಕ್ಕನ ಮಕ್ಕಳಿಗಾದರೂ ಏನಾದರೂ ತೆಗೆದುಕೊಡೋಣವೆಂದರೆ ಅದಕ್ಕೂ ದುಡ್ಡಿಲ್ಲವಲ್ಲ!

ನಾನು ಊರಿನಲ್ಲಿದ್ದಾಗ ನಿಮ್ಮ ಭಾವ ಒಂದು ಸಾರಿ ಬಂದರು. ಇದ್ದ ಒಂದು ವಾರದಲ್ಲಿ ಊರೆಲ್ಲ ಸುತ್ತಾಡಿ ಇದ್ದ ಹಣವನ್ನೆಲ್ಲಾ ಧಾಂ, ಧೂಂ, ಮಾಡಿದರು. ಕೊನೆಗೆ ಹೊರಡಲು ರೈಲು ಛಾರ್ಜಿಗೂ ದುಡ್ಡಿಲ್ಲವಾಯ್ತು. ನನ್ನ ಹತ್ತಿರ ಯಾವಾಗಲೂ ಏನು ಇರುವದೇ ಇಲ್ಲವಲ್ಲ. ಅಮ್ಮನನ್ನು ಹೇಗೆ ಕೇಳುವುದು? ಅವರವರ ಬಾಳು ಅವರವರು ಬದುಕುತ್ತಿರುವಾಗ, ಅವರವರ ಅಭಿಮಾನ ಅವರವರಿಗಿರುತ್ತದೆ. ಎಲ್ಲ ಸಂದರ್ಭಗಳಲ್ಲೂ ತಾಯಿ ಮಗಳ ಸಂಬಂಧ ನೋಡಲಾಗುತ್ತದೆಯೇ? ಯಾರನ್ನು ಕೇಳಲು ಮನಸ್ಸು ಬರಲಿಲ್ಲ. ನನ್ನ ಮಂಗಳ ಸೂತ್ರದ ನಡುವೆ ಹಾಕಿದ್ದ ಕೊಳವಿ, ಕಾಸುಗಳನ್ನು ತೆಗೆದುಕೊಟ್ಟು, ಅವು ಎಲ್ಲಿಯೋ ಬಿದ್ದು ಹೋದಂತೆ ನಟಿಸಿದೆ. ಅಂತಹ ನಿಕ್ಕಷ್ಟ ಪರಿಸ್ಥಿತಿ ಏಕುಂಟಾಗುವಂತೆ ಮಾಡಬೇಕು? ನಾನು ಹೆಂಡತಿಯೇ ಆಗಿರಬಹುದು. ಹಾಗಂದ ಮಾತ್ರ ಅತಿ ಸಣ್ಣ ವಿಷಯಗಳಿಗೂ ಲಜ್ಜೆ ತೊರೆದು ನನ್ನನ್ನು ನಾ ಅಗ್ಗ ಮಾಡಿಕೊಳ್ಳುವಂತಹ ಅಗತ್ಯ ಪರಿಸ್ಥಿತಿಯನ್ನೇಕೆ ತಂದೊಡ್ಡುಕೊಳ್ಳಬೇಕು? ಆ ಗಂಡಸುತನವೆಲ್ಲಾ ಏನಾಯ್ತು? ಪೌರುಷ ಎಲ್ಲಿ ಹೋಯ್ತು? ಹುಂ, ಈ ಸಂಸಾರದ ಕಥೆಯನ್ನು ಇನ್ನೆಷ್ಟು ಗಂಟೆಗಳ ಕಾಲ ಹೇಳಿದರೆ ಕೇಳುತ್ತೀ?'' ಎಂದು ಕೂಡಲೇ ಮಾತು ಬದಲಿಸಿದಳು.

ನಾನು ನಿಟ್ಟುಸಿರೆಳೆದು,

''ಹೇಳು ಭಾನು, ನಿನ್ನ ಮನಸ್ಸಿನಲ್ಲಿರುವ ನೋವನ್ನೆಲ್ಲಾ ಹೇಳು. ನಾನು ನಿನಗೆ ಯಾವ ರೀತಿಯಲ್ಲೂ ನೆರವಾಗದಾದರೂ ಕೊನೆಗೆ ನಿನ್ನ ನೋವನ್ನೂ ಹಂಚಿಕೊಳ್ಳಬಲ್ಲೆ. ಇಷ್ಟು ಹೇಳಿದವಳು ಏನನ್ನೂ ಮರೆಮಾಚದೆ ಹೇಳು'' ಎಂದ.

''ಅಣ್ಣಾ ನನಗೆ ನಾಳಿನ ಬಗ್ಗೆ ಭಯವಾಗಿದೆ. ಪ್ರತಿ ಹೆಣ್ಣು ಗಂಡನಿಂದ ಯಾವ ರೀತಿಯ ಪ್ರೇಮವನ್ನು ಅನುಭವಿಸುತ್ತಾಳೋ ಅದು ನನಗಿಲ್ಲವಾಗಿದೆ. ನಾನೆಂದರೆ ಅವರಿಗೆ ಎಂತಹ ಅಭಿಮಾನವೂ ಇಲ್ಲ. ಮಗು ಹೊಟ್ಟೆಲ್ಲಿದ್ದಾಗೊಮ್ಮೆ ಮೈಗೆ ಹುಷಾರಿಲ್ಲದಾಗ ಕೆಲಸದವಳನ್ನಿರಿಸಿಕೊಳ್ಳೋಣವೆಂದರೆ ಬೇಸರಿಸಿಕೊಂಡರು. ಇಷ್ಟು ರಾಜಕಾರ್ಯಕ್ಕೆ ನಿನಗೆ ದಾಸಿಯರು ಬೇರೆ ಬೇಕೋ. ಗರ್ಭಿಣಿಯರು ತಮ್ಮ ಕೆಲಸ ತಾವು ಮಾಡಿಕೊಂಡರೆ ಆರೋಗ್ಯವಾಗಿರುತ್ತಾರೆಂದು ಡಾಕ್ಟರು ಹೇಳುವುದಿಲ್ಲವೇ? ತಿಂದು ಕೂಡುವುದೊಂದುಳಿದು ಕೆಲಸ ಕಾರ್ಯಗಳನ್ನೇನು ಮಾಡುತ್ತಿದ್ದೀ? ಮಹಾರಾಣಿಯಾಗಿ ಕುಳಿತಿರಲು ಇಲ್ಲಿ ನಿಮ್ಮಪ್ಪನ ಸಂಪಾದನೆ ಬರುತ್ತಿಲ್ಲವಲ್ಲ'' ಎಂದರು. ಹೌದು! ಕೆಲಸದ ಹುಡುಗಿಗೆ ಕೊಡುವ ಒಂದೂವರೆ ರೂಪಾಯಿ ಇದ್ದರೆ ಒಂದು ದಿನ ಸಿಗರೇಟಿಗಾಗುತ್ತದೆ. ತವರು ಮನೆಯಿಂದ ಆಸ್ತಿಪಾಸ್ತಿಗಳನ್ನು ತರದವರಿಗೆ ಕೆಲಸದವರೇಕೆ? ಮಾರನೆಯ ದಿನದಿಂದಲೇ ಕೆಲಸದ ಹುಡುಗಿಯನ್ನು

ಬರಬೇಡವೆಂದೆ. ದಿನ ತುಂಬುತ್ತಿರುವಂತೆ ಎಂತಹ ಸಣ್ಣ ಕೆಲಸವನ್ನಾದರೂ ಮಾಡಲು ಕೈಲಾಗುತ್ತಿರಲಿಲ್ಲ. ತುಂಬಾ ಆಯಾಸವಾಗುತ್ತಿತ್ತು. ನಾಲ್ಕು ಸಾರಿ ಬಾವಿಯಿಂದ ನೀರು ತಂದರೆ ಕೈಕಾಲು ಸೇದು ಬರುತ್ತಿತ್ತು. ಕೊನೆಗೊಮ್ಮೆ ಅಭಿಮಾನವನ್ನು ಬಿಟ್ಟು,

"ಕಟ್ಟಿಗೆ ಉರಿ ಹಾಕಿದರೆ ಮಸಿ ಪಾತ್ರೆಯನ್ನು ಜ್ಜುವುದು ತುಂಬಾ ಕಷ್ಟವಾಗಿದೆ. ಈ ತಿಂಗಳು ಇಜ್ಜಲು ಹಾಕಿಸಬಾರದೇ?" ಎಂದು ಕೇಳಿದೆ.

"ಅಬ್ಬ, ಎಷ್ಟು ಸುಲಭವಾದ ಬಯಕೆ? ಬೇಕಾಗಿಲ್ಲ" ಎಂದು ಮುಖ ಗಂಟು ಹಾಕಿಕೊಂಡರು. "ಉಗುರಿನಿಂದಾಗುವ ಕೆಲಸಕ್ಕೆ ಕೊಡ್ಲಿ ಏಕೆ?" ಇಜ್ಜಲಿಗೆ ಕೊಡುವ ದುಡ್ಡಿಗೆ ಅದರ ಎರಡರಷ್ಟು ಕಟ್ಟಿಗೆ ಬರುತ್ತದೆ. ಹುಂ. ದುಡ್ಡು ಗಿಡದಲ್ಲಿ ಬೆಳೆಯುತ್ತದೆ ಅಂದು ಕೊಂಡಿದ್ದೀ ಏನೋ?"

ಎಂದರು. ನನಗೂ ರೋಷ ಉಕ್ಕಿ ಬಂತು.

"ಹೌದು, ನನ್ನ ಕೈಲಾಗದೆ ಕೇಳಿದ್ದಕ್ಕೆ ಇಷ್ಟೊಂದು ಮಾತು ಯೋಚನೆ! ಜೂಜಾಟಕ್ಕೆ ಕುಡಿತಕ್ಕೆ ಸಿಗರೇಟಿಗೆ, ನಿಮ್ಮ ಕುಷ್‌ಬಾಷ್ ಖರ್ಚಿಗೆ ಹಣ ಖರ್ಚು ಮಾಡುವಾಗ ಬೆಲೆ ಇರುವುದಿಲ್ಲ. ಗರ್ಭಿಣಿಯರು ತಾವೇ ಕೆಲಸ ಮಾಡಿಕೊಂಡರೆ ಆರೋಗ್ಯವಾಗಿರುತ್ತಾರೆಂದು ಹೇಳುತ್ತಾರಾಗಲೀ, ಸಿಗರೇಟು ಸೇದಿದರೆ ಹೃದಯ ಕೆಟ್ಟು ಖಾಯಿಲೆ ಬರುತ್ತದೆಂದು ಹೇಳಲಿಲ್ಲವೆ?" ಎಂದೆ.

"ಮುಚ್ಚೆ ಬಾಯಿ! ಅವನ್ಯಾವ್ನೋನೇ ನನಗೆ ಹೇಳೋ ನಾಯಿ ನನ್ಮಗ? ನಾನು ರಕ್ತ ಬಸಿದು ಸಂಪಾದಿಸಿದ್ದು, ನನ್ನಿಷ್ಟ ಬಂದಂತೆ ಖರ್ಚು ಮಾಡ್ತೀನೇ? ಈ ಮನೆಗೆ ನಿನ್ನಿಂದ ಒಂದು ಪೈಸಾ ಸಂಪಾದನೆ ಇಲ್ಲ."

"ನಿಮ್ಮ ಉದ್ದೇಶ ಅದೇ ಆದರೆ ವಿವರವಾಗಿ ಹೇಳಿಬಿಡಿ, ನನ್ನ ಕೈಲಾದ್ದು ನಾನೂ ಮಾಡ್ತೀನಿ."

"ಹುಂ! ಇನ್ನೇನು ತಾವು ಸಂಪಾದನೆ ಮಾಡೋದೊಂದೇ ಕಡಿಮೆ. ಒಬ್ಬ ಡಾಕ್ಟರನ್ನೋ ಇಂಜಿನಿಯರನ್ನೋ ಕಟ್ಕೊಂಡು ಸತ್ತಿದ್ರೆ. ನಿನಗೆ ಸುಖ... ಹಣ..."

"ಛೀ! ಛೀ!! ನನ್ನದೇ ಬುದ್ಧಿಹೀನ ಕೆಲಸ. ದಿನ ತುಂಬಿದ ಗರ್ಭಿಣಿ ಹೆಂಗಸಿನ ಮೇಲೆ ಕೊನೆಗೆ ಕರುಣೆಯೂ ಇಲ್ಲದ ವ್ಯಕ್ತಿಯನ್ನು ಮನುಷ್ಯನೆಂದು ಪರಿಗಣಿಸಿ ಮಾತನಾಡಿದ ನಾನು... ನಾನು ಮನುಷ್ಯಳಲ್ಲ! ದನ!!

ದಿನ ತುಂಬುವವರೆಗೂ ನಾನು ಚಾಕರಿ ಮಾಡಬೇಕಾಯ್ತು. ಮಗುವಿನ ಮುಖವನ್ನು ನೋಡಿದಂತೆ ನನ್ನ ಮುಖದಲ್ಲಿ ಆನಂದ ಮನಸ್ಸಿನಲ್ಲಿ ಶಾಂತಿ ಉಂಟಾಗುತ್ತಿದ್ದುವು. ಧೈರ್ಯವೂ ತಾನೇ ತಾನಾಗಿ ಬರುತ್ತಿತ್ತು. ನನಗೊಬ್ಬ ಮಗ ಹುಟ್ಟಿದ. ಅವನನ್ನು ನೋಡಿದರೆ ಅವರು ಖಂಡಿತ ಬದಲಾಯಿಸುತ್ತಾರೆ. ನನ್ನ ಕಷ್ಟ ಸುಖಗಳನ್ನು ಅರ್ಥ ಮಾಡಿಕೊಳ್ಳುತ್ತಾರೆ! ಎಂದು ಆಶಾ ಸೌಧಗಳನ್ನು ನಿರ್ಮಿಸಿಕೊಳ್ಳುತ್ತಾ ಮೂರು ತಿಂಗಳ ಮಗನನ್ನೆತ್ತಿಕೊಂಡೆ.

ಮಗನನ್ನು ನೋಡಿ ತಂದೆ ಸಂತೋಷಿಸಿದ ವಿಷಯ ನಿಜವಾದರೂ ಅದು ನನಗೆ

ತೃಪ್ತಿಯನ್ನಂಟು ಮಾಡುವ ಸಂತೋಷವಲ್ಲ, ನನ್ನ ಯಾತನೆಗಳು ಜಾಸ್ತಿಯಾದುವಾಗಲೀ ಕಿಂಚಿತ್ತೂ ಕಡಿಮೆಯಾಗಲಿಲ್ಲ. ಅವರಿಗೊಂದು ಹೊಸ ಹಾರಾಟವಾರಂಭವಾಯ್ತು.

"ಮಗು ಯಾವಾಗಲೂ ಅಳುತ್ತಿರುತ್ತದೆ ಮನೆಗೆ ಬರುವುದಕ್ಕೇ ಬೇಸರವಾಗುತ್ತದೆ" ಎನ್ನುತ್ತಿದ್ದರು.

ರಾತ್ರಿಯ ಹೊತ್ತು ಮಗುವಿನ ಹಾಸಿಗೆ ಬಟ್ಟೆಗಳನ್ನು ಬದಲಿಸಬೇಕಾದರೆ ನಾನೊಬ್ಬಳೇ ಎದ್ದು ಒದ್ದಾಡಬೇಕಾಗಿತ್ತು. ಮಗುವಿಗೆ ಬಟ್ಟೆ ಬದಲಿಸಿ, ಹಾಸಿಗೆ ಸರಿಪಡಿಸಿ ಮತ್ತೆ ಮಲಗಿಸುವುದರಲ್ಲಿ ಅದು ಅಳಲಾರಂಭಿಸುತ್ತಿತ್ತು.

"ಛೇ, ಛೇ!! ಸುಡುಗಾಡು, ಮನೆ ಇದ್ದ ಹಾಗೇ ಇಲ್ಲ, ಛತ್ರಪಿದ್ದ ಹಾಗಿದೆ. ಹಗಲೆಲ್ಲಾ ಹಾಯಾಗಿ ನಿದ್ರೆ ಹೊಡೆದು ರಾತ್ರಿ ಪ್ರಾರಂಭಿಸುತ್ತೀ ನಿನ್ನ ವಾದ್ಯ ಘೋಷ್ಟೀನ. ರಾತ್ರಿ ಹೊತ್ತು ಮಲಗಲು ಅವಕಾಶವೇ ಇಲ್ಲವಾಗಿದೆ. ನಾನೇನು ಮನೆಯಲ್ಲಿರಬೇಕೋ ಎಲ್ಲಾದರೂ ಹಾಳಾಗಿ ಹೋಗಬೇಕೋ? ಏನು ನಿನ್ನ ಉದ್ದೇಶ?"

"ಮೂರ್ಖನಿಗೆ ಬುದ್ಧಿಯನ್ನು ನೂರ್ಕಾಲ ಪೇಳಿದರೆ ಗೋರ್ಕಲ್ಲ ಮೇಲೆ ಮಳೆ ಸುರಿದಂತೆ ಸರ್ವಜ್ಞ" ಎನ್ನುವಂತೆ ಅವರ ಬಾಯಿಗೇಕೆ ಎದುರಾಡಬೇಕು. 'ನಾಯಿಯ ಬಾಯಿಗೆ ಕೋಲಿರಿಸಿದಂತೆ', ಅದು ನನ್ನ ಉದ್ದೇಶ. ಎಷ್ಟಾದರೂ ಬೈಲಿ, ಕೇಳುತ್ತಾ ಪಸುಗಂದನನ್ನು ಎದೆಗವಚಿಕೊಂಡು ಮಲಗಿಕೊಂಡರೆ ಏನೋ ತೃಪ್ತಿ! ಸಮಾಧಾನ! ಸಾಕು... ಅವನಿಗಾಗಿ ಏನಾದರೂ ಸರಿ ಸಹಿಸಬಲ್ಲೆ.

* * *

ಭಾನು ಅದೇ ಧಾಟಿಯಲ್ಲಿ ನೆನಪಿಗೆ ಬಂದ ಘಟನೆಗಳನ್ನೆಲ್ಲಾ ಹೇಳುತ್ತಿದ್ದಳು. ಕೇಳುತ್ತಿರುವಂತೆ ನನಗೆ ತಲೆ ತಿರುಗಿದಂತಾಯ್ತು. ಭಾನುವಿನ ದಾಂಪತ್ಯ ಇಷ್ಟೊಂದು ಅಧ್ವಾನ್ನವಾಗಿದೆಯೆ? ಇಷ್ಟೊಂದು ನೋವನ್ನು ನುಂಗುತ್ತಿದ್ದಾಳೆಯೇ ಭಾನು?

"ಅಣ್ಣಾ! ನನ್ನ ಕಷ್ಟಸುಖಗಳಿಗೆ ನನ್ನ ಗಂಡನಿದ್ದಾನೆ ಎನ್ನುವ ಆಸೆ ಎಂದೋ ನಿರಾಸೆಯಾಗಿದೆ. ಆದರೆ, ಕೊನೆಗೆ ಅವರಿಗೆ ಮಗುವಿನ ಮೇಲೆ ಮಮತೆಯಾದರೂ ಇದ್ದಿದ್ದರೆ ನನಗೆಷ್ಟೋ ತೃಪ್ತಿಯಾಗುತ್ತಿತ್ತು"

"ಭಾನೂ!"

ಎನ್ನುತ್ತಾ ತುಂಬಿ ಬಂದ ಕಣ್ಣಿನಿಂದ ನೋಡುತ್ತಿದ್ದೆ. ಭಾನು ಏನೊಂದೂ ಉತ್ತರ ಕೊಡಲಿಲ್ಲ.

"ನೀನು ತುಂಬಾ ಬದಲಾಯಿಸಿ ಹೋಗಿದ್ದೀ ಭಾನು?" ಎಂದೆ.

ಭಾನು ನೀರಸವಾಗಿ ನಕ್ಕು–

"ಬದಲಾಯಿಸುವುದೊಂದೇ ಅಲ್ಲ ಕೇಶು. ಅಂದಿನ ಭಾನು ಈಗಿಲ್ಲ. ಆ ಅತಿಶಯ, ಆ ಹೆಮ್ಮೆ, ಆ ಒರಟು ನಂಬಿಕೆ, ಹಟ – ಯಾವುವೂ ಇಲ್ಲ."

ಹೌದು ಎನ್ನುವಂತೆ ಗೋಡೆಯ ಮೇಲಿನ ಗಡಿಯಾರ ಢಣ್! ಢಣ್! ಎಂದು ಎರಡು ಬಾರಿಸಿತು.

"ಹೋಗಲಿ ಭಾನು ಸ್ವಲ್ಪ ಬಿಡುವಾದರೂ ಆಗುತ್ತದೆ, ಸಿನಿಮಾಕ್ಕೆ ಹೋಗಿ ಬರೋಣವೆ?"

ಭಾನು ಸ್ವಲ್ಪ ಹೊತ್ತು ಸುಮ್ಮನಿದ್ದು,

"ನಾನು ಸಿನಿಮಾ ನೋಡುವುದನ್ನು ಬಿಟ್ಟು ಬಿಟ್ಟಿದ್ದೇನೆ. ಸುಮಾರು ವರ್ಷದ ಹತ್ತಿರವಾಯ್ತು."

ಅಯ್ಯೋ ದೇವರೆ, ಇದಕ್ಕೆ ಹಿನ್ನೆಲೆ ಏನಾದರೂ ಇದೆಯೇನೊ! ಅನ್ನಿಸಿತು.

"ಏಕೆ?" ಎನ್ನುವಂತೆ ಮುಖ ನೋಡಿದೆ.

"ನಾನು ನಿಮ್ಮ ಭಾವನವರೊಡನೆ ಸಿನಿಮಾಕ್ಕೆ ಹೋಗಿ ಅವರಿಗೆ ಅವಮಾನಪಡಿಸುವುದು ಸರಿಯಲ್ಲವೆಂದು ಬಿಟ್ಟುಬಿಟ್ಟೆ."

"ಏನಾಯ್ತು ಭಾನೂ?"

"ಆಗುವುದಕ್ಕೇನಿದೆಯಣ್ಣ? ಈ ನಡುವೆ ಒಂದು ಇಂಗ್ಲಿಷ್ ಚಿತ್ರ ಬಂದಿತ್ತು. ಅದರ ಕಥೆಯನ್ನು ಕಾದಂಬರಿಯ ರೂಪದಲ್ಲಿ ಓದಿದ್ದೆ. ಕಥೆ ತುಂಬಾ ಚೆನ್ನಾಗಿತ್ತು. ಆಗ ಇವರನ್ನು,

"ಆ ಚಿತ್ರಕ್ಕೆ ಹೋಗೋಣವೇ?" ಎಂದು ಕೇಳಿದೆ. ಚಿತ್ರ ಹೇಗಿರುತ್ತದೋ ಎನ್ನುವ ಕುತೂಹಲವಿತ್ತು.

ನನ್ನ ಮಾತಿಗೆ ಹಗುರವಾಗಿ ನಕ್ಕು, ಹಾಸ್ಯ, ಅವಹೇಳನೆಯ ದನಿಯಿಂದ,

"ನಿನ್ನ ಮುಖ? ನಿನಗೇನು ಗೊತ್ತಾಗುತ್ತದೆಯೆ? ಇಂಗ್ಲಿಷ್ ಸಿನಿಮಾ ಎಂದರೆ ಹುಡುಗಾಟವೆಂದುಕೊಂಡೆಯಾ? ನಮ್ಮಂಥವರಿಗೇ ತಲೆ ತಿರುಗಿ ಹೋಗುತ್ತದೆ?" ಎಂದರು.

"ಹೋಗಲಿ ನನಗರ್ಥವಾಗದ ಕಡೆ ನೀವು ನನಗೆ ಹೇಳಿ" ಎಂದೆ.

"ಲ...ಕ್ಷಣ..ವಾಯ್ತು. ನಿನ್ನಂತಹ ಅಜ್ಜಿಯರನ್ನು ಕರೆದುಕೊಂಡು ಹೋಗಿ ಹೇಳುತ್ತಾ ಕುಳಿತುಕೊಂಡರೆ ನನಗೆ ಅವಮಾನ, ನಾಚಿಕೆಗೇಡು" ಎಂದರು.

"ಅತೀವ ಅವಮಾನದಿಂದ ನನಗೆ ತಲೆಯೊಡೆದಂತಾಗಿ ತಲೆ ತಗ್ಗಿಸಿದೆ. ನಂತರ ನಾನು ಯಾವ ಸಿನಿಮಾಕ್ಕೂ ಹೋಗುವ ಆಸೆಯನ್ನು ಬಿಟ್ಟುಬಿಟ್ಟೆ. ಒಂದು ವೇಳೆ ಹೋದರೂ ಇಬ್ಬರು ಕಲೆತು ಹೋಗುವುದು ಬಹಳ ಅಪರೂಪ. ಅವರು ಎಂದೂ ಸ್ನೇಹಿತರೊಂದಿಗೇ ಹೋಗುತ್ತಿರುತ್ತಾರೆ. ನಾನು ನೆರೆಮನೆಯ ಅಜ್ಜಿಯೊಂದಿಗೆ ಹೋಗಬೇಕು. ಅಷ್ಟಕ್ಕೆ ಮಾತ್ರ ಆ ಸಿನಿಮಾ ನೋಡದಿದ್ದರೆ ನಷ್ಟವೇನಾಯ್ತು? ಯಾರಿಗೆ ಬೇಕು? ಬಿಟ್ಟುಬಿಟ್ಟೆ."

"ನಿನಗೆ ಇಂಗ್ಲಿಷ್ ಬರುತ್ತದೆಂದು ಭಾವನಿಗೆ ಗೊತ್ತಿಲ್ಲವೇ?"

"ಅವರಿಗೆ ತಿಳಿದಿರುವುದು ನನಗೂ ಗೊತ್ತಿಲ್ಲ. ಅವರ ಬಗೆಗೆ ನನಗೆ ತಿಳಿದಿರುವುದು ಅತ್ಯಲ್ಪ. ಎಂದಾದರೂ ಮಾತನಾಡುವಾಗ ಆಕಸ್ಮಾತ್ ಇಂಗ್ಲಿಷ್ ಪದ ಹೊರಳಿದರೆ- "

"ಆಹಾ! ಲಂಡನ್‌ನಲ್ಲಿಯೇ ಹುಟ್ಟಿ ಬೆಳೆದಂತಿದೆ. ಪಾಪ! ಇಂಡಿಯಾಕ್ಕೆ ಒದ್ದು ಕಳಿಸಿದರೇನೋ! ತಾವು ಯಾವ ಕಾನ್ವೆಂಟಿನಲ್ಲಿ 'ವಿದ್ಯಾಭ್ಯಾಸ' ಮಾಡಿದ್ದು?" ಎಂದು ಅಪಹಾಸ್ಯ ಮಾಡಿದರು. ಮೊದಮೊದಲಿನಲ್ಲಿ ಅವರ ಅಪಹಾಸ್ಯ ನನಗೆ ಅಷ್ಟು ಅರ್ಥವಾಗದಿದ್ದರೂ, ಕ್ರಮೇಣ ಅವರ ವ್ಯಂಗ್ಯ ನನ್ನ ಮನಸ್ಸನ್ನು ಇರಿಯುತ್ತಿತ್ತು. ಅಂದಿನಿಂದ

ಅವರ ಕಣ್ಣೆದುರಿಗೆ ಎಂದೂ ಇಂಗ್ಲಿಷ್ ಪುಸ್ತಕಗಳನ್ನೋದಲಿಲ್ಲ. ಇಲ್ಲಿಗೆ ಬಂದ ಮೊದಲಿನಲ್ಲಿ ಎಷ್ಟೋ ಇಂಗ್ಲಿಷ್ ಪುಸ್ತಕಗಳನ್ನೋದಬೇಕೆಂದೂ, ಇಂಗ್ಲಿಷ್ ಸಿನಿಮಾಗಳನ್ನು ನೋಡ ಬೇಕೆಂದೂ, ಆ ಭಾಷೆಯ ಜ್ಞಾನವನ್ನು ಅಭಿವೃದ್ಧಿಪಡಿಸಿಕೊಳ್ಳಬೇಕೆಂದೂ, ಎಲ್ಲಕ್ಕೂ ಅವರ ಪ್ರೋತ್ಸಾಹವಿರುತ್ತದೆಂದೂ.... ಏನೇನೋ ಅಂದುಕೊಂಡಿದ್ದೆ. ನಾನೆಂತಹ ಹುಚ್ಚಿಯೋ ಈಗ ಅರ್ಥವಾಗುತ್ತಿದೆ.

ಯಾರಾದರೂ ಸ್ನೇಹಿತರು ಆಗಾಗ ಬರುತ್ತಾರೆಂದುಕೋ – ಏನೋ ಮಾತು ಮಾತಾಗುತ್ತದೆ. ಆ ಮಾತಿನ ನಡುವೆ ಬಾಯಿ ಹಾಕಿ ನನ್ನ ಉದ್ದೇಶಗಳನ್ನೇನಾದರೂ ಹೇಳಿದೆನೆಂದರೆ ಮುಗಿದು ಹೋಯ್ತು. ಭಂಗಪಡಬೇಕಾದುದೇ!"

"ಹೆಚ್ಚಾಗಿ ಅವರ ಮಾತು ಏನು ಎಂದಿದ್ದೀ! ಭಗವಂತನಿದ್ದಾನೆಯೇ, ಇಲ್ಲವೇ? ಇಲ್ಲ. ಹೇಗೆ ಹೇಳುತ್ತೀ! ಕಣ್ಣಿಗೆ ಕಾಣಿಸುವುದಿಲ್ಲವಲ್ಲ. ಗಾಳಿ ಕಾಣದಾದರೂ ಶರೀರಕ್ಕೆ ತಗಲುತ್ತದೆ. ವಾಸನೆ ಮೂಗಿಗೆ ತಿಳಿಯುತ್ತದೆ. ಯಾವ ರೀತಿಯಲ್ಲಿಯೂ ಅನುಭವವಿಲ್ಲದ ಆ ದೇವರಿಗೆ ಲಕ್ಷಗಟ್ಟಲೆ ಹಾಳುಮಾಡುವ ಬದಲು ಪ್ರಜೆಗಳು ಸುಖಪಡಬಾರದೆ?"

ಇದೇ ಪ್ರಸಂಗ –

ಹೌದು, ಊರಿನಲ್ಲಿ ಮತ್ತೆ ನಾಲ್ಕು ಕ್ಲಬ್ಬುಗಳನ್ನು ಕಟ್ಟಬಾರದೆ? ಸಿಗರೇಟು ಉಚಿತವಾಗಿ ಸರಬರಾಜು ಮಾಡಬಾರದೆ? ಕೆಲಸ ಮಾಡಿಸದೇ ಸಂಬಳ ಕೊಡಬಾರದೇ? ಸಿನಿಮಾ ತಾರೆಯರೊಂದಿಗೆ 'ಇಂಟರ್‌ವ್ಯೂ' ಏರ್ಪಡಿಸಬಾರದೆ? ಇನ್ನೂ ಕೇಳು – "ದರಿದ್ರ ಸರಕಾರವಾಗಿ ಹೋಯ್ತು..." ಮಾತು ದೇವರಿಂದ ಪುರಾಣಗಳತ್ತ ಹೊರಳುತ್ತದೆ.

"ಆ ಭಾರತವೇನಯ್ಯಾ? ಮಾತನಾಡಿದರೆ ಶಾಪ, ಅನುಗ್ರಹ – ಕಿವಿಗಳಿಂದ ಮಕ್ಕಳು ಹುಟ್ಟುವುದು! ಎಲ್ಲಾ ಬೂಟಾಟಿಕೆ! ದ್ರೌಪದಿ ಮಾತ್ರ ಅದೃಷ್ಟವಂತೆ ಕಣಯ್ಯಾ!"

"ಕುಂತಿ, ದ್ರೌಪದಿಯರು ಪತಿವ್ರತೆಯರು ಹೇಗಾಗುತ್ತಾರಯ್ಯ?"

"ಅಂದಿನ ದಿನಗಳಲ್ಲಿ ಒಬ್ಬ ಹೆಂಗಸಿಗೆ ಎಷ್ಟು ಜನ ಗಂಡಂದಿರಾದರೆ ಅಷ್ಟು ಪತಿವ್ರತೆ ಕಣಯ್ಯಾ?"

"ಅಹ್ಹಹ್ಹಹ್ಹಾ" ಕಿಲಕಿಲನೆ ನಗುವುದು.

ಶಿವ ಶಿವಾ! ನಮ್ಮಂತಹವರು ಕಿವಿಮುಚ್ಚಿ ಕೂಡುವುದೊಂದುಳಿದು ಗತ್ಯಂತರ ವಿಲ್ಲವಾಯ್ತು. ಎಂತಹ ತುಚ್ಛ ವ್ಯಕ್ತಿಗಳಿದ್ದಾರೆ! ನಮ್ಮ ಪುರಾಣ ಗ್ರಂಥಗಳನ್ನೂ, ನಮ್ಮ ಸಂಸ್ಕೃತಿಯನ್ನೂ, ಇಷ್ಟು ಅಲಕ್ಷ್ಯ ಮಾಡಿ ನಗುತ್ತಿದ್ದರೆ ಇವರಿಗೆ ಬಂದ ಕೇಡೇನು?

ನಂತರದ ಶೀರ್ಷಿಕೆ ಸಿನಿಮಾಗಳು –

ಅವರುಗಳ ಸಂಭಾಷಣೆ ಎಷ್ಟು ಅಧ್ವಾನದಿಂದ ಸಾಗುತ್ತಿದೆ ಎನ್ನುವುದು ಕೇಳುವವರಿಗೆ ಅರ್ಥವಾಗುತ್ತದೆ. ಹಾಗೇ ನೋಡಿದರೆ, ಎಲ್ಲಾ ಪದವೀಧರರು, – ಪದವಿಗೂ, ಸಂಸ್ಕಾರಕ್ಕೂ ಸಂಬಂಧವಿಲ್ಲವೆಂದು ನಿರ್ಣಯಿಸಿಕೊಳ್ಳಬೇಕು –

"ನೀವೆಲ್ಲಾ ಓದಿದವರೇ ಅಲ್ಲವೆ? ಪ್ರತಿ ವಿಷಯವನ್ನೂ ಅಷ್ಟು ತಪ್ಪಾಗಿ ಏಕೆ ವಿಮರ್ಶಿಸುತ್ತೀರಿ?" ಎಂದರೆ –

"ನಿನ್ನ ಅನವಶ್ಯಕ ಅಮೌಲ್ಯ ಅಭಿಪ್ರಾಯಗಳನ್ನು ಯಾರೂ ಕೇಳಲಿಲ್ಲ ದಯಮಾಡಿಸು" ಎಂದರು ನಿಮ್ಮ ಭಾವ, ಮುಖದ ಮೇಲೆ ಹೊಡೆದಂತೆ. ನಾನು ಬಂದವರೆಲ್ಲರಿಗೂ ಕಾಫಿ ಹಂಚಬೇಕು. ಕೊಂಚ ಪರಿಚಯವಿರುವುದರಿಂದ ಯಾವಾಗಲಾದರೂ ನಾನೂ ಸಲಿಗೆಯಿಂದ ನಡುವೆ ಬಾಯಿ ಹಾಕುತ್ತೇನೆ. ಅದರಿಂದ ನನ್ನ ಉದ್ದೇಶಗಳನ್ನು ಹೇಳಿದರೆ ಅಷ್ಟು ಜನಗಳ ನಡುವೆ ಹಗುರ ಮಾಡಿ ರೇಗುತ್ತಾರೆ. ಒಂದೆರಡು ಸಾರಿ ಹಾಗಾದನಂತರ ನನ್ನ ಎಚ್ಚರಿಕೆಯಲ್ಲಿ ನಾನಿದ್ದೇನೆ.

"ಮೊದಲಿಗೆ, ಆ ಸ್ನೇಹಿತರ ಮೇಲೆ ಅವರಿಗೇ ಸದಭಿಪ್ರಾಯವಿಲ್ಲ. ಅವರೊಂದಿಗೆ ನಾನು ಜಾಸ್ತಿಯಾಗಿ ಮಾತನಾಡಕೂಡದು. ಅವರು ನನ್ನನ್ನು ಮಾತನಾಡಿಸುತ್ತಾರೆ. ಏನೋ ಉತ್ತರ ಹೇಳಿ ಎರಡು ಮಾತು ಮಾತನಾಡದಿದ್ದರೆ ಚೆನ್ನಾಗಿರುತ್ತದೆಯೊ?"

"ಅವರನ್ನೇಕೆ ಕರೆತರಬೇಕು?"

"ದೊಡ್ಡಸ್ತಿಕೆಗಾಗಿ ಅವರಾಗಿ ಅವರು ಬಂದು ಕುಳಿತುಕೊಳ್ಳುತ್ತಾರೆ. ಮತ್ತೆ ಅವರ ಸ್ನೇಹಿತರು? ಇವರೆಲ್ಲಾ ಒಂದೇ ಅಲ್ಲವೆ?"

"ಭಾವ ಯಾರ ಮನೆಗೂ ಹೋಗುವುದಿಲ್ಲವೇ? ಅಲ್ಲಿ ಹೆಂಗಸರೊಂದಿಗೆ ಮಾತನಾಡುವುದಿಲ್ಲವೇ?"

"ನೀನು ಪರಸ್ತ್ರೀಯರನ್ನು ನಗುತ್ತಾ ಮಾತನಾಡಿಸಬಹುದು. ಬೇಕಾದಷ್ಟು ಹೊತ್ತು ಹರಟೆ ಹೊಡೆಯಬಹುದು. ನಿನ್ನ ಹೆಂಡತಿಯನ್ನು ಪರಪುರುಷನೊಬ್ಬ ಕಣ್ಣೆತ್ತಿಯೂ ನೋಡ ಕೂಡದು. ಏನೋ ಯಾವನು ಎಂತಹವನೋ! ಇಷ್ಟಕ್ಕೂ ನಿನ್ನ ಹೆಂಡತಿಯ ಮೇಲೆ, ನೀನು ಸದಾ ಅಲೆದಾಡುವ ಆ ನಿನ್ನ ಗೆಳೆಯರ ಮೇಲೆ ನಂಬಿಕೆ ಎಲ್ಲಿ? ನಿನ್ನ ಹೆಂಡತಿಗೆ ವ್ಯಕ್ತಿತ್ವವಿರುವುದೆನ್ನುವುದೆಲ್ಲಿ? ನಿನ್ನನ್ನೂ ನಿನ್ನ ಸ್ನೇಹಿತರು ಏಹ್ಯ ಭಾವನೆಯಿಂದ ನೋಡುತ್ತಾರೆನ್ನುವ ಅನುಮಾನವೆಲ್ಲಿ?""ಹಾಗೆ ಯಾವ ಪ್ರತ್ಯೇಕತೆಯನ್ನೂ ಕಾಣದಾದಾಗ ಓದಿದ ಹೆಂಡತಿ ಬೇಕೆಂದು ಮದುವೆಯಾದುದೇಕೆ?"

"ದೊಡ್ಡಸ್ತಿಕೆಗಾಗಿ, ತನ್ನ ಹತ್ತಿರವೂ ಒಂದು ಕಾರಿದೆ. ಒಂದು ಆಲ್ಸೇಷಿಯನ್ ನಾಯಿ ಇದೆ, ಎಂದು ಹೇಳಿಕೊಳ್ಳುವಂತೆ, ತನಗೂ ಓದಿದ ಹೆಂಡತಿ ಎಂದು ಹೇಳಿಕೊಳ್ಳಲು ಮಾತ್ರ! ಮದುವೆಗೆ ಮೊದಲು ಓದಿದ ಹುಡುಗಿಯರ ಮೇಲೆ ಮನಸ್ಸು, ಉಪನ್ಯಾಸಗಳಲ್ಲಿ ಮಾತ್ರ ಸ್ತ್ರೀಗೆ ಸ್ವಾತಂತ್ರ್ಯ ಕೊಡುವುದು. ಸತ್ತು ಸ್ವರ್ಗದಲ್ಲಿರುವವರಿಗೆ ಶಾಪ ಹಾಕುವುದು, ಸ್ತ್ರೀ ಜಾತಿಯ ಮೇಲೆ ಅಪಾರ ಸಹಾನುಭೂತಿಯನ್ನು ಪ್ರದರ್ಶಿಸುವುದು – ಎಲ್ಲವೂ ಈ ಒಂದು ಕಾವಿನಲ್ಲಿಯೇ ನಡೆಯುತ್ತವೆ. ಮದುವೆಯಾಗಿ, ಸಂಸಾರ ಹೂಡುವ ವೇಳೆಗೆ, ಉದ್ರೇಕಗಳು, ವೀರ ಕಂಕಣಗಳು, ಎಲ್ಲಾ ಮುಕ್ತಾಯ. ಗಂಡ–ಹೆಂಡತಿ, ಗಂಡು–ಹೆಣ್ಣು – ಇಷ್ಟು ಮಾತ್ರ ಉಳಿಯುವುದು. ಇನ್ನು ಆ ಭೇದಗಳು ಹಾಗೇ ಮುಂದುವರಿಯತಕ್ಕದ್ದೇ.

* * *

ಒಂದು ಹೆಣ್ಣು ತನ್ನ ಹೆಂಡತಿಯಾಗಿ ಬಂದಾಗ, ಆ ಹೆಣ್ಣಿಗೆ ಎಷ್ಟರ ಮಟ್ಟಿಗೆ ನ್ಯಾಯ ದೊರೆಯುತ್ತದೆ ಎಂದು ಯೋಚಿಸುವವರೆಷ್ಟು ಮಂದಿ? ಅವಳಿಗೆ ಆ ಅಭಿಪ್ರಾಯಗಳಿರುತ್ತವೆ.

ಬಯಕೆಗಳಿರುತ್ತವೆ, ನಿರ್ಣಯಗಳಿರುತ್ತವೆ. ಎಲ್ಲಕ್ಕೂ ಮಿಂಚಿದ ಮನಸ್ಸಿರುತ್ತದೆ. ಇವೆಲ್ಲವನ್ನೂ ಅಂಗೀಕರಿಸುವವರೆಷ್ಟು ಮಂದಿ?

ಹೆಂಡತಿಯಾದ ನಂತರ ವಿದ್ಯದ ಮೇಲೆ ಕಿರು ನೋಟ! ಒಂದು ಕಡೆ ಅಸೂಯೆ – ಹೆಣ್ಣು ಸ್ವತಂತ್ರವಾಗಿ ಯೋಚಿಸಿದರೆ, ಮಾಡಿದ ತಪ್ಪನ್ನು ಎತ್ತಿ ತೋರಿಸಿದರೆ, ಮಾತಿಗೆ ತಕ್ಕ ಜವಾಬು ಕೊಟ್ಟರೆ, ಅಂತಹವನ್ನೆಲ್ಲಾ ವಿದ್ಯದಿಂದಲೇ ಬಂದ ಗರ್ವ – ತರ್ಕಿಸುತ್ತಾಳೆ, ವಾದಕ್ಕಿಳಿಯುತ್ತಾಳೆ. ಗಂಡಸಿಗೆ ಬೆಲೆಯೇ ಇಲ್ಲವಾಗುತ್ತದೆ ಎನ್ನುವುದು!

''ಹುಡುಗಿಯರು ತೋರಿಕೆಗಾಗಿ ನವ ನಾಗರೀಕವಾಗಿ ಸಿನಿಮಾ ತಾರೆಯರನ್ನು ಮೀರಿಸುವಂತೆ, ಸ್ವರ್ಗವನ್ನೇ ಕಣ್ಣಿಗೆ ಕಾಣುವಂತೆ ಸಿದ್ಧಮಾಡುದವರಾಗ ಬೇರೆ. ವೇಷ ಭೂಷಣಗಳನ್ನು ಹಾಗೆ ಮಾಡಿಕೊಂಡರೂ ಮನೋಭಾವದಲ್ಲಿ, ಅಭ್ಯಾಸದಲ್ಲಿ, ಕೆಲಸ ಕಾರ್ಯಗಳಲ್ಲಿ, ನಡೆವಳಿಕೆಯಲ್ಲಿ ಪುರಾಣ ಸ್ತ್ರೀಯರನ್ನು ಮೀರಿಸುವಂತಿರಬೇಕು. ಹದಿನೈದನೆಯ ಶತಮಾನದ ಹೆಂಗಸಿನಂತೆ ದೊಡ್ಡದಾಗಿ ಕುಂಕುಮವಿರಿಸಿಕೊಂಡು ದೊಡ್ಡಂಚಿನ ಕುತ್ತಾಲದ ಸಿರೆಯುಟ್ಟುಕೊಂಡು ನಿಂತರೆ ಯಾವ ಗಂಡು ತಾನೇ ಮೆಚ್ಚುತ್ತಾನೆ? ವೇಷ ಭೂಷಣಗಳಲ್ಲಿ ನಾಗರೀಕತೆಯನ್ನು ಬಯಸುವ ವ್ಯಕ್ತಿ ಮಾನಸಿಕ ವಿಕಾಸವನ್ನೇಕೆ ನಿರೀಕ್ಷಿಸುವುದಿಲ್ಲ?''

''ಭಾನೂ! ಯಾರೋ ಒಬ್ಬರಿಬ್ಬರು ಮಾಡುವ ತಪ್ಪನ್ನು ಇಡೀ ಗಂಡು ಜಾತಿಗೇಕೆ ಅನ್ವಯಿಸುತ್ತೀಯಮ್ಮ?''

''ಕೇಶು ನಾನೆಂದೂ ಹಾಗೆ ಹುಚ್ಚಾಪಟ್ಟೆ ಮಾತನಾಡುವುದಿಲ್ಲ. ನೀನು ಹೇಳುವ ಆ ಯಾರೋ ಒಬ್ಬಿಬ್ಬರ ಮಾತೇನು?''

''ಆದರೆ ಭಾನು, ಅಷ್ಟೊಂದು ಸಂಕುಚಿತ ಮನೋಭಾವ ಉಳ್ಳವರು ಇರುತ್ತಾರೆಂದುಕೊಳ್ಳುವುದು ಸರಿಯಲ್ಲವೇನೋ?''

''ಇದ್ದಾರಯ್ಯ ಇದ್ದಾರೆ – ನಿನ್ನ ಗಂಡು ಜಾತಿಯ ಅಭಿಮಾನ ತೊರೆದು ನೋಡು – ಹೆಣ್ಣನ್ನು ತನ್ನೊಂದಿಗೆ ಸರಿಸಮಾನವಾಗಿ ನೋಡುವುದಿಲ್ಲ ಹೆಣ್ಣೆಂದರೆ ಏನೋ ಬೀಳುಗಳೆಯುವುದು ಗಂಡು ಅಪ್ಪಣೆ ಮಾಡಬೇಕು. ನಾನು ಪುಸ್ತಕಗಳನ್ನು ಓದಕೂಡದು. ಇಂಗ್ಲೀಷು ಸಿನಿಮಾಗಳನ್ನು ನೋಡಕೂಡದು. ಬೀದಿಯ ಬಾಗಿಲಿನಲ್ಲಿ ನಿಂತುಕೊಳ್ಳಕೂಡದು. ಇತರ ಗಂಡಸರೊಂದಿಗೆ ಮಾತನಾಡಕೂಡದು. ಒಂದು ವೇಳೆ ಮಾತನಾಡಿದರೂ ನಗಕೂಡದು. ಸಾಕೆ? ನನ್ನನ್ನು ಒಂದು ಪದಾರ್ಥದಂತೆ ಜೋಪಾನಪಡಿಸಬೇಕೆಂಬ ಕುತೂಹಲ. ಹಾಗಿಲ್ಲವಾದರೆ ಇದೆಲ್ಲಾ ಏನು ಹೇಳು? ನನಗೂ ಕೆಲವು ಒಳ್ಳೆಯದು ಕೆಟ್ಟದುಗಳನ್ನು ತಿಳಿದುಕೊಳ್ಳುವಂತಹ ಬುದ್ಧಿಶಕ್ತಿ ಇದೆ ಎಂದೂ, ನನ್ನಲ್ಲಿ ನಂಬಿಕೆ ಇರಿಸಿ ನನ್ನ ಜವಾಬ್ದಾರಿಯನ್ನು ನನಗೇಕೆ ಬಿಡಕೂಡದು?''

ಅವಳ ಮಾತಿಗೆ ನಾನೇನೂ ಉತ್ತರ ಕೊಡಲಿಲ್ಲ.

''ಒಬ್ಬ ಲೇಖಕನ ಪುಸ್ತವನ್ನೋದುತ್ತೇವೆಂದುಕೋ. ನಮಗೆ ಅವನ ಧೋರಣೇ ಹಿಡಿಯದಾದರೆ ಓದುವುದನ್ನು ನಿಲ್ಲಿಸಿಬಿಡುತ್ತೇವೆ. ಕೆಲವು ಸಿನಿಮಾಗಳನ್ನು ನೋಡುತ್ತೇವೆ,

ಮನಸ್ಸಿಗೆ ಹಿಡಿಯದಿದ್ದರೆ ದುಡ್ಡು ಹೋದರು ಚಿಂತೆಯಿಲ್ಲವೆಂದು ಅರ್ಧದಲ್ಲಿಯೇ ಎದ್ದು ಬಂದುಬಿಡುತ್ತೇವೆ. ಹಾಗೆಯೇ ಕೆಲವು ಗಂಡಸರೊಂದಿಗೆ ಮಾನವೀಯತೆಯ ದೃಷ್ಟಿಯಿಂದ ಮಾತನಾಡುತ್ತೇವೆ. ಅವರ ಗುಣಗಳನ್ನು ಅರ್ಥಮಾಡಿಕೊಂಡು ನಮ್ಮ ಎಚ್ಚರಿಕೆಯಲ್ಲಿ ನಾವಿರುತ್ತೇವೆ. ನಾನು ಹೇಳುವ ಆ ಕೆಲವು ಮಂದಿ ತುಂಬಾ ಜಾಸ್ತಿಯಾಗಬೇಕು. ಯಾವಾಗಲೋ...!''

ಆಗಲೂ ನಾನು ಏನು ಹೇಳಲಿಲ್ಲ. ಮತ್ತೆ ತಾನೇ,

''ಇಂತಹ ಮಾತು ಕೇಳುತ್ತಾ ಕುಳಿತರೆ ಕಾಲ ವ್ಯರ್ಥವೆನ್ನುತ್ತೀಯಾ?'' ಎಂದಳು ನಗು ನಗುತ್ತಾ.

''ಹೌದು. ಅದೇ ಅವಶ್ಯವಾಗುತ್ತಿದೆ''

ಎಂದು ಎದ್ದು ಹೋದಳು. ಕಾಫಿ ಮಾಡಿ ತಂದುಕೊಟ್ಟಳು. ನಂತರ ಅವಳು ಅಡಿಗೆಯ ಪ್ರಯತ್ನ ಮಾಡಲು ಹೋದಳು. ನಾನು ಪುಸ್ತಕದಲ್ಲಿ ತಲೆ ತೂರಿಸಿದೆ. ಆದರೆ ನನ್ನ ಕಣ್ಣಿಗೆ ಅಕ್ಷರಗಳ ಸಾಲೇ ಕಾಣುತ್ತಿರಲಿಲ್ಲ. ಆ ಅಕ್ಷರಗಳೆಲ್ಲಾ ಅಲ್ಲಿಯವರೆಗೂ ಭಾನು ಹೇಳಿದ ಮಾತಾಗಿ ಬದಲಾಗುತ್ತಿದ್ದುವು. ಬಿಕ್ಕಿ ಬಿಕ್ಕಿ ಅಳುತ್ತಿರುವ ಭಾನುಮತಿಯ ಮುಖದ ಚಿತ್ರವೇ ಪುಸ್ತಕದ ಪುಟ ಪೂರ್ತಿ ಸಾಕ್ಷಾತ್ಕರಿಸುತ್ತಿತ್ತು. ಪ್ರಾಯಶಃ ಎಲ್ಲವನ್ನೂ ನನಗೆ ಹೇಳಿ ಅತ್ತದ್ದರಿಂದ ಹೃದಯದ ಭಾರ ಕಡಿಮೆಯಾಗಿತ್ತೋ ಏನೋ ಹಗುರ ಹೃದಯ ಮನಸ್ಸುಗಳಿಂದ ತಿರುಗಾಡುತ್ತಿದ್ದಳು. ಆದರೆ ಪ್ರತಿದಿನವೂ, ಪ್ರತಿ ಗಂಟೆಯೂ ಅನುಭವಿಸುತ್ತಿದ್ದ ಆ ನರಕಯಾತನೆ ಎಂದಿಗೆ ಕೊನೆಯಾಗಬೇಕು? ವಿದ್ಯೆ-ವಿನಯ, ರೂಪ-ಲಾವಣ್ಯ, ಬುದ್ಧಿ ಶಕ್ತಿ ಎಲ್ಲವೂ ಇರುವ ಭಾನು ಗಂಡನಿಗೇಕೆ ಬೇಡವಾಗಿದ್ದಾಳೆ? ಸುಖ ಶಾಂತಿಗಳಿಂದ ತುಂಬಿ ತುಳುಕಬೇಕಾಗಿದ್ದ ಸಂಸಾರವನ್ನು ಅವನೇಕೆ ದುಃಖಮಯ ಮಾಡುತ್ತಿದ್ದಾನೆ?

ಭಾನುವಿನ ದಾಂಪತ್ಯ ಆನಂದಮಯವಾಗಬೇಕಾದರೆ ತಾನೇನು ಮಾಡಬಹುದು? ಎಲ್ಲವೂ ಪ್ರಶ್ನೆಗಳೇ ಆಗುತ್ತಿದ್ದುವಾಗಲೀ, ಉತ್ತರ ಶೂನ್ಯ. ನನ್ನ ಪ್ರೀತಿಯ ತಂಗಿ, ಭಾನು ಇಷ್ಟು ನಿಕೃಷ್ಟವಾದ ಬಾಳು ಬಾಳುತ್ತಿದ್ದಾಳೆಂದರೆ, ಆ ತಪನೆಯನ್ನು ಹೊರಗೆಡುವಂತಹ ಶಕ್ತಿ ನನಗಿಲ್ಲ.

ಓದು ಸಾಗಲಿಲ್ಲ. ಪುಸ್ತಕವನ್ನು ಮುಚ್ಚಿಟ್ಟು ಶತಪಥ ತಿರುಗಲಾರಂಭಿಸಿದೆ.

ತಕ್ಷಣ ಏನೋ ನೆನಪಿಗೆ ಬಂತು.

''ಭಾನು ಊದಿನ ಕಡ್ಡಿಯ ಕಂಭ ತೆಗೆದುಕೊಂಡೆನೆಂದಿದ್ದೀ, ಎಲ್ಲಿ ಕಾಣುವುದಿಲ್ಲವಲ್ಲ'' ಎಂದು ಕೇಳಿದೆ.

''ಹುಂ! ಇನ್ನೂ ಇರುತ್ತದೆಯೆ? ಯಾವಾಗಲೋ ನನ್ನ ಮೇಲೆ ಕೋಪ ಬಂತು, 'ಅತ್ತೆಯ ಮೇಲಿನ ಕೋಪಕ್ಕೆ ಕೊತ್ತಿ ಬಲಿಯಾಯ್ತಂತೆ.' ಅನ್ನುವಂತೆ ಅದರ ಮೇಲೆ ಕೋಪ ತೀರಿಸಿಕೊಂಡರು. ಯಾವ ಪದಾರ್ಥವಾದರೂ ಸರಿ ಕೋಪ ಬಂದಾಗ ನೆಲದ ಪಾಲೇ, - ಅಕಸ್ಮಾತ್ ನನ್ನ ಕೈ ಜಾರಿ ಬಟ್ಟಲು ಕೆಳಗೆ ಬಿದ್ದರೆ ದೊಡ್ಡ ಪಂಚಾಯ್ತಿಯಾಗಿ ಮಹಾಯುದ್ಧವೇ

ಮೊದಲಾಗುತ್ತದೆ. ಅವರಾಗಿ ಒಡೆದರೆ ಕೇಳುವರಿಲ್ಲ. 'ಅತ್ತೆಯೊಡೆದ ಕಂಚಿಗೆ ಬೆಲೆಯುಂಟೆ?' ಆದರೂ ಸಂಪಾದನಾ ಕರ್ತೃಗಳು ಏನು ಹಾಳು ಮಾಡಿದರೂ ಮತ್ತೆ ದುಡ್ಡು ಬಿಸಾಡಿಕೊಳ್ಳುತ್ತಾರೆ. ನಾನು ಹಾಳು ಮಾಡಿದರೆ ಹೇಗೆ ತರಲಿ?"

ಭಾನು ಮಾನಸಿಕ ಆವೇದನೆಯಿಂದ ಹಳೆಯ ಕಾಲದವಳಂತೆ ಮಾತನಾಡುವುದನ್ನು ಅಭ್ಯಾಸ ಮಾಡಿಕೊಂಡಿದ್ದಳು.

ಭಾವ ಬಂದಾಗ ರಾತ್ರಿ ಒಂಬತ್ತು ಗಂಟೆಯಾಗಿತ್ತು. ಅವನ ಮುಖದಲ್ಲಿ ಕಾಠಿಣ್ಯತೆ ಕರಡುಗಟ್ಟಿತ್ತು. ಅದು ನನಗೆ ಸ್ಪಷ್ಟವಾಗಿ ಗೋಚರಿಸುತ್ತಿತ್ತು. ನಾನು ಅವನ ಮುಖವನ್ನೇ ನೋಡುತ್ತಿದ್ದೆ.

"ಅದೇನ್ರೀ ಹಾಗೆ ನೋಡ್ತಿದೀರಿ? ಊಟ ಆಯ್ತೆ?" ಎಂದ.

"ಆಂ... ಹುಂ... ನನ್ನದಾಯ್ತು. ಭಾನು ನಿಮಗಾಗಿ ಕಾಯುತ್ತಿದ್ದಾಳೆ" ಎಂದೆ.

"ಅಬ್ಬ! ಪತಿವ್ರತೆಯ ಮುರುಕು!"

ಎಂದು ವಿಕಟವಾಗಿ ನಗುತ್ತಾ ಚೌಕವನ್ನು ಹೆಗಲಿನ ಮೇಲೆ ಹಾಕಿಕೊಂಡು ಹೊರಟು ಹೋದ. ಅವನು ಬಾಯಿ ಬಿಟ್ಟರೆ ಸಾಕು ಬಣ್ಣಗೇಡು, ವ್ಯಂಗ್ಯದ ಪ್ರವಾಹವೇ ಹರಿಯುತ್ತದೆ. ಕೆಲವರ ಗುಣಲಕ್ಷಣಗಳೇ ಹಾಗೆ. ಬೀದಿಯ ಜಗುಲಿಯ ಮೇಲೆ ಹೋಗಿ ನಿಂತೆ.

ಭಾವ ಒಬ್ಬ ವಿಪರೀತ ವ್ಯಕ್ತಿ. ಆದರೆ ಎಂದೋ ಒಂದು ದಿನ ಅವನಲ್ಲಿಯೂ ಪರಿವರ್ತನೆಯುಂಟಾಗುತ್ತದೆಂದು ನನಗೆ ನಂಬಿಕೆ ಇದೆ. ಎಲ್ಲಾ ರೀತಿಯಲ್ಲಿಯೂ ತನ್ನ ಅಪರಾಧಗಳನ್ನು ಅರ್ಥ ಮಾಡಿಕೊಳ್ಳುತ್ತಾನೆ. ಆ ಕಾಠಿಣ್ಯ ದೌರ್ಜನ್ಯ ಎಲ್ಲವೂ ಅಳಿಯುತ್ತದೆ. ಮೌನವಾಗಿ ಉಳಿಯುತ್ತಾನೆ. ಅದು ಮಾತ್ರ ಸತ್ಯ. ಅದಕ್ಕೆ ಅವಕಾಶ ಬೇಕು. ಸಹನೆ ವಹಿಸಬೇಕು. ಅದೊಂದೇ ಮಾರ್ಗ!

ಎರಡನೆಯ ದಿನ ನಾನು ಹೊರಡುವ ಮುನ್ನ ಭಾನು ಏನೋ ಹೇಳಬೇಕೆಂದು ಹಿಂದುಮುಂದು ನೋಡುತ್ತಾ ಸಂಕೋಚಿಸುತ್ತಿದ್ದಳು.

"ಅಣ್ಣ!..."

ಎಂದು ನಿಲ್ಲಿಸಿದಳು.

"ಏನು?" ಎನ್ನುವಂತೆ ತಲೆ ಎತ್ತಿ ನೋಡಿದೆ.

"ಅಣ್ಣ! ಈಗ ನಿನ್ನೆದುರಿಗೆ ತಲೆ ಎತ್ತಿ ನಿಲ್ಲಬೇಕೆಂದರೆ ನನಗೆ ನಾಚಿಕೆಯಾಗುತ್ತದೆ. ನನ್ನ ಮನೆಯಲ್ಲಿಯೆ ನನಗೆ ಗೌರವಿಲ್ಲವೆಂದು ತಿಳಿದರೆ ಯಾರಾದರೂ ಗೌರವಿಸುತ್ತಾರೆಯೆ? ಬಳ್ಳಿ ಕದಲಿದರೆ ಪೊದೆಯೇ ಕದಲಿದಂತೆ. ನಿನ್ನೆ ಎಲ್ಲವನ್ನೂ ನಿನಗೆ ಹೇಳಿಬಿಟ್ಟೆ. ಎಲ್ಲವನ್ನು ಪೂರ್ತಿ ಮರೆತು ಬಿಡಣ್ಣ! ನಿನ್ನ ದೃಷ್ಟಿಯಲ್ಲಿ ನಮ್ಮಿಬ್ಬರನ್ನೂ ಹಗುರವಾಗಿ ನೋಡ ಬೇಡ.." ಸುಮಾರಾಗಿ ಭಾನುವಿನ ಕಣ್ಣು ತುಂಬಿ ಬಂದಿತ್ತು. ಕಂಠ ಗದ್ಗದವಾಗಿತ್ತು. ಅದೊಂದು ಬಗೆಯ ವಿಷಾದದ ನಗೆಯನ್ನೇ ನಗುತ್ತಾ ನಿಂತಿದ್ದಳು.

ಭಾನುವಿನ ತಲೆಯನ್ನು ಸವರುತ್ತಾ,

"ಮುಗಿಯಿತೇನಮ್ಮ ನಿನ್ನ ಉಪನ್ಯಾಸ..... ಹುಚ್ಚು ಹುಡುಗೀ! ಹಾಗಾದರೆ ನಿನ್ನಣ್ಣನನ್ನು ಚೆನ್ನಾಗಿಯೇ ಅರ್ಥ ಮಾಡಿಕೊಂಡಿದ್ದೀ ಎಂದಾಯ್ತು! ನೀನೇನು ಹೇಳಿದರೂ ನಾನು ಭಾವನನ್ನು ಅಪಾರ್ಥ ಮಾಡಿಕೊಳ್ಳುವುದಿಲ್ಲ. ಒಂದು ರೀತಿಯಲ್ಲಿ ಯೋಚಿಸಿದರೆ ಅವನನ್ನು ಕ್ಷಮಿಸಬೇಕು. ಎಷ್ಟು ಬೈದು ಕೋಪಿಸಿಕೊಂಡು ಹೊರಗೆ ಹೋದರೂ ಹಿಂದಿರುಗಿ ಬಂದಾಗ ಎಲ್ಲವನ್ನೂ ಮರೆತು ತಾನೇ ಮಾತನಾಡಿಸುತ್ತಾನಲ್ಲವೇ?"

"ಹೌದು, ನನಗೆ ಕೋಪ ಬಂದಾಗ, ನಾನಾಗಿ ಮಾತನಾಡಿಸದಿದ್ದರೆ, ಏನೋ ಒಂದು ನೆಪದಿಂದ ಮಾತನಾಡಿಸುತ್ತಾರೆ."

"ಭಾವನಲ್ಲಿ ಒಳ್ಳೆಯತನವೂ ಇಲ್ಲದೆ ಹೋಗಿಲ್ಲಾಮ್ಮ! ಅದನ್ನು ನೀನು ಗ್ರಹಿಸಿದ್ದೀಯಾ?"

"ಹುಂ! ಖಂಡುಗ ವಿಷಕ್ಕೆ ಎಷ್ಟು ಅಮೃತವನ್ನು ಬೆರೆಸಿದರೂ ಅದು ಹಾಳಾಗುವುದೊಂದುಳಿದು ಇನ್ನೇನೂ ಉಪಯೋಗವಾಗದು. ಹಾಳು ತೋಟಕ್ಕೆ ನೀರೆರೆದರೆ ಕೈನೋವು ಬರುವದೇ ವಿನಃ ತೋಟ ಉದ್ಧಾರವಾಗುತ್ತದೆಯೇ? ನಿಮ್ಮ ಭಾವನಲ್ಲಿ ಒಳ್ಳೆಯತನವಿದ್ದರೂ ಇರಬಹುದು. ಅದು ನನ್ನ ಅನುಭವಕ್ಕೆ ಮಾತ್ರ ಬರುವುದಿಲ್ಲ. ನಮ್ಮ ಪ್ರಯತ್ನ ಯಾವಾಗಲೂ ಮತ್ತೊಬ್ಬರಿಂದ ಒಳ್ಳೆಯದೆನಿಸಿಕೊಂಡು, ಸುಖವನ್ನನುಭವಿಸೋಣವೆಂದೇ ಅಲ್ಲವೇ? ಅದೇ ಇಲ್ಲದಾಗ ಏನು ನೆಚ್ಚಿಕೊಂಡು ಸಂತೋಷಪಡಬೇಕು? ಒಂದು ದಿನ ಒಂದು ಗಂಟೆಯ ಕಾಲ ಯಾವುದೋ ಒಂದು ಕಾರಣದಿಂದ ಸಂತೋಷದಿಂದ್ದೇನೆಂದರೆ ನಂತರ ಕೆಲವು ದಿನಗಳ ಕಾಲ ಮತ್ತೇನೋ ಕಾರಣದಿಂದ ಈ ಸಂತೋಷವನುಭವಕ್ಕೆ ಶಿಕ್ಷೆಯನುಭವಿಸುತ್ತೇನೆ."

"ಭಾನು, ಭಾವ ಅವಿವೇಕಿ ನಿಜ! ಆದರೆ ನೀನಲ್ಲಮ್ಮ, ಪ್ರತಿಯೊಂದು ವಿಷಯಕ್ಕೂ ಮನಸ್ಸು ಹಾಳುಮಾಡಿಕೊಳ್ಳಬೇಡ. ಅವನು ಕೋಪದಿಂದಾಡುವ ಪ್ರತಿಮಾತಿಗೂ ಚಿಂತಿಸುತ್ತಾ ನೊಂದುಕೊಳ್ಳಬೇಡ. ಎಂದಾದರೊಂದು ದಿನ ಅವನು ಪೂರ್ತಿ ಬದಲಾಗುತ್ತಾನಮ್ಮ!"

ಭಾನು ಏನು ಮಾತು ಆಡಲಿಲ್ಲ. ಮತ್ತೆ ನಾನೇ,

– "ಭಾವ ಬೆಳೆದ ಪರಿಸ್ಥಿತಿಗಳೇ ಅವನನ್ನಷ್ಟು ಕ್ರೂರಿಯನ್ನಾಗಿ, ಒಂಟಿಯಾಗಿ ಮಾಡಿವೆ. ನೀನು ಅವನ ಕೈಹಿಡಿಯುವವರೆಗೂ ಅವನು ಯಾವ ಬಗೆಯಲ್ಲೂ ಹೆಂಗಸಿನ ಪ್ರೀತಿಯನ್ನು ಅರಿಯ. ತಾಯ ಮಮತೆಯಿಂದ, ಅಕ್ಕ ತಂಗಿಯರ ಅಭಿಮಾನದ ನಡುವೆ ಬೆಳೆದಿದ್ದರೆ ಹೆಂಗಸರ ಕಷ್ಟಸುಖಗಳು ಅರ್ಥವಾಗುತ್ತಿದ್ದುವು. ಆದರೆ ಅವನಿಗೆ ಒಳ್ಳೆಯದು ಕೆಟ್ಟದರ ಅರಿವು ನೀಡುವವರಿಲ್ಲ. ಮಾಡಿದ ತಪ್ಪನ್ನು ತೋರಿಸಿ ದಂಡಿಸುವವರಿಲ್ಲ. ಗಾಳಿಗೆ ಬೆಳೆದ ವ್ಯಕ್ತಿಗೆ ಒಳ್ಳೆಯ ಅಭ್ಯಾಸಗಳು ಎಲ್ಲಿಂದ ಬರಬೇಕು? ನಾವು ದುಡುಕಿ ಒಬ್ಬ ವ್ಯಕ್ತಿಯನ್ನು ತಳ್ಳಬಾರದು. ಯಾವುದೋ ಒಂದು ರೀತಿಯಲ್ಲಿ ಅವನಲ್ಲಿ ಬದಲಾವಣೆಯನ್ನುಂಟು ಮಾಡಲು ಪ್ರಯತ್ನಿಸಬೇಕು. ನೀನು ಅದನ್ನು ಮಾಡುತ್ತಿಲ್ಲ. ಒಂದು ತಪ್ಪು ಮಾಡಿದನೆಂದು ವಿಮರ್ಶಿಸುವುದೂ, ಒಂದು ಮಾತು ಬೈದರೆ ನೊಂದುಕೊಳ್ಳುವುದು, ಅಷ್ಟಕ್ಕೇ ಹಟ ಹಿಡಿದುಕೂಡುವುದೂ ಇದೆಲ್ಲಾ ಏನು ಹೇಳು? ನನ್ನನ್ನು ತಪ್ಪು ತಿಳಿದುಕೊಳ್ಳ ಬೇಡಮ್ಮ. ನಾನು ಹೇಳಿದ್ದು ಸರಿಯಲ್ಲವೆನ್ನುತ್ತೀಯಾ? ಯೋಚಿಸು ಭಾನೂ!" ಎಂದೆ.

"ಅಣ್ಣಯ್ಯಾ! ನನ್ನ ಮೇಲೆ ನಿನಗೆ ಲವಲೇಶವಾದರೂ ನಂಬಿಕೆ ಇದ್ದರೆ ನಾನು ಹೇಳುತ್ತಿರುವುದು ನಿಜ ಎಂದು ನಂಬುತ್ತೀ. ನಿಮ್ಮ ಭಾವನನ್ನು ಬದಲಿಸಲು ನಾನು ಪ್ರಯತ್ನವನ್ನೇ ಮಾಡಲಿಲ್ಲವೆನ್ನುತ್ತಿದ್ದೀ. ಅದು ಮಾತ್ರ ನಿಜವಲ್ಲ. ನಾನು ಖಂಡುಗ ಆಸೆಯನ್ನಿರಿಸಿಕೊಂಡು ಸಂಸಾರ ಮಾಡಲು ಬಂದೆ – ಕೆಲವು ದಿನಗಳ ಕಾಲ – ನಾನೇನು ತಿಳಿಯಲು ಪ್ರಯತ್ನಿಸದಿದ್ದಷ್ಟು ದಿನವೂ ಸುಖವಾಗಿಯೇ ಕಳೆಯಿತು. ಆದರೆ ಕ್ರಮೇಣ ನಿಮ್ಮ ಭಾವ ಎಂದರೆ ಏನು ಎಂದು ಅವಗತವಾಗಲಾರಂಭಿಸಿತು. ದಿನಕ್ಕೆ ಐದು ಪ್ಯಾಕು ಸಿಗರೇಟು ಸುಟ್ಟು ಬಿಸಾಡುತ್ತಿದ್ದರೆ, ಅರ್ಧ ರಾತ್ರಿ ಕಳೆದ ನಂತರ ಮನೆಗೆ ಬರಲಾರಂಭಿಸಿದರೆ, ರಜದ ದಿನಗಳಲ್ಲಿ ಮನೆಯತ್ತ ಮುಖವನ್ನೇ ಹಾಕದೆ ತಿರುಗುತ್ತಿದ್ದರೆ, ಸ್ವಲ್ಪ ತಪ್ಪಾದರೂ ನಿರ್ದಾಕ್ಷಿಣ್ಯವಾಗಿ ಕೂಗಾಡುತ್ತಿದ್ದರೆ ಮೊದಮೊದಲು ಏನಾದರೂ ಆಶ್ಚರ್ಯ ಪಡುತ್ತಿದ್ದೆ. 'ಹುಂ! ನಿಧಾನವಾಗಿ ಹೇಳಿದರೆ ಅವರೇ ಕೇಳುತ್ತಾರೆ, ಸಂಸಾರದ ಜವಾಬ್ದಾರಿ ಅವರಿಗಿಲ್ಲವೆ?' ಎಂದುಕೊಂಡೆ. ಮೊದಮೊದಲು ಅವರೇನು ಅಪರಾಧ ಮಾಡಿದರೂ ನಾನು ತಲೆ ಹಾಕುತ್ತಿರಲಿಲ್ಲ. ಎಷ್ಟೋ ರೀತಿಯಲ್ಲಿ, ಮತ್ತೆಷ್ಟೋ ಮೃದುವಾಗಿ ನಿಧಾನವಾಗಿ ಕೇಳುತ್ತಲೇ ಬಂದೆ-

"ನಿಮಗೆ ಸಿಗರೇಟೆಂದರೆ ತುಂಬಾ ಇಷ್ಟವೆನಿಸುತ್ತದೆ."

"ಬರೀ ಇಷ್ಟವಲ್ಲ, ಪ್ರಾಣ!"

"ಹಾಗಾದರೆ ನಿಮ್ಮ ಪ್ರಾಣಕ್ಕೆ ತಿಂಗಳಿಗೆಷ್ಟು ಖರ್ಚಾಗುತ್ತದೆ?"

"ಮೂವತ್ತರ ಮೇಲೆ..."

"ಅಷ್ಟು ಹಣವನ್ನು ಸುಟ್ಟು ಬಿಸಾಡಿದಂತೆಯೇ ಅಲ್ಲವೆ?"

"ನಿನಗೆ ಗೊತ್ತಿಲ್ಲ ಭಾನು! ಅದಿಲ್ಲದೆ ನಾನಿರಲಾರೆ."

"ಈಗ ನಿಮ್ಮ ಖರ್ಚು ಜಾಸ್ತಿಯಾಗಿದೆ ಗೊತ್ತೇ? ಜೊತೆಗೆ ನಾನೊಬ್ಬಳು ಬೇರೆ."

"ಆದರೆ..."

"ನೋಡೀಂದ್ರೆ! ಅಷ್ಟೊಂದು ಹೊಗೆ ಎಳೆಯುವುದು ಆರೋಗ್ಯಕ್ಕೂ ಒಳ್ಳೆಯದಲ್ಲ ಎನ್ನುತ್ತಾರೆ. ನೀವು ಕ್ರಮ ಕ್ರಮವಾಗಿ ಕಡಿಮೆ ಮಾಡಿದರೆ ಒಳ್ಳೆಯದಲ್ಲವೆ?"

"ಆಗ್ಲಿ ನೋಡೋಣ ಬಿಡೇ!"

"ಅಷ್ಟೇ! ಆ ನೋಡೋಣ ಒಣವಾಗಿಯೇ ಉಳಿಯಿತು – ಇನ್ನೊಂದು ಸಾರಿ ಕೇಳಿದಾಗ ಇನ್ನೇನೋ ಸಬೂಬು ಹೇಳಿದರು. ಮತ್ತೊಂದು ಸಾರಿ ಎಚ್ಚರಿಸಿದಾಗ ಅವರಿಗೆ ಕೋಪ ಬಂತು. ಸ್ವಲ್ಪ ದಿನ ಸುಮ್ಮನಿದ್ದು ಮತ್ತೆ ಕೇಳಿದಾಗ ಕೆರಳಿದರು. ಅದು ತಮಗೆ ಅತ್ಯಗತ್ಯವೆಂದೂ, ಆ ಮಾತಿಗೆ ನಾನು ಪ್ರವೇಶಿಸಕೂಡದೆಂದೂ ಶಪಿಸಿದರು. ಏನು ಮಾಡಲಿ? ಎಲ್ಲಾ ವಿಷಯಗಳಲ್ಲೂ ಹೀಗೇ ಆಯ್ತು. ನನ್ನ ಶಾಂತಿ, ನಂಬಿಕೆ ಎಲ್ಲವೂ ವ್ಯಥಾ ಆದುವು. ಏನೂ ಮಾಡಲಾಗದ ಅಸಹಾಯ ಸ್ಥಿತಿಗೆ ಬಂದೆ. ಆಗಿನಿಂದ ಅವರ ಕೆಲಸಗಳನ್ನು ವಿಮರ್ಶಿಸುವುದೂ, ಅವರ ಮಾತಿಗೆ ಉತ್ತರಿಸುವುದೂ, ಕೋಪ ಬಂದರೆ ಮಾತನಾಡುವು

ದನ್ನು ನಿಲ್ಲಿಸುವುದೂ ಆರಂಭಿಸಿದೆ. ನನ್ನ ಸಂಸಾರವನ್ನು ಸರಿಪಡಿಸಿಕೊಳ್ಳೋಣವೆಂದೂ, ನನ್ನ ಗಂಡನ ಜೊತೆ, ಎಲ್ಲರಂತೆ ಸಂತೋಷದಿಂದಿರಬೇಕೆಂದೂ ನಾನೂ ಹಂಬಲಿಸಿದೆ, ಆಶಿಸಿದೆ. ಅದು ದುರಾಸೆಯೋ ಏನೋ ಅರ್ಥವಾಗದು. ಇಷ್ಟಾದರೂ ನನ್ನ ಪ್ರಯತ್ನದಲ್ಲಿಯೇ ಲೋಪವಿದೆ ಎಂದು ನೀನು ಹೇಳುತ್ತಿದ್ದಿ. ಹಾಗೇ ಆದರೆ ನನ್ನ ಶಕ್ತಿಮೀರಿ ಇನ್ನೂ ಪ್ರಯತ್ನಿಸುತ್ತೇನೆ. ನಂಬುತ್ತೀಯಾ?'' ಎಂದು ನಕ್ಕಳು ಭಾನು.

"ಭಾನು ಯಾವುದಾದರೊಂದು ರೀತಿಯಲ್ಲಿ ನಿನ್ನ ದಾಂಪತ್ಯವನ್ನು ಸರಿಪಡಿಸಬೇಕೆನ್ನುವ ದೊಂದುಳಿದು ಮತ್ಯಾವ ಉದ್ದಿಶ್ಯವೂ ನನಗಿಲ್ಲವಮ್ಮ!"

"ಅಣ್ಣ! ನಾನೀಗ ಕರ್ಮ ಸಿದ್ಧಾಂತಗಳನ್ನೂ, ಪೂರ್ವ ಜನ್ಮದ ಸುಕೃತಗಳನ್ನೂ ಎಲ್ಲವನ್ನೂ ನಂಬುತ್ತೇನಣ್ಣ."

"ಅವು ನಿಜವೇ ಇರಬಹುದಮ್ಮ – ಆದರೆ ಕಣ್ಣಿಗೆ ಕಾಣದ ಆ ಸತ್ಯವನ್ನು ನಂಬಿ ಅನುಭವಿಸುತ್ತಿರುವ ಬಾಳನ್ನು ಅಲಕ್ಷ್ಯ ಮಾಡುತ್ತೀಯಾ? ನಿನಗೆ ಇನ್ನೊಂದು ಸಾರಿ ಹೇಳುತ್ತೇನೆ. ಭಾವ ತಪ್ಪು ಮಾಡಿದರೆ ಕ್ಷಮಿಸು. ಗಂಡನಲ್ಲಿನ ಒಳ್ಳೆಯ ಗುಣಗಳನ್ನೂ, ಅಭ್ಯಾಸಗಳನ್ನೂ ಅನುಭವಿಸುವವಳು ಹೆಂಡತಿಯಾದರೆ, ದುರ್ಗುಣಗಳನ್ನೂ ಅವಳೇ ಅನುಭವಿಸಬೇಕು. ನನ್ನನ್ನು ನೀನು ತಪ್ಪು ತಿಳಿಯದಿದ್ದರೆ ಒಂದು ಮಾತು! ನೀನು ಹೆಂಗಸು. ಆ ಭಾವ ಗಂಡಸಿನಲ್ಲಿ ಯಾವಾಗಲೂ ಇರುತ್ತದೆ. ಬಾಳೆಲೆ ಮುಳ್ಳಿನಂತೆ ಎಚ್ಚರಿಕೆಯಿಂದಿರಬೇಕಾದುದು ತಥ್ಯವಮ್ಮ."

"ಹೌದಣ್ಣ! ಮನೆ ಕಟ್ಟುವುದು ಗಂಡಸಾದರೆ, ಅದನ್ನು ನಿಲ್ಲಿಸುವುದು ಕೇವಲ ಹೆಂಗಸಿನ ಜವಾಬ್ದಾರಿ. ಪವಿತ್ರ ಭಾರತ ದೇಶದಲ್ಲಿ ನಾನು ಪಾಲಿಸಬೇಕಾದ ಸಲಹೆ ಇದು ಮಾತ್ರ!"

ನಾನು ಜೇಬಿನಿಂದ ಹತ್ತು ರೂಪಾಯಿನ ನೋಟನ್ನು ತೆಗೆದು ಅವಳ ಕೈಗೆ ಕೊಡುತ್ತಾ,

"ಇದನ್ನಿಟ್ಟುಕೊಂಡಿರು ಭಾನು! ಯಾವುದಾದರೂ ಖರ್ಚಿಗಾಗುತ್ತದೆ." ಎಂದೆ.

"ನೀನೂ ಒಳ್ಳೆಯವನು! ನನಗೇನು ಖರ್ಚಿರುತ್ತದೆಯೋ?" ಎಂದಳು ನಗುತ್ತಾ.

"ನಿನಗೇನು ಖರ್ಚುಗಳಿರುತ್ತವೆ ಎನ್ನುವುದು ನಿನಗೇ ಗೊತ್ತು. ಮೊದಲು ಇದನ್ನು ತೆಗೆದುಕೋ! ಇಲ್ಲದಿದ್ದರೆ ನನಗೆ ಕೋಪ ಬರುತ್ತದೆ."

"ಚೆನ್ನಾಯ್ತು. ಕೋಪ ಬಂದರೆ ಬರ್ಲಿ ಬಿಡು!"

"ಸರಿ ಹಾಗಾದರೆ ನಾನು ನಿಮ್ಮ ಮನೆಗೆ ಬರುವ ಅಗತ್ಯವಿಲ್ಲವೆನ್ನುತ್ತೀಯಾ?"

"ಅದಕ್ಕೂ ಇದಕ್ಕೂ ಗಂಟು ಹಾಕಬೇಡಣ್ಣ! ಸರಿ ಕೊಡು" ಎಂದಳು.

ನನಗೆ ತೃಪ್ತಿಯಾಯ್ತು, ನಂತರ,

"ನಿನ್ನ ಹತ್ತಿರ ಹಣ ತೆಗೆದುಕೊಂಡಿದ್ದಕ್ಕಲ್ಲಣ್ಣ. ಇಂತಹ ಪರಿಸ್ಥಿತಿ ನನಗೆ ಬಂದುದಕ್ಕೆ ಲಜ್ಜೆಪಡುತ್ತಿದ್ದೇನೆ."

ಎಂದಳು ಆ ಅಭಿಮಾನವತಿ.

"ಸರಿ, ಅದಕ್ಕೇನಮ್ಮ. ಏನೂ ತಿಳಿದುಕೊಳ್ಳಬೇಡ ಭಾನು! ನಿನಗೆ ಸೀರೆಗಳಿವೆಯೆ?"

ಹಾಗೆ ಕೇಳಲು ನನಗೆ ಸಂಕೋಚವೇನೋ ಆಯ್ತು. ಭಾನು ಆಶ್ಚರ್ಯದಿಂದ ನೋಡುತ್ತಾ,
"ಏಕೆ...?" ಎಂದು ಕೇಳಿದಳು.

"ಹೇಳಮ್ಮಾ!"

"ಇವೆ."

"ನಿಜವಾಗಿಯೂ"

"ಹೌದಣ್ಣ! ಅಮ್ಮ ಕೊಂಡು ಕಳಿಸಿದ್ದಳಲ್ಲ!"

"ಇದ್ದರೆ ಸರಿ! ಆದರೆ ನನ್ನಲ್ಲಿ ನಂಬಿಕೆ ಇಡಮ್ಮ! ನನಗೇನಾದರೂ ಪ್ರಾಣ, ಸ್ಫೂರ್ತಿ ಎಂದರೆ, ಅದು ನೀನೇಮ್ಮ! ನೀನು ನೊಂದುಕೊಂಡರೆ ನನಗೆ ಹಿತವಿರುವುದಿಲ್ಲವಮ್ಮ. ನಿನಗೇನು ಬೇಕಾದರೂ ನನಗೆ ಹೇಳು ಅಣ್ಣನ ಹತ್ತಿರ ನಿನಗೆಂತಹ ನಾಚಿಕೆಯಮ್ಮ?"

"ಹುಂ! ನನಗೆ ಇನ್ನೇನು ಬೇಕಾದರೂ ನಿನ್ನನ್ನೇ ಕೇಳುತ್ತೇನೆ ಸರಿಯೆ?"

"ಗುಡ್! ಹಾಗಿರಬೇಕು. ನಮ್ಮ ಭಾನು ಒಳ್ಳೆಯವಳು! ನಾನು ಹೋಗಿ ಬರ್಩ೆ?"

"ರಾಯ್ರೇ, ನನಗೆ ಒಂದೇ ಒಂದು ಅನುಮಾನ. ನಾನು ನಿಮ್ಮ ಪ್ರಾಣ ಅಂದರಲ್ಲ! ಅದು ಎಲ್ಲಿಯವರೆಗೂ ಸ್ವಾಮಿ?"

ಎಂದು ನಕ್ಕಳು. ಅವಳ ಮಾತಿನ ಅಂತರಾರ್ಥ ನನಗೆ ಗೊತ್ತು. ನಕ್ಕು ನಾನು,
"ಸುಶೀಲ ಬರುವವರೆಗೂರೀ!" ಎಂದೆ.

"ಆಮೇಲೆ.?"

"ಏನೋರೀ!"

ಕೂಡಲೆ ಅವಳ ಮುಖ ವಿವರ್ಣವಾಯ್ತು. ನೇರವಾಗಿ ನನ್ನ ಮುಖವನ್ನೇ ನೋಡುತ್ತಾ,
"ನಿಜವಾಗಿಯೂ ನನ್ನನ್ನು ಮರೆತು ಬಿಡುತ್ತೀಯಾಣ್ಣ" ಕೇಳಿದಳು.

"ಭಾನೂ! ಆ ಪ್ರಶ್ನೆಯನ್ನು ನಿನ್ನ ಅಂತರಾತ್ಮಕ್ಕೆ ಹಾಕು. ಉತ್ತರ ಸಿಗುತ್ತದೆ." ಎಂದೆ.
ಹಗುರವಾಗಿ ನಕ್ಕಳು ಭಾನು. ಅವಳಿಂದ ಬೀಳ್ಕೊಂಡು ಹೊರಟೆ.

* * *

ಭಾನುವಿನ ಯೋಚನೆಯೇ ಯಾವಗಲೂ ನನ್ನನ್ನು ಪೀಡಿಸುತ್ತಿದ್ದುವು. ಭಾನುವಿಗೆ ಧೈರ್ಯವೇನೋ ಹೇಳಿದೆ. ಆದರೆ ನಿಜವಾಗಿಯೂ ನಾನು ನಂಬಿದ್ದೇನಾದರೂ ನಡೆಯುತ್ತದೆಯೆ? ಭಾನು ಎಂದಾದರೂ ಗಂಡನ ಅನುರಾಗವನ್ನು ಪಡೆದು ಸುಖಿಸುತ್ತಾಳೆಯೆ? ಹೇಗೆ ನಂಬುವುದು? ಭಾನು ಸುಖಪಡಬೇಕೆಂದರೆ ನಾನೇನು ಮಾಡಬೇಕು? ಕ್ರಮೇಣ ಭಾವನೊಂದಿಗೆ ಆಪ್ರತ್ ಬೆಳೆಸಿಕೊಂಡು ಪ್ರಾಣಕ್ಕೆ ಪ್ರಾಣವಾಗಿ ಅವನ ತಪ್ಪೊಪ್ಪಗಳನ್ನು ಬಿಡಿಸಿ ಹೇಳಿದರೆ...! ಆಗ ಅವನೇ ತನ್ನ ಗುಣವನ್ನು ನನಗೆ ಕಲಿಸಿದರೆ! ನನ್ನ ಯೋಚನೆಗಳಿಗೆ ಒಂದು ವಿಧಾಯಕವಿಲ್ಲ. ಭಾನುವನ್ನು ಯಾವಾಗ ನೋಡಬೇಕೆಂದರೂ ಹೋಗಿ ನೋಡಿ ಬರುತ್ತಿದ್ದೆ. ಒಮ್ಮೆ ಭಾನು,

"ಅಣ್ಣ, ನನಗೆ ಲೈಬ್ರರಿಯಿಂದ ಪುಸ್ತಕ ತಂದು ಕೊಡುವುದಕ್ಕೆ ನಿನಗಾಗುತ್ತದೆಯೇ?" ಎಂದು ಕೇಳಿದಳು.

ನಾನು ಭಾನುವಿನ ಕಣ್ಣಿನಲ್ಲಿ ನೋಡಿದೆ. ಆ ಕಣ್ಣು ನನಗೆ ಏನೇನೋ ಕಥೆಗಳನ್ನು ಹೇಳಿದವು. ಭಾನುವಿಗೆ ಓದುವ ಬಯಕೆ ಅತ್ಯಧಿಕ. ನಾವು ತಿಳಿಯುವುದು ತುಂಬಾ ಇವೆ. ಅದು ತಿಳಿಯದಿರುವುದು ದುರದೃಷ್ಟ... ಕೊನೆಗೆ ತಿಳಿಯಲು ಪ್ರಯತ್ನಿಸದಿರುವುದೂ ಅವಿವೇಕ! ಭಾನುವಿನ ಅಭಿರುಚಿಗಳನ್ನು ನೋಡಿದರೆ, ಒಮ್ಮೆ ಭಾನು ದೊಡ್ಡ ಲೇಖಕಿಯಾಗುತ್ತಾ ಳೇನೋ ಎಂದುಕೊಳ್ಳುತ್ತಿದ್ದೆ. ಈಗಲೂ ಭಾನುವಿಗೆ ತಕ್ಕ ಪ್ರೋತ್ಸಾಹವಿತ್ತರೆ ಉತ್ತಮ ಫಲಿತಾಂಶವಿರುತ್ತದೆಂದುಕೊಂಡೆ.

"ಇಲ್ಲಿಗೆ ಬಂದಾಗಿನಿಂದ ತುಂಬಾ ಪುಸ್ತಕಗಳನ್ನು ಓದಬೇಕೆಂದುಕೊಂಡೆ. ನಮ್ಮ ಲೈಬ್ರರಿಯಲ್ಲಿ ಅಷ್ಟೇನೂ ಉತ್ತಮ ಪುಸ್ತಕಗಳಿಲ್ಲ. ಇರುವುದನ್ನು ತಂದು ಕೊಡುವಂತಹ ಶ್ರದ್ಧೆಯುಳ್ಳವರು ಯಾರು?"

"ಹೋಗಲಿ ಬಿಡಮ್ಮ! ಇನ್ನು ಮೇಲೆ ನಾನು ತಂದುಕೊಡುತ್ತೇನೆ. ಸರಿತಾನೆ? ನಿನ್ನ ಸಹನೆ ಲೆಖ್ಖ ಹಾಕಿಕೋ – ನಾನೂ ನೋಡಿಯೇ ಬಿಡುತ್ತೇನೆ, ನೀನೆಷ್ಟು ಪುಸ್ತಕ ಓದುತ್ತೀಯೇ?"

ಭಾನು ನನ್ನಿಂದ ಏನಾದರೊಂದು ಸಹಾಯ ಬಯಸಿದರೆ ತುಂಬಾ ಸಂತೋಷ ವಾಗುತ್ತಿತ್ತು. ಬರೀ ಬಾಯಿ ಮಾತಿನ ಉಪಚಾರವಲ್ಲದೆ, ಅಣ್ಣನಾಗಿ ಕಾರ್ಯತಹ ಏನಾದರೂ ಅವಳಿಗೆ ಸಹಾಯ ಮಾಡಬೇಕೆನ್ನಿಸಿತು. ಆ ಮಾರನೆಯ ದಿನವೇ 'ಪಬ್ಲಿಕ್ ಲೈಬ್ರರಿ' (ಸಾರ್ವಜನಿಕ ಪುಸ್ತಕ ಭಂಡಾರ) ಯಲ್ಲಿ ಎರಡು ಮೂರು ಹೆಸರಿನಲ್ಲಿ ಸಭ್ಯನಾಗಿ ಸೇರಿದೆ. ಒಂದೆ ಸಾರಿ ನಾಲ್ಕೈದು ಪುಸ್ತಕಗಳನ್ನು ಪಡೆಯಬಹುದಾಗಿತ್ತು. ಮೊದಲು ಚಲಂರವರು ಬರೆದ 'ಸ್ತ್ರೀ' ಪುಸ್ತಕವನ್ನು ಮಾತ್ರ ತೆಗೆದುಕೊಂಡೆ. ಪುಸ್ತಕ ಕೈಗೆ ತೆಗೆದುಕೊಡುತ್ತಿರುವಂತೆಯೇ,

"ಅಯ್ಯೋ, ಇದು ನನ್ನ ಹತ್ತಿರ ಇದೆ ಕಣೋ, ಇದನ್ನು ನೋಡೇ ನಿಮ್ಮ ಭಾವ ನನ್ನ ಕೈಲಿ ವಿಪರೀತ ಯುದ್ಧ ಮಾಡಿದರು."

"ಪುಸ್ತಕ ನೋಡಿ ಜಗಳವೇ?"

"ಮತ್ತೇನೆಂದುಕೊಂಡೆ? ಈ ಮನೆಯಲ್ಲಿ ಮನಸ್ತಾಪ ಉಂಟು ಮಾಡುವ ಶಕ್ತಿ ಒಂದು ಪರಕೆಯ ಕಡ್ಡಿಗೂ ಉಂಟು. ಅದನ್ನೇನಾದರೂ ಮಗು ತಂದು ಎಲ್ಲಾದರೂ ಹಾಕಿದನೆಂದುಕೋ, ಮುಗಿದೇ ಹೋಯ್ತು. ಒಂದು ಸಣ್ಣ ಯುದ್ಧವಾಗುತ್ತದೆ!" ಸರಿ. ಪುಸ್ತಕದ ಬಗೆಗೆ, ಈ 'ಸ್ತ್ರೀ'ಯನ್ನು ನಾನು ಓದುತ್ತಿದ್ದುದನ್ನು ನೋಡಿ ನಿಮ್ಮ ಭಾವ ಕಣ್ಣಿನಲ್ಲಿ ಕಿಡಿ ಕಾರಿದರು.

"ಚಲಂರವರ ಪುಸ್ತಕಗಳನ್ನು ನೀನು ಕೈಲೂ ಮುಟ್ಟಕೂಡದು," ಎಂದರು.

"ಏಕೆ?" ಏನೂ ತಿಳಿಯದೆ ಕೇಳಿದೆ.

"ಅವು ಶುದ್ಧ ಉಪಯೋಗವಿಲ್ಲದವು, ಅವುಗಳಲ್ಲಿ ಉಪ್ಪಿಲ್ಲ, ಹುಳಿಯಿಲ್ಲ."

"ಆ ವಿಷಯ ಓದಿದರೆ ತಾನೇ ಗೊತ್ತಾಗುವುದು?"

"ನೀನು ಓದಕೂಡದು. ನಾನು ಓದಿದ್ದೇನೆ. ಎಲ್ಲಾ ಬುರುಡೆ!"

"ಇರಬಹುದು. ಓದಿ ನಾನೂ ತಿಳಿದುಕೊಳ್ಳುತ್ತೇನೆ, ಅದೇ ಒಳ್ಳೆಯದು."

"ಮುಚ್ಚೆ ಬಾಯಿ! ಮಾತಿಗೆ ಮಾತು ಬೆಳೆಸಿ ವಾದ ಮಾಡಬೇಡ. ನೀನೇನು ಮನುಷ್ಯಳೋ ದನವೋ?"

"ಮನುಷ್ಯರಿಗೆ ಮನುಷ್ಯ! ದನಗಳಿಗೆ ದನ!"

"ಕೆನ್ನೆ ಛಟೀರ್ ಎಂದಿತು. ಬಂದ ಬಾಸುಂಡೆ ಮೂರು ದಿನವಾದರೂ ಇಳಿಯಲಿಲ್ಲ. ನೀಲಿಯ ಬಣ್ಣವಾಗಿತ್ತು. ನನ್ನ ಕೆನ್ನೆಗೆ ಬಡಿತ ಬೀಳಲು ಅಂತಹ ಘಟನೆಗಳೂ, ಮಾತುಗಳೂ ಸಾಕು. ಅಂದು ಕೋಪದಿಂದ ಹಲ್ಲು ಕಟಕಟನೆ ಕಡಿಯುತ್ತಾ, ಕೆನ್ನೆಗೆ ಬಡಿದು, ಪುಸ್ತಕ ಕೈಯಿಂದ ಕಸಿದುಕೊಂಡು ಚೂರು ಚೂರಾಗಿ ಹರಿದು ಒಲೆಗೆ ಹಾಕಿದರು. ನನ್ನ ಹೃದಯವೇ ಹಿಂಡಿದಂತಾಯ್ತು. ನಾನು ನಮ್ಮೂರಿಗೆ ಹೋಗಿದ್ದಾಗ ಬೇಕೆಂದು ಚಲಂ ಪುಸ್ತಕಗಳನ್ನೇ ಕೊಂಡು ಕೊಂಡು ಪೆಟ್ಟಿಗೆಯಲ್ಲಿರಿಸಿಕೊಂಡೆ. ತಪ್ಪೇ? ಅಧಿಕಾರ ದರ್ಪದಿಂದ ಒಬ್ಬರನ್ನೊಬ್ಬರು ಬದಲಾಯಿಸುವುದನ್ನು ಕೇಳಿದ್ದೀಯಾ? ನೋಡಿದ್ದೀಯಾ?"

ನನಗೆ ತುಂಬಾ ವಿಚಿತ್ರವೆನಿಸಿತು. ಅವನು ಗಂಡಸೇ ಇರಬಹುದು; ಗಂಡನೇ ಆಗಿರಬಹುದು – ಹಾಗಂದ ಮಾತ್ರಕ್ಕೆ ಒಂದು ಪುಸ್ತಕವನ್ನೋದುವ ವಿಷಯದಲ್ಲಿಯೂ ಅಧಿಕಾರ ಚಲಾಯಿಸುವುದೆ?

"ಒಬ್ಬ ವ್ಯಕ್ತಿ ತನಗೆ ಬೇಕಾದ ಪುಸ್ತಕವನ್ನೋದುವಂತಹ ಸ್ವೇಚ್ಛೆಯೂ ಬೇಡವೇ?"

"ಸ್ವೇಚ್ಛೆ ಹೆಂಗಸಿಗೇಕೆ ಎನ್ನುತ್ತಾರೆ?"

"ಅದು ಶುದ್ಧ ಮೂರ್ಖತನ !"

"ಮೂರ್ಖತನದಲ್ಲಿ ದೂರಾಲೋಚನೆ! ಅಂತಹ ಪುಸ್ತಕಗಳನ್ನೋದಿದರೆ ಹೆಣ್ಣು ನಿಜವನ್ನು ತಿಳಿದು ಕೊಂಡು, ಎದುರು ಬೀಳುತ್ತಾಳೆ. ಎದುರು ಬೀಳಲೀ ಬಿಡಲೀ ಗಂಡಸಿಗೆ ಅದೊಂದು ಹೆದರಿಕೆ ಇರುತ್ತದೆ."

ನಾನು ಕೊಂಚಕಾಲ ಮೌನವಾಗಿದ್ದೆ, ನಂತರ.

"ಭಾನು, ಚಲಂ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು?" ಕೇಳಿದೆ.

"ಚಲಂರವರ ವಾದ ನಿಜವಾದುದೇ, ಅಷ್ಟೇ ಅನುಸರಿಸಲಾಗದು."

"ನ್ಯಾಯವನ್ನೇಕೆ ಅನುಸರಿಸಕೂಡದು?"

"ಈಗಿನ ಕಾಲದಲ್ಲಿ ನ್ಯಾಯವನ್ನನುಸರಿಸಿದರೆ ಬಾಳಲು ಸಾಧ್ಯವಿಲ್ಲ ಕೇಶವ; ಏಕೆಂದರೆ ಆ ನ್ಯಾಯವನ್ನು ಹತ್ತು ಜನ ನ್ಯಾಯವೆಂದು ಒಪ್ಪರು... ಒಂದು ಪುಸ್ತಕವನ್ನೋದಲೂ ಸ್ವತಂತ್ರವಿಲ್ಲವಾದರೆ ಹೇಗೆ? – ಎನ್ನುತ್ತೀಯಾಗಲೀ, ಅದರಲ್ಲಿ ಸ್ವಾರ್ಥವೋ, ಇನ್ನೇನೋ ಕೊಂಚವಾದರೂ ಇರುತ್ತದೆ. ನಮ್ಮಮ್ಮನಿಗೆ ಕಾಗದ ಬರೆಯಬೇಕಾದರೂ ಆ ವ್ಯಕ್ತಿಯ ಅಣತಿಯಾಗಬೇಕು ಎಂದರೆ ನಂಬುತ್ತೀಯಾ? ಒಂದು ಸಾರಿ ಈ ಮಹಾರಾಯರೊಂದಿಗೆ ಹಬ್ಬಕ್ಕೆಂದು ಊರಿಗೆ ಹೋಗಿದ್ದಾಗ ಅಲ್ಲಿ ಇವರಿಗೆ ಮಾಡಿದ ಮರ್ಯಾದೆ ಸಾಲದಂತೆ.

ಇನ್ನೊಂದು ಸಾರಿ ಏನೋ ಇಲ್ಲದ ರೋಗ ಹೇಳಿಕೊಂಡು ಕಾಗದ ಬರೆದಾಗ ಅವರು ನೋಡಲು ಬರಲಿಲ್ಲವಂತೆ. ಅಂದಿನಿಂದ ಅವರಿಗೆ ಕಾಗದವನ್ನು ಬರೆಯಕೂಡದೆಂದು ಸುಗ್ರೀವಾಜ್ಞೆ ಮಾಡಿದರು. ಅವರಿಗೆ ಏನಾದರೊಂದು ಕಾರಣದಿಂದಾಗಿ ಯಾರಾದರೊಬ್ಬರ ಮೇಲೆ ಕೋಪ ಬರಬಹುದು, ಆದರೆ ಅದಕ್ಕೇಕೆ ನನ್ನನ್ನು ಕಾರಣವನ್ನಾಗಿ ಉಪಯೋಗಿಸಿ ಕೊಳ್ಳಬೇಕು?''

''ಅಮ್ಮಾ, ತಾಯಿ! ನಿನ್ನ ಪ್ರಶ್ನೆಗೆ, ನಿನ್ನ ಗಂಡನಿಗೆ ಒಂದೊಂದು ನೂರು ನಮಸ್ಕಾರ ಬೇಕಾದರೆ ಹಾಕುತ್ತೇನೆ, ನೀನು ನಿಶ್ಚಿಂತೆಯಿಂದಿರಮ್ಮ! ಮರ್ಯಾದೆ ಮಾಡದಿರಲು ಅವರೇನು ಹುಚ್ಚರೇ! ಹಿಡಿದಿದ್ದು ಮುಟ್ಟಿದ್ದಕ್ಕೆಲ್ಲ ನೂರಾರು ಮೈಲಿನಿಂದ ಬರಬೇಕು ಎಂದರೆ ಹುಡುಗಾಟವೇ?''

''ಇನ್ನೂ ಕೇಳು. ಒಂದು ಸಾರಿ ನಾನು ಊರಿಗೆ ಹೋಗಿದ್ದಾಗ ನಮ್ಮಮ್ಮ ಮಗಳು ಎಂದು ನನಗೆ ಒಂದು ಡಜನ್ ಬಾಡಿಗಳನ್ನು ಹೊಲಿಸಿ ಕೊಟ್ಟಳು. ಊರಿನಿಂದ ಬಂದ ನಂತರ ಇವರಿಗೆ ತೋರಿಸಿದೆ. ಸಂತೋಷಿಸುವ ಬದಲು ಕಣ್ಣು ಕೆಂಪಗೆ ಮಾಡಿಕೊಂಡು ಕೈಯಿಂದ ಕಸಿದುಕೊಂಡು ನೀರಿನ ಒಲೆಗೆ ತುರುಕಿದರು. ಬಾಯಿಗೆ ಬಂದಂತೆ ಅಂದು ನನಗೆ ನನ್ನ ತೌರು ಮನೆಗೆ ಶಾಪ ಹಾಕಿದರು.''

''ಭಾನು ಅವರೇನು ಮನಷ್ಯರೋ ಮೃಗವೋಮ್ಮ?''

''ಇನ್ನೂ ಕೇಳು. ಪ್ರತಿದಿನವೂ ಅವರ ಷೂಗಳಿಗೆ ಪಾಲಿಷ್ ಹಾಕಬೇಕು. ಒಂದು ದಿನ ಕೆಲಸದ ಗಲಾಟೆಯಲ್ಲಿ ಹಾಕಲಿಲ್ಲ. ಅ ಷೂನಿಂದಲೇ ಹೊಡೆದರು. ಏಟು ಮುಖದ ಮೇಲೆ ಬಿದ್ದು ಮುಖವೆಲ್ಲಾ ಗಾಯವಾಯ್ತು. ಯಾರಾದರೂ ಕೇಳಿದರೆ ಬಿದ್ದೆ ಎಂದು ಸುಳ್ಳು ಹೇಳಿ ಮಾನವನ್ನುಳಿಸಿದೆ.''

''ಸಾಕಮ್ಮ ಸಾಕು ನಿನ್ನ ಘೋರ ಕಥೆ.''

''ಅಷ್ಟೇ ಅಂತೀಯಾ? ಒಂದು ಸಾರಿ ನಾವಿಬ್ಬರೂ ಯಾವುದೋ ಹಬ್ಬಕ್ಕೆಂದು ಊರಿಗೆ ಹೋದಾಗ ಸ್ಟೇಷನ್ನಿಗೆ ಯಾರೂ ಬಂದಿರಲಿಲ್ಲ. ಅದೇ ಒಂದು ಅಪಗಾಥವಾಯ್ತು. ಮನೆಗೆ ಹೋಗುತ್ತಲೇ ಮುನಿಸಿಕೊಂಡು ಮಲಗಿದರು. ನಾಲ್ಕು ಜನರೆದುರಿನಲ್ಲಿ ನನ್ನ ಮರ್ಯಾದೆ ಕಾಪಾಡಿ ಎಂದು ಕಾಲು ಕಾಲಿಗೆ ಬಿದ್ದು ಬೇಡಿಕೊಂಡೆ. ಊಹುಂ! ಕೇಳಲಿಲ್ಲ. ಮುಂದೆ ದಾರಿಕಾಣದೆ ಅಮ್ಮನ ಕೈಲಿ ಹೇಳಿದೆ. ಕೊನೆಗೆ ಅಮ್ಮ ತಪ್ಪಾಯ್ತು ಎಂದು ಬೇಡಿಕೊಂಡ ನಂತರ ಎದ್ದು ಬಂದು ಕಾಫಿ ಹಿಗ್ಗಿದರು.''

''ಎಲ್ಲಿಯದನ್ನಲ್ಲಲ್ಲೆ ತಪ್ಪು ಕಂಡು ಹಿಡಿಯುತ್ತಿದ್ದರೆ...''

ಅಂಗಳದ ಬಾಗಿಲ ಶಬ್ದವಾಯ್ತು. ಎದ್ದು ಹೋದಳು. ಐದು ನಿಮಿಷಗಳಲ್ಲಿಯೇ ಹಿಂದಿರುಗಿ ಬಂದಳು.

''ಕೇಶು ನಿನ್ನ ಹತ್ತಿರ ಒಂದೆರಡು ರೂಪಾಯಿ ಇದೆಯೇ?'' ಕೇಳಿದಳು.

''ಐದು ರೂಪಾಯಿನ ನೋಟುಗಳಿವೆ, ಚಿಲ್ರೆ ಇಲ್ಲ, ಏಕಮ್ಮ?''

"ಆಮೇಲೆ ಹೇಳ್ತೀನಿ, ಅದನ್ನೇ ಕೊಡು."

ಪರ್ಸ್ ತೆಗೆದು ಐದು ರೂಪಾಯಿನ ನೋಟು ಒಂದು ಕೊಟ್ಟ. ಯಾರೋ ನೆರೆ ಮನೆಯಾಕೆ ಬಂದಿದ್ದಂತೆ ತೋರುತ್ತಿತ್ತು. ಮಾತುಗಳು ಕೇಳುತ್ತಿದ್ದುವು.

"ಅಯ್ಯೋ, ಐದು ರೂಪಾಯಿ ಏಕಮ್ಮಾ? ನೀನು ಕೊಡ್ತೀ ಎಂದು ತೆಗೆದು ಕೊಂಡರಾಯ್ತೆ ಹೇಳು? ಒಂದೂವರೆ ರೂಪಾಯಿ..."

"ಪರವಾಗಿಲ್ಲ ತೆಗೆದುಕೊಳ್ಳಿ? ನೀವೇನು ತೀರಿಸಬೇಕಾಗಿಲ್ಲ, ಏನು ಬೇಡ. ಒಂದು ಎಂಟು ಹತ್ತು ದಿನಗಳಲ್ಲಿ ಬಂದು ಬಿಡಿ.ಯಾವಾಗಲೂ ಇರುವ ತಾಪತ್ರಯವಷ್ಟೆ!"

"ನಿನಗೆ ಗೊತ್ತಿಲ್ಲದಿರುವುದು ಏನೂ ಇಲ್ಲಮ್ಮ. ನಮ್ಮ ಬಾಳು ನಗೆಯ ಪಾಲಾಯ್ತು ನೋಡಿದೆಯಾ? ಹುಂ, ನನ್ನದಿರಲಿ, ನೀನು ಎಚ್ಚರಿಕೆಯಾಗಿರಮ್ಮ! ಮಾತು ಮಾತಿಗೂ ಬೆಟ್ಟ ತಲೆಯ ಮೇಲೆ ಬಿತ್ತೂಂತ ಕುಳಿತುಕೊಳ್ಳಬೇಡ! ಮಗುವನ್ನು ಚೆನ್ನಾಗಿ ನೋಡಿಕೋ. ಅಂದ ಹಾಗೆ ರಾಜೂನ ನೋಡಿಕೋಮ್ಮ!" .. ಮಾತನಾಡುತ್ತಿದ್ದಂತೆ ಆಕೆಯ ಧ್ವನಿ ಭಾರವಾಗುತ್ತಿತ್ತು.

"ಏನು ಯೋಚಿಸಬೇಡಿ, ಹಾಯಾಗಿ ಹೋಗಿ ಬನ್ನೀಮ್ಮ."

"ಸರಿ ಹೋಗಿ ಬರಲೇಮ್ಮ?"

"ಒಳ್ಳೆಯದು ಹೋಗಿ ಬನ್ನಿ! ನೀವು ಬರುವವರೆಗೂ ನನಗೆ ತುಂಬಾ ಬೇಜಾರು."

ಒಳಗೆ ಬಂದಳು ಭಾನು. ಹಾಗೆಯೆ ಬಂದು ನನ್ನ ಹತ್ತಿರ ಕುಳಿತುಕೊಂಡಳು.

"ಏನೋಣ್ಣ! ಈ ಜನಗಳನ್ನು, ಈ ಬಾಳನ್ನು ನೋಡುತ್ತಿದ್ದರೆ ಎಲ್ಲಾ ಪ್ರಶ್ನೆಗಳೇ ನಿಲ್ಲುತ್ತವೆ. ಈಗ ಆಕೆ ಬಂದಿದ್ದರಲ್ಲ, ಅವರು ಮಗಳ ಮನೆಗೆ ಹೋಗುತ್ತಾರೆ. ಅದೆಲ್ಲಾ ಸೊಸೆಯ ಪಿತೂರಿ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಆಕೆ ಈ ಮನೆಗೆ ಯಜಮಾನಿ! ಗಂಡನನ್ನು, ಅತ್ತೆಯನ್ನು ಕೋಪ ಬಂದರೆ ಉರಿ ಬಿಸಿಲಿನಲ್ಲಿ ನಿಲ್ಲಿಸಿ ಶಿಕ್ಷಿಸುವಂಥ ಶಕ್ತಿವಂತೆ! ಅತ್ತೆಯ ಮೇಲೆ ಯಾವ ಕ್ಷಣದಲ್ಲಿ ದಯ ತಪ್ಪಿದರೆ ಆ ಕ್ಷಣದಲ್ಲಿಯೇ ಕತ್ತು ಹಿಡಿದು ತಳ್ಳುವಂತಹ ಸಾಹಸವಂತೆ! ಇನ್ನೂ ಹೇಳುವುದೇನಿದೆ? ಆ ಇರುವ ಒಬ್ಬ ಹೆಣ್ಣುಮಗಳು ಅವಳನ್ನು ವರ್ಷಕ್ಕೊಂದು ಸಾರಿಯಾದರೂ ಕರೆದು ಕಳಿಸಿ ಮಾಡುವುದಿಲ್ಲ. ಪಾಪ ಇನ್ನೂ ಓದುತ್ತಿರುವ ಮೈದುನನಿದ್ದಾನೆ, ರಾಜು ಎಂದು, ಅವನು ಮನೆಯ ಜವಾನ! ಅವಳೂ ಅಪರೂಪವಾಗಿ ನೋಡಿಕೊಳ್ಳುವ ಇಬ್ಬರು ಮಕ್ಕಳಿದ್ದಾರೆ. ಅವರ ಸಂರಕ್ಷಣೆಯೆಲ್ಲಾ ಪಾಪ ಆ ಮುದುಕಿಯದೇ, ಅಡಿಗೆ ಕೆಲಸ, ಮನೆ ಕೆಲಸ ಎಲ್ಲವನ್ನೂ ಆ ಮುದುಕಿಯೇ ಮಾಡಬೇಕು. ಆ ರಾಜು ಬಾವಿಯಿಂದ ನೀರು ಸೇದಬೇಕು, ಅಂಗಡಿ ಮುಂಗಟ್ಟಿಗೆ ಅಲೆಯಬೇಕು, ಮಕ್ಕಳನ್ನು ದಿನವೂ ಸಂಜೆಯ ಹೊತ್ತು ಸುತ್ತಾಡಿಸಿಕೊಂಡು ಬರಬೇಕು."

"ಹುಂ, ಸರಿ, ಹಾಗಾದರೆ ಆ ರಾಣಿ ಸಾಹೇಬರೇನು ಮಾಡುತ್ತಾರೆ?"

"ಕೇಳು ಮಾರಾಯ, ಆ ರಾಣಿಯವರು, ರಾಜರು ಮನೆಗೆ ಬಂದೊಡನೆ ಹೊಸ ಹೆಣ್ಣಿನಂತೆ ವಯ್ಯಾರ ಮಾಡುತ್ತಾ ಹಿಂದೆ ಹಿಂದೆ ಅಲೆದಾಡಿಕೊಂಡು, ಆಮೇಲೆ ಮಂಚದ ಮೇಲೆ ವಾರೆಯಾಗಿ ಮಲಗಿಕೊಂಡು ಪಗಡೆಯಾಡುತ್ತಾರೆ. ಸಿನಿಮಾಗಳನ್ನು ತಪ್ಪದೆ ನೋಡುತ್ತಾರೆ.

ವಿಹಾರ ಮಾಡುತ್ತಾರೆ. ಪಿಕ್ನಿಕ್ ಹೋಗ್ತಾರೆ. ಪರಿಚಿತರನ್ನು ಗೆಳೆಯರನ್ನು ಭೇಟಿ ಮಾಡುತ್ತಾರೆ. ಮಹಿಳಾ ಸಮಾಜ, ಲೇಡಿಸ್ ಕ್ಲಬ್ಬುಗಳನ್ನು ಸುತ್ತಾಡುತ್ತಾರೆ. ಸಾಲದೆ ಈ ಡ್ಯೂಟಿಗಳು?''

''ಹಾಗೂ ಅವಳಿಗೆ ವಿರಾಮ ಸಿಕ್ಕಿದರೆ ಅತ್ತೆಯ ಜೊತೆ ಯುದ್ಧ ಆರಂಭಿಸುತ್ತಾಳೆ. ಮೈದುನನೊಂದಿಗೆ ಜಗಳವಾಡುತ್ತಾಳೆ. ಗಂಡನನ್ನು ಬೆದರಿಸುತ್ತಾಳೆ. ಅಷ್ಟು ಹೊತ್ತಿಗೆ ಸುಸ್ತಾಗುತ್ತಾಳೆ. ಎಷ್ಟಾದರೂ ಅವಳು ಐಶ್ವರ್ಯವಂತರ ಮನೆಯ ಹೆಣ್ಣುಮಗಳು. ಕೈತುಂಬಾ ಐಶ್ವರ್ಯ ತಂದಿದ್ದಾಳಂತೆ. ಕಡ್ಡಿಯ ಪೆಟ್ಟಿಗೆಗೂ ಬೆಳ್ಳಿಯ ಪೆಟ್ಟಿಗೆಯಂತೆ!''

''ರಾಣಿಯವರು ಆರೋಗಣೆಗೆ ಬರುವ ಹೊತ್ತಿಗೆ ಒಂದು ರಾಮಾಯಣ ಆಗಿರುತ್ತದೆ. ಅತ್ತೆಯನ್ನು ಬಾಯಿಗೆ ಬಂದಂತೆ ಬೈಯುತ್ತಾಳೆ. ಅವಳು ಮಾಡಿದ ಸಾರು ಹುಳಿ ಹಾಕಿಸಿಕೊಳ್ಳಕೂಡದೆಂದು ಗಂಡನಿಗೆ ಆಣತಿಯಾಗುತ್ತದೆ. ಅವನು ಎದುರಾಡದೆ ಇನ್ನೇನಾದರೂ ಹಾಕಿಕೊಂಡು ನುಂಗಿ ಏಳುತ್ತಾನೆ. ಆ ಮುದುಕಿಗೆ ದುಃಖ ಉಕ್ಕಿ ಬರುತ್ತದೆ.''

''ಲೋ ಮಗು, ನಾನು ಮಾಡಿದ್ದು ತಪ್ಪಾಯಿತೇನೋ! ಅಷ್ಟು ಮಾತ್ರ ಅವಳು ಬಾಯಿಗೆ ಬಂದಂತೆ ಬೈಯುತ್ತಿದ್ದರೆ ನೀನು ಕೇಳಿಯೂ ...''

''ಹೋಗಲಿ ಬಿಡಮ್ಮಾ ಅವಳ ಮಾತಿಗೇನು – ಅವಳು ಹೇಳಿದಂತೆಯೇ ಮಾಡಿ ಬಿಡದಿದ್ರೆ!''

ಎಂದು ಉತ್ತರಿಸುತ್ತಾನೆ ಆ ಮಗ. '' ನೋಡಿದೆಯಾ ವಿಚಿತ್ರ?''

''ಚಿಕ್ಕವರು ಹೇಳಿದಂತೆ ಹಿರಿಯವರು ಕೇಳುವಂತಹ ಕಾಲ ಬಂತು. ತಾಯಿಗೆ ಆ ಮನೆಯಲ್ಲಿ ಬೆಲೆಯೇ ಇಲ್ಲವೆಂದಾಯತು. ಕೊನೆಗೆ ಆಕೆಯ ವಯಸ್ಸಿಗಾದರೂ ಮರ್ಯಾದೆ ಕೊಡಬೇಡವೆ?''

''ಸರಿ, ನಾನೇ ನನ್ನ ಹೆಂಡತಿ ಹೇಳಿದ ಹಾಗೆ ಕೇಳುವಾಗ, ನಿನ್ನದೇನು ಲೆಖ್ಖ?'' ಎಂದಿರಬಹುದು ಅವನ ಉದ್ದೇಶ.

''ಹೋಗಲಪ್ಪ! ಇನ್ನ ಮೇಲೆ ನಿಮ್ಮ ಇಷ್ಟದಂತೆಯೇ ಮಾಡುತ್ತೇನೆ. ಈ ಸಾರಿಗೆ ಕ್ಷಮಿಸಿ ಬಿಡಿ. ಒಂದೇ ಒಂದು ಸೌಟು ಸಾರು ಹಾಕಿಸಿಕೋ – ನೀನು ತಿಂದರೆ ನನಗೆ ತೃಪ್ತಿಯಾಗುತ್ತದೆ ಕಣೋ!''

ಎಂದು ತಾಯಿ ಗೋಗರೆದರಂತೆ. ತಾಯಿಯ ಮಾತಿಗೆ ಬೆಲೆ ಕೊಡಬೇಕು. ಆ ಸ್ಥಾನಕ್ಕೆ ಮರ್ಯಾದೆ ಕೊಡಬೇಕು ಎಂದು ಆ ಹೃದಯ ವಿಲವಿಲನೆ ಒದ್ದಾಡುತ್ತದೆ. ಅವನು ಏನೂ ಅನ್ನಲಾರದೆ,

''ಹುಂ! ಹಾಕು!'' ಅಂದನಂತೆ. ಅವನು ಊಟಮಾಡಿ ಕೈಮೇಲೆ ನೀರು ಹಾಕಿಕೊಂಡು ಕೋಣೆಗೆ ಬರುವ ಹೊತ್ತಿಗೆ ಹೆಂಡತಿ ಸೂಟ್‌ಕೇಸಿಗೆ ಬಟ್ಟೆ ಹಾಕುತ್ತಿದ್ದಳು. ಅತ್ತೆಯ ಮೇಲೆ ಯುದ್ಧ ಸಾರಿದಳು.

''ನನ್ನ ಗಂಡನನ್ನೂ ನನ್ನನ್ನೂ ದೂರ ದೂರ ಮಾಡಲು ನೀನು ಪ್ರಯತ್ನಿಸುತ್ತಿದ್ದೀ! ನಾನು ಬೇಡವೆಂದ ಕೆಲಸವನ್ನು ಬಲವಂತದಿಂದ ಅವನ ಕೈಲಿ ಏಕೆ ಮಾಡಿಸಬೇಕು?''

ಎಂದು ಅತ್ತೆಯನ್ನು ಆಕ್ಷೇಪಿಸಿ, ನಂತರ ಗಂಡನತ್ತ ತಿರುಗಿ,

"ನನ್ನ ಮಾತಿಗೆ ಒಂದು ಕೂದಲೆಳೆಯಷ್ಟೂ ಬೆಲೆ ಇಲ್ಲದ ಈ ಮನೆಯಲ್ಲಿ ನಾನಿರುವ ಅಗತ್ಯವಿಲ್ಲ. ನಿಮ್ಮಮ್ಮ ನೀವೇ ಇರಿ. ನಾನು ಊರಿಗೆ ಹೋಗ್ತೀನಿ. ಇನ್ನು ಬರುವುದೇ ಇಲ್ಲ!"

ಎಂದು ತನ್ನ ನಿರ್ಣಯವನ್ನು ತಿಳಿಸಿ ಹೊರಟೇ ಬಿಟ್ಟಳು.

"ಸರೂ! ಸರೂ! ಎಂದು ಗಂಡ ಹಿಂದೋಡಿದ. ಆದರೆ ಸಿಕ್ಕಿದ ಫಲಿತಾಂಶವೆಂದರೆ, ಹೆಂಡತಿಯನ್ನು ರೈಲು ಹತ್ತಿಸಿ ಪೆಚ್ಚು ಮೋರೆಯಿಂದ ಹಿಂದಿರುಗಿ ಬರುವುದಾಯ್ತು. ಹೋಗಲೀ ಆ ಸರೂ ಎಲ್ಲಿಯ ವರೆಗೂ ಓದಿದ್ದಾಳೆ ಗೊತ್ತೇ?"

"ಪ್ರಾಯಶಃ ವಿದ್ಯೆ ನೈವೇದ್ಯಯವೇನೋ, ಅಥವಾ ಓದಿದ್ದರೆ ಎಲ್.ಎಸ್. ಆಗಿರ ಬಹುದು. ಹಾಗಿಲ್ಲದೆ ಓದಿದ್ದರೆ ಹಾಗೆಲ್ಲಾ ಆಡುತ್ತಿರಲಿಲ್ಲ."

"ನೀನಲ್ಲೇ ಎಡವಿದೆ! ಅವಳು ಬಿ.ಎ. ಫಸ್ಟ್ ಕ್ಲಾಸು!"

"ನಿಜವೇ?" ಆಶ್ಚರ್ಯದಿಂದ ಕೇಳಿದೆ.

"ತುಂಬಾ ವಿಚಿತ್ರವಾಗಿದೆ ಅಲ್ವೆ?"

"ಅವಳ ಗಂಡ...? ಅವನಿಗೇನು ಕೆಲಸ?"

"ಕಾಲೇಜಿನಲ್ಲಿ ಲೆಕ್ಚರರ್ರು! ಅವನು ಕೇವಲ ದೇವರು – ಅಂದರೆ ಅಷ್ಟು ಒಳ್ಳೆಯವನು ಎಂದಲ್ಲ. ದೇವರ ಹಾಗೆ ಬಾಯಿಮುಚ್ಚಿಕೊಂಡಿರುತ್ತಾನೆ. ತನಗೆ ಯಾರಾದರೂ ವಿಶ್ವಾಸಿಗಳು ಎಂದು ತಿಳಿದರೆ ಅವರನ್ನು ಇಂದ್ರ, ಚಂದ್ರ, ದೇವೇಂದ್ರ ಎಂದು ಅಂಬಾರಿ ಏರಿಸಿ ಕುಳ್ಳಿರಿಸುತ್ತಾನೆ. ಇನ್ನು ಆ ಸರೋಜ ಅಂದೆನಲ್ಲಾ, ಅವಳ ವಿಷಯ ಯೋಚಿಸಿದರೇ ಬೇಜಾರಾಗುತ್ತದೆ. ಅವಳಿಗೆ, ಒಬ್ಬ ಹೆಣ್ಣು ಬಯಸುವಂತಹ ಎಲ್ಲಾ ಸುಖಗಳೂ ಇವೆ. ಸ್ವೇಚ್ಛೆ ಇದೆ, ಸ್ವಾತಂತ್ರ್ಯವಿದೆ, ಅವಳ ಮಾತಿಗೆ ಬೆಲೆ ಇದೆ. ಗಂಡನ ಆದರಾಭಿಮಾನಗಳಿವೆ. ಒಬ್ಬ ವ್ಯಕ್ತಿಯಾಗಿ ಬದುಕುವಂತಹ ಅದೃಷ್ಟವೂ ಇದೆ. ಅದಕ್ಕಿಂತಲೂ ಬೇಕಾದುದಿನ್ನೇನು? ಆದರೆ ಅವಳು ಎಲ್ಲವನ್ನೂ ದುರುಪಯೋಗಪಡಿಸಿಕೊಳ್ಳುತ್ತಿದ್ದಾಳೆ. ಗಂಡ ತನ್ನ ಮಾತು ಕೇಳುತ್ತಾನೆಂದು ತಾಯಿ ಮಗನನ್ನು ಬೇರ್ಪಡಿಸುವುದೇ? ತನಗೆ ಗಂಡ ಸ್ವೇಚ್ಛೆಯನ್ನು ಕೊಟ್ಟಿದ್ದಾನೆಂದು ಇಷ್ಟ ಬಂದಂತೆ ತಿರುಗುವುದೇ? ಅಧಿಕಾರವಿದೆ ಎಂದು ಅತ್ತೆಯ ಮೇಲೆ ಅಧಿಕಾರ ಚಲಾಯಿಸುವುದೇ? ತಮಗಿರುವ ಸದವಕಾಶಗಳನ್ನು ದುರುಪಯೋಗಪಡಿಸಿ ಕೊಳ್ಳುತ್ತಾರೆಂದೇ ಅಲ್ಲವೆ, ಈ ಓದಿದ ಹೆಂಗಸರನ್ನು ಕಂಡರೆ ಪ್ರಪಂಚ ಒಂದು ಕಿರು ದೃಷ್ಟಿಯಿಂದ ನೋಡುವುದು?"

"ತನ್ನ ಮನೆಯನ್ನು ಸಂತೆ ಮಾಡುವುದು, ಮಹಿಳೆಯರನ್ನು ಉದ್ಧಾರ ಮಾಡುವುದೆಂದುಕೊಂಡು ಮಹಿಳಾ ಸಮಾಜಗಳಿಗೆ ಸದಸ್ಯಳಾಗಿ ಏನೇನೋ ಹಕ್ಕುಗಳು ಬೇಕೆಂದು ಗಂಟಲು ಹರಿಯುವಂತೆ ಭಾಷಣ ಮಾಡಿದರೆ ನೋಡಿದವರು ನಗುವುದಿಲ್ಲವೆ? ಯಾವ ಪ್ರಗತಿಯನ್ನೂ ಕಾಣದವರು ಅಂಧಕಾರದಲ್ಲಿಯೇ ಇದ್ದಾರೆ. ಅವಕಾಶವಿರುವವರು ಅವುಗಳನ್ನು ನಾಶಮಾಡಿಕೊಳ್ಳುತ್ತಿದ್ದಾರೆ. ಹಾಗಾದರೆ ಲೋಪವೆಲ್ಲಿದೆ ಎನ್ನುತ್ತೀ?"

"ನನ್ನನ್ನು ಕೇಳಿದರೆ, ತಪ್ಪು ಆ ಮುದುಕಿಯ ಮಗನಲ್ಲಿಯೇ ಇದೆ..."

"ನನ್ನ ಉದ್ದೇಶವೂ ಅದೇ! ಈ ಗಂಡಸರಲ್ಲಿ ಇರುವವರು ಎರಡು ಗುಂಪಿನವರು! ಒಂದು ಗುಂಪಿನವರು, ತಾಯಿ ತಂದೆಯರನ್ನೂ, ಅಕ್ಕ ತಂಗಿಯರನ್ನೂ ಅಪಾರವಾಗಿ ಅಭಿಮಾನಿಸುತ್ತಾ ತನಗೊಬ್ಬ ಹೆಂಡತಿ ಇದ್ದಾಳೆಂದೂ, ಅವಳ ಕಷ್ಟ ಸುಖಗಳ ಜವಾಬ್ದಾರಿಯೂ ತನ್ನದೇ ಎನ್ನುವುದನ್ನೂ ವಿಸ್ಮರಿಸುವಂತಹರು – ಇನ್ನೊಂದು ಗುಂಪಿನವರು, ತಾಳಿ ಕಟ್ಟಿದ ಲಾಗಾಯ್ತು, 'ಪತ್ನೀ ದಾಸ'ರಾಗಿ ಅವಳ ಕೈಯ ಕೀಲು ಬೊಂಬೆಯಾಗಿ, ಸರ್ವ ಪ್ರಪಂಚವನ್ನೂ ಅವಳೇ ಎಂದು ತಿಳಿಯುವಂತವರು – ಇವರಿಗಿರುವುದು ಒಂದೇ ಕಣ್ಣು! ಅದರಿಂದ ಅವರು ಒಂದು ಭಾಗವನ್ನೇ ನೋಡಬಲ್ಲರು. ಬಾಳು ಹಾಗೇ ಕಳೆಯುತ್ತದೆ."

"ಭಾನೂ, ಆ ಸರೋಜಾದೇವಿಗೂ ನಿನಗೂ ಸ್ನೇಹವಿಲ್ಲವೆ?"

"ಅವಳಿಗೆ ನನ್ನನ್ನು ಕಂಡರೆ 'ಕಹಿ'. ಏಕೆಂದರೆ ನಾನು ಅವರತ್ತೆಯೊಂದಿಗೆ ಮಾತನಾಡುತ್ತೀನಿ ಎಂದು. ಪಾಪ, ಆ ಮುದುಕಮ್ಮ ತುಂಬಾ ಒಳ್ಳೆಯವರು ಕೇಶು. ತಮ್ಮ ತಾಪತ್ರಯಗಳನ್ನು ಹೇಳುತ್ತಾ ನನ್ನನ್ನು ಸಮಾಧಾನಪಡಿಸುತ್ತಾರೆ."

"ಹೆಂಗಸನ್ನು ಕಂಡರೆ ಗಂಡಸಿಗೇಕಷ್ಟು ಹಗುರ ಅಜ್ಜೀ?" ಎಂದು ನಾನು ಕೇಳಿದರೆ,

"ಅಯ್ಯೋ ಹುಚ್ಚು ಹುಡುಗಿ, ಈ ಕಾಲದಲ್ಲೆಲ್ಲೇ ತಾಯಿ? ಎಲ್ಲೋ ನೂರಕ್ಕೊಬ್ಬರಂತೆ ನಿನ್ನ ಗಂಡನಂಥವರಿದ್ದಾರೆಯೇ ವಿನಹ, ಇನ್ನು ತೊಂಬತ್ತೊಂಬತ್ತು ಮಂದಿಯು ಹೆಂಡಿರನ್ನು ತಲೆಯ ಮೇಲೆ ಹೊತ್ತುಕೊಂಡು ಮೆರೆಸುವಂಥವರೇ! ನಮ್ಮ ಕಾಲದಲ್ಲಿ ನೋಡಬೇಕಾಗಿತ್ತು. ಒಂದು ಸಾರಿ ನನಗೇನೋ ಇಷ್ಟವಾಯ್ತು. ಸಿನಿಮಾ ನೋಡಲು ಹೋದೆನಮ್ಮಾ! ಆಗ ಅದೇ ತಾನೇ ಸಿನಿಮಾ ಬಂದ ಹೊಸತು. ಆ ದಿನಗಳಲ್ಲಿ ಸಿನಮಾ ನೋಡುವುದೆಂದರೆ ಏನೋ ಅಪರಾಧ ಮಾಡಿದಂತೆ.

"ನಮ್ಮ ಮನೆಯವರಿಗೆ ಅದನ್ನು ಕಂಡರೇ ಆಗದು. ಒಂದು ದಿನ ಅವರು ಯವುದೋ ಊರಿಗೆ ಹೋಗಿದ್ದರಲ್ಲ ಎಂದು ಅಕ್ಕಪಕ್ಕದ ಮನೆಯವರೊಂದಿಗೆ ನಾನೂ ಹೊರಟೆ. ಸಿನಿಮಾ ಇನ್ನೂ ಪ್ರಾರಂಭವಾಗಿತ್ತು. ಅವರು ಊರಿನಿಂದ ಬಂದವರು ನನ್ನನ್ನು ಹುಡುಕಿಕೊಂಡು ಸಿನಿಮಾ ಡೇರಾದ ಹತ್ತಿರವೇ ಬಂದುಬಿಟ್ಟರು. ನೀನು ನಂಬುತ್ತೀಯೋ ಇಲ್ಲವೋ ಭಾನು, ತಲೆ ಜುಟ್ಟು ಹಿಡಿದುಕೊಂಡು."

"ಸೂಳೇರ ಕುಣತ ನೋಡುತ್ತೀ ಏನೇ ಕತ್ತೇಮುಂಡೆ!" ಎಂದು ಬೀದಿಯುದ್ದಕ್ಕೂ ಒದೆಯುತ್ತಾ ಎಳೆದುಕೊಂಡು ಬಂದರು. ಮನೆ ತಲುಪುತ್ತಲೇ ಮೈಮೇಲೆ ಜ್ಞಾನ ತಪ್ಪುವವರೆಗೂ ಥಳಿಸಿದರು. ಆ ಹೆದರಿಕೆಯಿಂದಲೇ ನಾನು ಖಾಯಿಲೆಯಾಗಿ ಮಲಗಿದೆ" – ಎಂದು ಅಜ್ಜಿ ತಮ್ಮ ಕಥೆಯನ್ನು ಅನಾಯಾಸವಾಗಿ ಹೇಳುತ್ತಿದ್ದರೆ ನನ್ನ ಮೈಯಲ್ಲಿ ನಡುಕ ಉಂಟಾಯ್ತು.

"ಅಜ್ಜೀ ಅಷ್ಟೊಂದು ಅವಮಾನ ಹೇಗೆ ತಡೆದಿರೀ?" ಎಂದು ಕೇಳಿದೆ.

"ಅವಮಾನಕ್ಕೇನು ಬಂತೇ ಅಮ್ಮ, ಗಂಡ ಹೆಂಡತಿಯನ್ನು ಹೊಡೆಯದೆ, ಬೇರೆ ಯಾರನ್ನಾದರೂ ಹೊಡಿತಾನೆಯೆ?"

"ಹಾಗಾದರೆ ಹೊಡಿಯಲೇ ಬೇಕೇನು?"

"ಅಲ್ಲಾ ಅಂದುಕೋ – ನಾನೇನೋ ತಪ್ಪು ಮಾಡಿದೆ. ಅವರಿಗೆ ಅದೆಲ್ಲಾ ಸರಿ ಬೀಳದೆಂದೂ ತಿಳಿದೂ ಹೋಗಿದ್ದು ನನ್ನ ತಪ್ಪಲ್ಲವೇ? ಅವರಿಗೆ ಕೋಪ ಬಂತು ನಾಲ್ಕು ಬಿಗಿದರು. ಹೋಗಲಿ ಬಿಡು ಏನು ನಷ್ಟವಾಯ್ತು?"

– "ಅಂದು ಬಿಟ್ಟರು ಅಜ್ಜಿ. ನೋಡಿದೆಯಾ ಕೇಶು, ಅಂದಿನ ಹೆಂಗಸು ಆಕೆಯ ಭಾವ!"

"ಅಜ್ಜೀ, ನೀವು ಮಾಡಿದ್ದು ತಪ್ಪಲ್ಲ" ಎಂದರೆ ಆಕೆ ನಂಬುವುದಿಲ್ಲ. ಗಂಡನಿಗೆ ಇಷ್ಟವಿಲ್ಲದ ಕೆಲಸ ಮಾಡಿದೆ ಎಂದೂ, ಅದು ತಪ್ಪು ಎಂದೂ ವಾದಿಸುತ್ತಾರೆ. ಅಜ್ಜಿಗೂ ನನಗೂ ಕೊಂಚ ವ್ಯತ್ಯಾಸವಿದೆ. ನಿಮ್ಮ ಭಾವನವರಿಗೆ ಚಲಂ ಪುಸ್ತಕಗಳನ್ನು ಕಂಡರಾಗದು. ನನ್ನನ್ನು ಓದಕೂಡದೆಂದು ಅಪ್ಪಣೆ ಮಾಡುತ್ತಾರೆ. ನಾನು ಕೇಳುವುದಿಲ್ಲ. ಎದುರಿಗೋದುವ ಧೈರ್ಯವಿಲ್ಲವಾದುದರಿಂದ ರಹಸ್ಯದಲ್ಲಿ ಓದುತ್ತೇನೆ. ಈಗ ಬಂದಿರುವ ತೊಂದರೆ ಎಂದರೆ, ಹೆಂಗಸು ಈಗ ಪ್ರತಿ ವಿಷಯವನ್ನೂ ಕೂಲಂಕುಷವಾಗಿ ಯೋಚಿಸುವುದನ್ನು ಕಲಿತಿದ್ದಾಳೆ. ಆದರಿಂದ ತನ್ನದೇ ಆದ ಅಭಿಪ್ರಾಯಗಳನ್ನು ಏರ್ಪಡಿಸಿಕೊಳ್ಳಬಲ್ಲಳು. ನಿರ್ದಯ, ನಿರ್ಭಯ, ನಿರಂಕುಶತೆಯಿಂದಾಳುವ ತಾತನವರಂತಹ ಗಂಡಸರುಗಳಿದ್ದಾರಾಗಲೀ, ಆ ಆಳ್ವಿಕೆಗೆ ತಲೆ ಬಾಗಿಸುವಂತಹ ಅಜ್ಜಿಯಂತಹ ಹೆಂಗಸರೂ ಇದ್ದಾರೆ. ಆದುದರಿಂದಲೇ ಇಂದಿನ ಸಂಸಾರಗಳು, ಹಿಂದಿನ ಪದ್ಧತಿಯಲ್ಲೂ ನಡೆಯವು. ಇಂದಿನ ಪದ್ಧತಿಯಲ್ಲೂ ನಡೆಯವು."

"ಅಭಿಪ್ರಾಯ ಸಾಮ್ಯವಿಲ್ಲದ ವ್ಯಕ್ತಿಗಳು ಜೊತೆಗೂಡಿದಾಗಲೇ ಸಮಸ್ಯೆಗಳುದ್ಭವಿಸುವುದು. ಸಾಧ್ಯವಾದಷ್ಟು ಇಬ್ಬರೂ ಏಕೀಭವಿಸಲು ಪ್ರಯತ್ನಿಸಬೇಕು. ಅದು ನಿಮ್ಮ ಸಂಸಾರದಲ್ಲಿ ಸಾಧ್ಯವಾಗುತ್ತಿಲ್ಲ –"

"ತಪ್ಪು ನನ್ನಲ್ಲಿದ್ದರೆ ಅದನ್ನು ನನ್ನ ಶಕ್ತಿ ಮೀರಿ ಸರಿಪಡಿಸಲು ಯತ್ನಿಸುತ್ತೇನೆ."

"ಅಂದ ಹಾಗೆ ಆ ಸರೋಜಾದೇವಿ ಮತ್ತೆ ಬಂದಳೋ?"

"ನಾಲ್ಕನೆಯ ದಿನವೇ ಗಂಡ ಹೋಗಿ ಇಳಿಸಿಕೊಂಡು ಬಂದ. ಪ್ರಾಣವಿಲ್ಲದೆ ಶರೀರವಿರುತ್ತದೆಯೆ?"

"ಅಲ್ಲಾ, ಈಗ ಅಜ್ಜಿ ಏಕೆ ಹೊರಟು ಹೋದರು?"

"ಚೆನ್ನಾಯ್ತು! ಅಜ್ಜಿ ಹೊರಡದಿದ್ದರೆ, ಆ ಸೊಸೆ ಮತ್ತೆ ಹಾಸಿಗೆ ಪೆಟ್ಟಿಗೆ ಕಟ್ಟುತ್ತಿದ್ದಳು. ವಿದ್ಯೆಗೂ, ಸಂಸ್ಕಾರಕ್ಕೂ, ನರಿಗೂ ನಾಗಲೋಕಕ್ಕೂ ಇರುವ ಅಂತರವಲ್ಲವೆ? ಇದು ಪ್ರಪಂಚವರಿತ ಸತ್ಯ."

"ಹುಂ! ಸೊಸೆಗೆ ಗೃಹ ಪ್ರವೇಶವಾಗುವ ಹೊತ್ತಿಗೆ ಅತ್ತೆ ಅಗ್ನಿ ಪ್ರವೇಶವಾಗಿರಬೇಕು."

"ಅಂತಹವು ವಿರಳ ಕೇಶು."

* * *

ಪ್ರತಿ ವಾರವೂ ಭಾನುವಿಗೆ ಹೊಸ ಹೊಸ ಪುಸ್ತಕಗಳನ್ನು ತಂದುಕೊಟ್ಟು ತಂಗಿಯನ್ನು ಮಾತನಾಡಿಸಿಕೊಂಡು ಹೋಗುತ್ತಿದ್ದೆ. ಆಗಿಂದಾಗ ಸಮಾಚಾರಗಳನ್ನೆಲ್ಲಾ ತಿಳಿದುಕೊಳ್ಳುತ್ತಿದ್ದೆ. ಒಂದು ಸಾರಿ ನಾನು ವರಾಂಡದಲ್ಲಿ ಕುಳಿತು ಮಗುವಿಗೆ ಪುಸ್ತಕದಲ್ಲಿನ ಚಿತ್ರಗಳನ್ನು ತೋರಿಸುತ್ತಿದ್ದೆ. ಭಾನು ಭಾವನಿಗೆ ಊಟಕ್ಕೆ ಬಡಿಸುತ್ತಿದ್ದಳು. ಎರಡು ನಿಮಿಷಗಳಲ್ಲಿಯೇ ಅವನೇನೋ ಕೂಗಾಡುತ್ತಿದ್ದುದು ಕೇಳಿಸಿತು; ಬೆಚ್ಚಿ ಬಿದ್ದು ಆಲಿಸಿದೆ.

"ನಿನಗೆ ಮನೆ–ಮನೆ ಕೆಲಸದ ಮೇಲೆ ಜ್ಞಾನವಿದ್ದರೇ ತಾನೇ! ಜವಾಬ್ದಾರಿ ಅನ್ನುವುದೇನಾದರೂ ಇದ್ದರೆ ಸರಿ! ಏನೋ ಇಷ್ಟು ಬೇಯಿಸಿ ಕೈಗೆ ಬಂದಷ್ಟು ಉಪ್ಪು ಖಾರ ಹುಯ್ದು ಬಡಿಯುತ್ತಿದ್ದೀ, ಛೀ! ಛೀ!! ನಿನಗಿಂತ ಹೋಟಲಿನವನು ವಾಸಿ! ರುಚಿ ರುಚಿಯಾಗಿ ಹೊಟ್ಟೆ ತುಂಬಾ ಹಾಕ್ತಾನೆ. ಎಂದಾದರೂ ಒಂದು ಹೊತ್ತು ತೃಪ್ತಿಯಾಗುವಂತೆ ಅಡಿಗೆ ಮಾಡಿ ಹಾಕಿದ್ದೀಯಾ? ನಾಚಿಕೆಯಾಗುವುದಿಲ್ಲವೆ ನಿನಗೆ? ಕಟ್ಟಿಕೊಂಡ ಮುಂಡೇ ಮಗನಿಗೆ ಹೊಟ್ಟೇ ತುಂಬಾ ಕೂಳು ಹಾಕುವ ಯೋಗ್ಯತೆ ಇಲ್ಲವಾದ ಮೇಲೆ ನೀನ್ಯಾಕಿಲ್ಲಿರಬೇಕು? ಮೂಗಿನ ತುಂಬ ತಿಂದು ಉರುಳಾಡುವುದಕ್ಕೇ? ಕಾಲ ಮೇಲೆ ಕಾಲು ಹಾಕಿಕೊಂಡು ಪುಸ್ತಕಗಳನ್ನು ಓದಲೆಂದೇ? ಹುಂ! ನಿನ್ನ ಇಷ್ಟ, ಹಂಬಲವೆಲ್ಲಾ ಬೇರೆ ಇರುವಾಗ ಮನೆ ನಿನಗೇಕೆ ಬೇಕು? ನೀನು ಡಾಕ್ಟರಾಗಬೇಕಾಗಿತ್ತಾಗಲೀ, ದರಿದ್ರ ಅಡಿಗೆ ಕೆಲಸ ನಿನ್ನ ಕೈಲಾಗುತ್ಯೇ? ನನ್ನನ್ಯಾಕೆ ಹೀಗೆ ಗೋಳು ಹುಯ್ದುಕೊಳ್ಳುತ್ತೀ? ಇಲ್ಲಿರಲು ಇಷ್ಟವಿಲ್ಲವಾದರೆ ಹೊರಟು ಹೋಗು! ನಿನಗಿಷ್ಟವಾದ ಬೇವಾರ್ಸಿಯನ್ನು ಕಟ್ಟಿಕೊಂಡು ಹಾಳಾಗಿ ಹೋಗು! ... ಡರ್ಟಿ ರೋಗ್! ನೀನೊಂದು ಹೆಣ್ಣೇ! ಥೂ! ನನಗೆ ಹುಚ್ಚು, ನಿನ್ನಲ್ಲಿ ಹೆಣ್ಣಿಗಿರಬೇಕಾದ ವಿನಯ, ವಿಧೇಯತೆ, ನಯ ನಾಜೂಕು, ಸುಡುಗಾಡು ತೃಣ ಮಾತ್ರವಾದರೂ...."

ಕೇಳುತ್ತಿದ್ದಂತೆ ದಿಗ್ಭ್ರಮೆಗೊಂಡೆ. ಭಾನು ಹೇಳುತ್ತಿದ್ದುದು ವಿನಹ ಅವನು ಬೈದುದನ್ನು ಅಂದಿನವರೆಗೂ ನಾನು ಕೇಳಿರಲಿಲ್ಲ. ಏನಾಯ್ತು? ಭಾನು ಏನು ಮಾಡಿದಳು? ಬಟ್ಟೆ ಹಾಕಿಕೊಂಡು ದುಡುದುಡನೆ ಹೊರಟು ಹೋದ. ಮಗುವನ್ನು ಹೆಗಲ ಮೇಲೆ ಹಾಕಿಕೊಂಡು ನಾನು ಒಳಗೆ ಹೋದೆ. ಮಣೆಯ ಮುಂದೆ ತಟ್ಟೆಯಲ್ಲಿ ಕಲಸಿದ ಅನ್ನ ಹಾಗೇ ಇದೆ. ಭಾನು ಎದುರಾಗಿ ತಲೆತಗ್ಗಿಸಿ ಕುಳಿತಿದ್ದಳು.

"ಏನಾಯ್ತು ಭಾನೂ...?" ಕೇಳಿದೆ.

ತಲೆ ಎತ್ತಿ ನೋಡಿದಳು ಭಾನು. ಬಾಯಿಂದ ಮಾತು ಹೊರಡಲಿಲ್ಲ. ಬದಲಾಗಿ ಕಣ್ಣಿಂದ ಗಂಗಾವರಣವಾಯ್ತು. ಏನೋ ಹೇಳಬೇಕೆಂದುಕೊಂಡರೂ, ಪಾಪ ಅವಳಿಗೆ ಹೇಳಲಾಗಲಿಲ್ಲ.

"ಏನಾಯಿತಮ್ಮ, ಸಾರು ಹುಳಿ ಸರಿಯಾಗಲಿಲ್ಲವೆ?"

"ಒಂದು ಹರಳು ಉಪ್ಪು ಜಾಸ್ತಿಯಾಯ್ತು.ಎಷ್ಟು ಎಚ್ಚರಿಕೆಯಿಂದ ಆರಿಸಿದರೂ ಒಂದು ಕಲ್ಲು ಸಿಕ್ಕಿತು ಅನ್ನದಲ್ಲಿ."

ನಿಧಾನವಾಗಿ ಹೇಳಿದಳು.

ನನಗೆ ತುಂಬಾ ಆಶ್ಚರ್ಯವಾಯ್ತು.

"ಅಷ್ಟು ಮಾತ್ರಕ್ಕೇ, ಅಷ್ಟೊಂದು ಬೈಗಳೇ? ಕಲ್ಲು ತೆಗೆದು ಹಾಕಿ, ಉಪ್ಪಿನಕಾಯಿ ಬಡಿಸಿಕೊಂಡರಾಯ್ತು. ಎಷ್ಟು ಎಚ್ಚರಿಕೆಯಿಂದಿದ್ದರೂ ತಪ್ಪಾಗದಿರುತ್ತದೆಯೆ? ಪ್ರತಿ ಸಣ್ಣ ವಿಷಯಕ್ಕೂ ಹೀಗೆ ಮನಸು ನೋಯುವಂತಹ ಮಾತುಗಳನ್ನಾಡಿದರೆ..."

ಮತ್ತೆ ಭಾನುವೇ ಆರಂಭಿಸಿದರು –

"ಮೊದಲಿನಲ್ಲಿಯೇ ನನ್ನ ಅಡಿಗೆಯ ಮೇಲೆ ದುರಭಿಪ್ರಾಯ ಉಂಟಾಗಿದೆ. ನಿಜವಾಗಿಯೂ ಆಗ ನನಗೆ ಯಾವ ಕೆಲಸವೂ ಕೈಲಾಗುತ್ತಿರಲಿಲ್ಲ. ಹಸಿವನ್ನೂ ಅಡಗಿಸಲಾರದಷ್ಟು ಹಾಳಾಗಿರುತ್ತಿತ್ತು! ನಾಲ್ಕೈದು ತಿಂಗಳಲ್ಲಿ ಎಲ್ಲವನ್ನೂ ಕಲಿತುಕೊಂಡೆ – ಈಗ ಏನಾದರೂ ಮಾಡುತ್ತೇನೆ. ಆದರೂ ಅವರ ಅಭಿಪ್ರಾಯ ಮಾತ್ರ ಬದಲಾಗಿಲ್ಲ. ನಾನೇನೂ ಕೈಲಾಗದವಳೆಂದೂ, ಅವರಿಗೆ ಸುಖವಿಲ್ಲವಾಯಿತೆಂದೂ, ಅವರ ಉದ್ದೇಶ! ಈಗ ಏನಾದರೂ ನನ್ನ ಕೆಲಸದಲ್ಲಿ ಸ್ವಲ್ಪ ತಪ್ಪು ಕಂಡು ಬಂದರೂ ಸರಿ, ಆ ಹಳೆಯ ಅಭಿಪ್ರಾಯ ಹೊರಬರುತ್ತದೆ. ಇಷ್ಟ ಬಂದರೆ ಬೈಯುತ್ತಾರೆ ನಾನೇನು ಮಾಡಲಿ ಹೇಳು?"

"ನನ್ನ ತಲೆ! ನಾನೇನು ಹೇಳಲಿ? ಏನೂ ಮಾತನಾಡಲಿಲ್ಲ."

"ಇಂದಿನ ಕೂಗಾಟಕ್ಕೆ ಉಪ್ಪು ಜಾಸ್ತಿಯಾದುದೊಂದೇ ಅಲ್ಲ – ಅದು ಕೇವಲ ನಿಮಿತ್ತ. ನೀನು ನನಗೆ ಪುಸ್ತಕಗಳನ್ನು ತಂದುಕೊಡುತ್ತಿದ್ದೀ ಎಂದೂ, ನಾನು ಹಾಯಾಗಿ ಓದುತ್ತಿದ್ದೇನೆಂಬುದು ಹಿನ್ನಲೆ."

ನಾನು ಆಶ್ಚರ್ಯಗೊಂಡು ನೋಡಿದೆ.

"ಏಕೆ ಆಶ್ಚರ್ಯಪಡುತ್ತೀ? ಆ ಬೈಗಳ ನೀನೂ ಕೇಳಿಸಿಕೊಂಡೆಯಲ್ಲ! ಅರ್ಥವಾಗಲಿಲ್ಲವೆ? ಅವರ ಮಾತಿನ ಮರ್ಮವನ್ನರಿಯಬೇಕಾದರೆ ಬಹಳ ಅನುಭವವೇ ಬೇಕು."

"ಓಹೋ! ಅದೇ ಕಾರಣವೇ, ಅವರು ನನ್ನ ಹತ್ತಿರ ಸರಿಯಾಗಿ ಮಾತನಾಡುವುದಿಲ್ಲ."

ಭಾನು ಮತ್ತೆ ಮಾತನಾಡಲಿಲ್ಲ. ನಾನು ಯೋಚಿಸಿದೆ.

"ಹಾಗಾದರೆ ಭಾನು, ಭಾವನಿಗಿಷ್ಟವಿಲ್ಲವಾದ ಕೆಲಸ ನಾನು ಮಾಡಿದರೆ ಚೆನ್ನಾಗಿರುತ್ತದೆಯೆ? ಇನ್ನೂ ನಾನು ಪುಸ್ತಕಗಳನ್ನು ತಂದುಕೊಡುತ್ತಿದ್ದರೆ... ನೀನೂ ಯೋಚಿಸು..."

"ಕೇಶು! ನಾನು ಹೊಟ್ಟೆ ತುಂಬಾ ಊಟ ಮಾಡುವುದೂ ಅವರಿಗಿಷ್ಟವಿಲ್ಲ. ಮೂಗಿನವರೆಗೂ ತಿಂದು, ಹಾಯಾಗಿ ನಿದ್ರೆ ಮಾಡುತ್ತೀ ಎಂದು ಬೇಕಾದಷ್ಟು ಸಾರಿ ಬೈದಿದ್ದಾರೆ. ಹಾಗಾದರೆ ಊಟ ನಿದ್ರೆಯನ್ನೂ ಬಿಟ್ಟುಬಿಡಲೇ? ನಾವು ಮಾಡಬಾರದ ಕೆಲಸ ಮಾಡುತ್ತಿದ್ದೇವೆಯೆ? ಪುಸ್ತಕಳನ್ನೋದುವುದೂ, ಊಟ ಮಾಡುವಂತಹ ಸಾಮಾನ್ಯವಾದ ವಿಷಯವೇ ಎಂದು ಓದುತ್ತಾ ಕುಳಿತರೆ ನನಗೆ ಶಾಂತಿ, ಸಮಾಧಾನಗಳಿರುತ್ತವೆ. ಅವುಗಳನ್ನು ತರುವುದನ್ನು ನೀನು ನಿಲ್ಲಿಸುವುದಾದರೆ... ಸರಿ ನಿನ್ನಿಷ್ಟ!"

"ಹುಂ! ಸರಿ! ನಾನೇನೋ ತಂದುಕೊಡುತ್ತಿರುತ್ತೇನೆ. ಆದರೆ ನೀನು ಅವುಗಳನ್ನು ಗೋಪ್ಯವಾಗಿರಿಸು. ಭಾವನ ಕಣ್ಣಿಗೆ ಬೀಳಿಸಬೇಡ, ಅಷ್ಟೆ!"

"ಎಂತಹ ಕಳ್ಳ ಬಾಳು!" ಎಂದು ವಿಷಾದದಿಂದ ನಕ್ಕಳು ಭಾನುಮತಿ.

"ಅಂದ ಹಾಗೆ ಡಾಕ್ಟರುಗಿರಿ ಮಾಡುವುದು, ಎಂದನಲ್ಲ ಅದೇನು?" ಎಂದು ಕೇಳಿದೆ.

"ಅವರ ಅವಹೇಳಿಕೆಯ ಮಾತಿಗೆಲ್ಲಕ್ಕೂ ನಾನೇನು ಅರ್ಥ ಹೇಳಲಿ? ಯಾವಾಗಲೋ ಒಂದು ಸಾರಿ ಮಾತನಾಡುವಾಗ ಬಾಯಿ ತಪ್ಪಿ,

'ನಾನು ಕಾಲೇಜಿಗೆ ಸೇರಿದ್ದರೆ ಇಷ್ಟು ಹೊತ್ತಿಗೆ ಡಾಕ್ಟರಾಗುತ್ತಿದ್ದೆ!' ಎಂದು ಬಿಟ್ಟೆ. ಕರ್ಮ ಅದನ್ನೇ ಹಿಡಿದುಕೊಂಡು ಮಾತು ಮಾತಿಗೂ ಹಂಗಿಸುವುದು. ಸಲಿಗೆಯಿಂದಾಗುವ ಮಾತುಗಳನ್ನೂ ಅಂದು ಸಾಧಿಸಿದರೆ, ಅಂತಹವರ ಮುಂದೆ ಮನಸ್ಸು ಬಿಚ್ಚಿ ಮಾತನಾಡಲು ಆಗುತ್ತದೆಯೆ?"

ಭಾನುವಿನ ಮಾತಿಗೆ ನಾನು ಏನೆಂದು ಉತ್ತರವನ್ನೂ ಕೊಡಲಿಲ್ಲ. ಭಾನು ಎದ್ದು ತಟ್ಟೆಗಳನ್ನು ತೆಗೆದುಕೊಂಡಳು. ಏನೋ ನೆನಪಿಗೆ ಬಂದವಳಂತೆ.

"ನಿನಗೆ ಹೇಳಿದನೆ ಕೇಶು! ಅಜ್ಜಿಯ ಮಗಳು ಪಾಪ ತೀರಿಕೊಂಡಳಂತೆ!" ಎಂದಳು.

"ಸತ್ತೇ ಹೋದಳೇ?" ಎಂದೆ ಆಶ್ಚರ್ಯದಿಂದ.

"ಹೌದು, ಪಾಪ ಅಜ್ಜಿಯ ಮುಖ ನೋಡಲೇ ಆಗುವುದಿಲ್ಲ. ಆಕೆಗೆ ಆ ಒಂದು ಆಧಾರವೂ ತಪ್ಪಿ ಹೋಯ್ತು. ಹತ್ತು ದಿನವಾಯ್ತು."

"ಏನು ಖಾಯಿಲೆಯಾಗಿತ್ತು ಭಾನು?"

"ಖಾಯಿಲೆಯೂ ಇಲ್ಲ ಕಸಾಲೆಯೂ ಇಲ್ಲ. ಗರ್ಭಿಣಿಯಾದಾಗ ದಿನ ತುಂಬುತ್ತಿದ್ದಂತೆ ಪ್ರತಿ ಸಾರಿಯೂ ಹೊಟ್ಟೆ ನೋವು ಬರುತ್ತಿತ್ತು. ಹಾಗೇ ಮೂರು ಮಕ್ಕಳಾದುವು. ಮೂರನೆಯ ಮಗು ಹುಟ್ಟಿದನಂತರ, ಆಕೆ ಮತ್ತೆ ಗರ್ಭಿಣಿಯಾದರೆ ಅಪಾಯವೆಂದು ಡಾಕ್ಟರು ಹೇಳಿದ್ದರಂತೆ. ಆದರೂ ಆ ಮಹಾನುಭಾವ ಆಪರೇಷನ್ನೂ ಮಾಡಿಸಿಕೊಳ್ಳಲಿಲ್ಲ. ಹೋಗುವುದು ತನ್ನ ಪ್ರಾಣವಲ್ಲ, 'ಸೊಸೆಯ ಅಪ್ಪನಾದರೂ ಸಾಯಲಿ, ಅಥವಾ ಮಗಳ ಮಾವನಾದರೂ ಸಾಯಲಿ, ತನಗೇನು?' ಎನ್ನುವಂತೆ ವರ್ತಿಸಿದ. ಆ ಹುಡುಗಿ ಗರ್ಭವತಿಯಾದಳು, ಮಾಮೂಲಿನಂತೆ ಹೊಟ್ಟೆನೋವು ಬಂದು ಅವಳನ್ನೇ ತೀರಿಸಿಬಿಟ್ಟಿತು. ಹೋಗಲಿ ಬಿಡು, ಅವನಿಗೆ ಇನ್ನೊಬ್ಬ ಹೊಸ ಹೆಂಡತಿ ಬರುತ್ತಾಳೆ."

"ಛೀ! ಅಷ್ಟು ನಿಷ್ಠುರವಾಗಿ ಮಾತನಾಡಬೇಡ ಭಾನು! ಅವನೇನೋ ಅಲಕ್ಷ್ಯ ಮಾಡಿರಬೇಕು, ಇಷ್ಟರಲ್ಲಿ ಏನಾಗುತ್ತದೋ ಎಂದುಕೊಂಡು..."

"ಹೌದ್ಹೌದು, ಅದೇ ಅವನ ಪ್ರಾಣಕ್ಕೆ ಕಂಟಕವೆಂದು ಡಾಕ್ಟರು ಹೇಳಿದ್ದರೆ ಅಲಕ್ಷ್ಯ ಮಾಡುತ್ತಿದ್ದನೇ?"

"ಅಂತಹ ಮೂರ್ಖ ಮಾಡುತ್ತಿದ್ದನೇನೋ, ಗೊತ್ತಿಲ್ಲವೇ, 'ಮೂರ್ಖಸ್ಯ ನಾಸ್ತ್ಯಾಷಧಂ' ಎಂದ ಹಾಗೆ. ಸಾಮಾನ್ಯವಾಗಿ ಬಹಳ ಮಂದಿ ಕೈ ಸುಟ್ಟ ನಂತರ ಸೌಟನ್ನು ತೆಗೆದುಕೊಂಡ ಹಾಗೆ. ಗಾದೆ ಕೇಳಿಲ್ಲವೆ, 'ಅಟ್ಟ ಮೇಲೆ ಒಲೆ ಉರಿಯಿತು, ಕೆಟ್ಟ ಮೇಲೆ ಬುದ್ಧಿ ಬಂತು,' ಎಂದು."

"ಕೇಶೂ, ನಿನ್ನ ಸಮರ್ಥನೆ, ಪಕ್ಷಪಾತಗಳನ್ನು ನಾನೊಪ್ಪುವುದಿಲ್ಲ. ಅವನಿಗೆ ತನ್ನ ಹೆಂಡತಿ ಸಾಯುತ್ತಾಳೆ ಎನ್ನುವ ಭಯವಾದರೂ ಬೇಡವೆ? ಲವಲೇಶವಾದರೂ ಸಂಕೋಚವಿದ್ದರೂ ಅವನು ಅಲಕ್ಷ್ಯ ಮಾಡುತ್ತಿರಲಿಲ್ಲ. ಅವಳನ್ನು ಏನೋ ಒಂದು ರೀತಿಯಲ್ಲಿ ಕಾಪಾಡಿಕೊಳ್ಳಲು ಪ್ರಯತ್ನಿಸುತ್ತಿದ್ದ."

ಅವಳ ಮಾತು ಕೇಳಿ, ಯೋಚಿಸಿದಂತೆ ಅದೂ ನಿಜವೇ ಅನ್ನಿಸಿತು.

"ತನ್ನನ್ನು ನಂಬಿ, ತನ್ನವರನ್ನೆಲ್ಲಾ ಬಿಟ್ಟು ಬಂದು ತನ್ನ ಸರ್ವಸ್ವವನ್ನೂ ಅರ್ಪಿಸಿ, ನೀನೇ ಗತಿ, 'ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ', ಎನ್ನುವಂತಹ ಹೆಂಡತಿಯ ಪ್ರಾಣವನ್ನು ಅತಿ ಹಗುರಾಗಿ ನೋಡುವಂತಹ ಗಂಡಸರೂ ಇದ್ದಾರೆಂದರೆ ಅತಿಶಯೋಕ್ತಿಯಲ್ಲ. ಗಂಡನಿಗೆ ವಿಷವಿಕ್ಕಿ ಕೊಂದಂತಹ 'ಪತಿಭಕ್ತಿ'ಯುಳ್ಳ ಹೆಂಡತಿಯರೂ ಇಲ್ಲದಿಲ್ಲ. ಮೊನ್ನೆ ಎಲ್ಲೋ ಓದಿದ ನೆನಪು, ವಿದೇಶದಲ್ಲಿ ಯಾವಳೋ ಒಬ್ಬಳೂ ಒಬ್ಬನನ್ನು ಮನಸಾರೆ ಪ್ರೇಮಿಸಿದೆನೆಂದು ಹೇಳಿ ಮದುವೆಯಾಗಿ, ಅವನ ಹೆಸರಿನಲ್ಲಿ ಲಕ್ಷಾಂತರ ರೂಪಾಯಿಗೆ ಜೀವವಿಮೆ ಮಾಡಿ, ಅವನನ್ನು ಕೊಲ್ಲಲು ಪ್ರಯತ್ನಿಸಿದಳಂತೆ. ಇಂತಹವು ನಮ್ಮ ದೇಶದಲ್ಲಿ ತುಂಬಾ ಅಪರೂಪ ಎಂದುಕೋ – ಆದರೂ ನಾವು ಯಾವುದನ್ನೂ ಹೀಗೆ ಸರಿ ಎಂದು ನಿರ್ಣಯಿಸಲಾರೆವು ಭಾನು! ಕೆಟ್ಟತನವೆನ್ನುವುದು ಕೇವಲ ಗಂಡಸಿಗೆ ಮಾತ್ರವೆಂದು ಹೇಳಲಾಗುವುದಿಲ್ಲ."

"ಒಬ್ಬರು ತಪ್ಪು ಮಾಡಿದಾಗ, ಇನ್ನೊಬ್ಬರು ತಪ್ಪು ಮಾಡಿದರೆ ಇಲ್ಲವೆ ಎನ್ನುವ ಪ್ರಶ್ನೆಯಲ್ಲ. ಗಂಡನನ್ನು ಅಲಕ್ಷ್ಯ ಮಾಡುವ ಹೆಂಡತಿಗೆ ಪ್ರಪಂಚದಲ್ಲಿ ಯಾವ ರೀತಿಯ ಸತ್ಕಾರ ಲಭಿಸುತ್ತದೆಯೋ ಗೊತ್ತೇ? ಅಂಥದೇ ತಪ್ಪು ಮಾಡದ ಗಂಡಸಿಗೆ ಆ ಶಿಕ್ಷೆ ಇಲ್ಲವಲ್ಲ! ದೈವೇಚ್ಛೆ! ಹಾಗಿಲ್ಲವಾದರೆ ಆ ಹೆಣ್ಣಿನ ಕರ್ಮ ಅಷ್ಟೆ! ಗಂಡು ನಾಲ್ಕು ಜನಗಳಲ್ಲಿ ತಲೆ ಎತ್ತಿ ಮಹಾರಾಜನಂತೆ ತಿರುಗಾಡುತ್ತಾನೆ. ಅಪರಾಧಿ ಯಾರಾದರಾಗಲೀ, ಶಿಕ್ಷೆಯನ್ನನುಭವಿಸ ತಕ್ಕದ್ದೇ ನ್ಯಾಯ; ಅದನ್ನೇ ಇಂಗ್ಲೀಷಿನಲ್ಲೂ 'A rule is a rule even to a fool' ಎನ್ನುತ್ತಾರೆ."

"ಭಾನು ನಿನ್ನ ಜೊತೆ ಮಾತನಾಡಬೇಕಾದರೆ ತುಂಬಾ ಸಹನೆ ಅತ್ಯಗತ್ಯವಮ್ಮ. ನಾನು ಒಂದು ಮಾತು ಹೇಳುತ್ತೇನೆ ಕೇಳು – ಪ್ರಪಂಚವನ್ನು ನೀನು ತಿದ್ದಲಾರೆಯಮ್ಮ. ಹಾಗೆ ನೋಡಿದರೆ ನಿನ್ನ ಸಂಸಾರವನ್ನೇ ನೀನು ತಿದ್ದಿಕೊಳ್ಳಲಾಗುತ್ತಿಲ್ಲ. ತಾವರೆಯ ಎಲೆಯ ಮೇಲಿನ ನೀರು ನಮಗೊಂದು ಪಾಠವನ್ನು ಕಲಿಸುತ್ತದೆ. ನಾವು ಯಾವುದನ್ನು ಅಂಟಿಸಿಕೊಳ್ಳಬಾರದು. ಹಾಗೇ ಯೋಚಿಸುತ್ತಾ ಕುಳಿತರೆ ನಮಗೆ ಸುಖವೆನ್ನುವುದು ಮರೀಚಿಕೆಯಾಗುತ್ತದೆ. ಎಲ್ಲ ಸಮಸ್ಯೆಗಳೇ! ಮತ್ತೆಲ್ಲ ಪ್ರಶ್ನೆಗಳೇ! ಅದರಿಂದ ನಾವು ಸಾಧಿಸುವಂಥದು ಏನೂ ಇಲ್ಲ. ವೃಥಾ ನಮ್ಮ ತಲೆಯನ್ನೇಕೆ ಕೆಡಿಸಿಕೊಳ್ಳಬೇಕು? ಪ್ರಪಂಚ ಹೇಗೆ ಸಾಗುತ್ತದೋ ಹಾಗೆ ಸಾಗಲಿ! ಅದರೊಂದಿಗೆ ನೀನೂ ನಡಿ ನಾನು ಬರುತ್ತೇನೆ. ಅಷ್ಟೇ ವಿನಹ ನಮ್ಮನ್ನು ಪ್ರಪಂಚ ಹಿಂಬಾಲಿಸದು. ಗಾಳಿ ಬಂದಾಗ ತೂರಿಕೊಳ್ಳುವುದು ವಿವೇಕಸಧೀರಮತ!"

ನನ್ನ ಮಾತು ಕೇಳಿ ನಕ್ಕಳು ಭಾನು.

"ತಾವು ಯಾವಾಗ ಇಂತಹ ಘನ ವೇದಾಂತಿಗಳಾದಿರಿ?" ಎಂದು ಕೇಳಿದಳು.

"ಅಯ್ಯೋ.. ಈಗ ತಾನೇ ತಾಯಿ! ತಾವು ಶಿಷ್ಯೆಯಾಗುವುದಾದರೆ ಸಂತೋಷವಾಗಿ ಸ್ವೀಕರಿಸುತ್ತೇವೆ?" ನಗುನಗುತ್ತಾ ನಾಟಕೀಯವಾಗಿ ಹೇಳಿದೆ.

"ಓಹೋ! ಅಗತ್ಯವಾಗಿ! ಈ ಯೋಚನೆಯ ಕೀಟಗಳು ಸೇರದಂತೆ ನಮ್ಮ ತಲೆಯನ್ನು ರಿಪೇರಿ ಮಾಡಿಬಿಡಿ."

"ಶಿವೋಹಂ! ಎಲ್ಲಿ ಒಂದು ಡಜನ್ ಬಾಳೇಹಣ್ಣು ... ಮಂಗಳಾರತಿ... ಕರ್ಪೂರ .. ತೆಂಗಿನಕಾಯಿ ... ಎಟ್ಸೆಟ್ರಾ!"

ಎನ್ನುತ್ತಿರುವಂತೆ ಇಬ್ಬರೂ ಮನಸಾರೆ ನಕ್ಕೆವು.

* * *

ನಂತರ ನಾಲ್ಕಾರು ವಾರ ಗಮನಾರ್ಹವಾದ ವಿಶೇಷವೇನು ನಡೆದಂತೆ ಕಾಣಲಿಲ್ಲ. ಸಣ್ಣಪುಟ್ಟ ವಿಷಯಗಳಿದ್ದರೂ ಅವುಗಳನ್ನು ಸಹನೆಯಿಂದ ಅನುಭವಿಸುವುದೇ ವಿನಹ ಹೇಳಿಕೊಂಡರೆ ನಾಚಿಕೆಗೇಡು. ಭಾನು ಅಭಿಮಾನದಿಂದ ಕೆಲವು ವಿಷಯಗಳನ್ನು ಮರೆಮಾಡುತ್ತಿದ್ದಳು. ನಾನು ಆಗಾಗ ಭಾವನ ನಡೆವಳಿಕೆಯನ್ನು ಗಮನಿಸುತ್ತಲೇ ಇದ್ದೆ. ಅವನು ನನ್ನೊಂದಿಗೆ ಸ್ವಲ್ಪ ವಿಮುಖನಾಗಿ, ಅಸಮಾಧಾನದಿಂದಿರುವಂತಿದ್ದ. ಜಾಸ್ತಿ ಮಾತನಾಡುತ್ತಿರಲಿಲ್ಲ. ಒಟ್ಟಿನಲ್ಲಿ ಕಾಲ ಯಾವ ಎಡರು ತೊಡರುಗಳನ್ನು ಗಮನಿಸದಂತೆ ಸಾಗುತ್ತಿತ್ತು. ಈ ಪ್ರಣಯತೆ ಮುಂಬರುವ ಬಿರುಗಾಳಿಗೆ ನಾಂದಿಯಲ್ಲವಲ್ಲ ಎನ್ನಿಸಿತು. ಭಾನು ಪೆನ್ನಿನ ಮುಳ್ಳು ಮುರಿದು ಹೋಗಿತ್ತು. ಎರಡು ದಿನ ಸೋಮಾರಿತನವಾದರೂ ನಂತರ ಹಾಕಿಸಿಕೊಟ್ಟೆ. ಭಾನುವಿಗೆ ಖರ್ಜೂರವೆಂದರೆ ತುಂಬಾ ಇಷ್ಟ. ಒಂದೆರಡು ವೀಸೆ ಖರ್ಜೂರ. ಒಂದಿಷ್ಟು ಸೇವಂತಿಗೆ ಹೂವು – ಒಂದಿಷ್ಟು ಬಿಸ್ಕತ್ತು ಅಳಿಯನಿಗೆ ತೆಗೆದುಕೊಂಡು, ಹೊಸದಾದ ಚೀಲದಲ್ಲಿ ತುರುಕಿ, ಅಂದೇ ಹೊಸದಾಗಿ ಕೊಂಡಿದ್ದ ಸೈಕಲ್ ಹತ್ತಿ ಹೊರಟೆ.

ಭಾನುವಿನ ಮನೆಯ ಮುಂಬಾಗಿಲು ಹಾಕಿತ್ತು. ನನಗೇಕೋ ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು. ಭಾವನ ಕಂಠ ತಾರಕದಲ್ಲಿತ್ತು ಏನೇನೋ ಕಿರಿಚಾಡುತ್ತಿದ್ದ.

"ನಿನಗೆ ಈಚೀಚೆಗೆ ಅಹಂಕಾರ ಅತಿಯಾಗುತ್ತಿದೆ ಕಣೆ! ನನಗೆ ಗೊತ್ತು. ನಿನ್ನ ಮೆರೆದಾಟ – ನಿನಗೆ ಮನೆ, ಸಂಸಾರ, ಗಂಡನ ಅಕ್ಕರೆ ಆಸ್ತಿ ಏನು ಬೇಕಾಗಿದೆ?"

ಸೈಕಲ್ಲನ್ನು ಸ್ಟ್ಯಾಂಡ್ ಹಾಕಿ ನಿಲ್ಲಿಸಿ ಮೆಟ್ಟಲ ಮೇಲೆ ನಿಂತೆ.

"ನಿನ್ನ ಅಗತ್ಯಗಳನ್ನು ತೀರಿಸುವವರೂ, ನಿನಗೆ ಬೇಕಾದವುಗಳನ್ನೆಲ್ಲಾ ಸಪ್ಲೈ ಮಾಡುವವರೂ ಇರುವಾಗ, ಗಂಡ ಮುಂಡೇ ಮಗನನ್ನು ಮಡ್ಡಿ ಎಂದು ತಿಳಿದುಕೋ ಎಂದು ಎಲ್ಲಿದೆಯೋ? ಹೊಲಮೂಳಿ!"

ಬೆಂಕಿ ತುಳಿದಂತೆ ಬೆಚ್ಚಿ ಬಿದ್ದೆ. ಎಷ್ಟು ಒರಟೊರಟಾಗಿ ಬೈಯುತ್ತಿದ್ದಾನೆ! ಆ ಕೋಪ ಪೂರ್ತ ನನ್ನ ಮೇಲೇ. ಇನ್ನು ಮೇಲೆ ನಾನು ಬರದೇ ಇರಲೆ...

"ಸ್ವಲ್ಪ ಮೈಮೇಲೆ ಜ್ಞಾನವಿರಿಸಿಕೊಂಡು ತಿರುಗಾಡು, ನಿನ್ನ ಡಾಕ್ಟರ್ ದೊಡ್ಡಸ್ತಿಕೆ ತೋರಿಸಬೇಡವೆಂದು ನಿನಗೆಷ್ಟು ಸಾರಿ ಹೇಳುವುದು? ಯಾವಾಗ ನಿನಗೆ ಬುದ್ಧಿ ಬರುವುದು? ನಿನಗೇನು ಕಣ್ಣು ಕಾಣಿಸದೆ ಇಂಗಿಹೋಗಿದೆಯೆ? ಸೋಮಾರಿತನ ಜಾಸ್ತಿಯಾಯ್ತೆ? ಸಂಸಾರಿಯಾಗಿರಬೇಕಾದ ಗುಣಗಳೇನಿವೆಯೆ ನಿನಗೆ? ನಿನ್ನನ್ನು ಕಟ್ಟಿಕೊಂಡು ನಾನೇನು ಸುಖ ಅನುಭವಿಸುತ್ತಿದೇನೋ? ನಿನಗೆ ಏಕೆ ಮದುವೆ ಮಾಡಿದನೋ ನಿಮ್ಮಪ್ಪನಿಗೆ ಗೊತ್ತು."

ನನಗೆ ಮಿತಿಮೀರಿದ ಕೋಪದಿಂದ ನನ್ನ ಕೆಳದುಟಿಗಳು ಹಲ್ಲುಗಳ ನಡುವೆ ನಲುಗುತ್ತಿತ್ತು. ಇಂದಿನ ದಿನಗಳಲ್ಲಿ ಒಬ್ಬ ಕೂಲಿಯವನು ಕೂಡ, ಭಿಕ್ಷುಕನೂ ಕೂಡ ಹೆಂಡತಿಯನ್ನು ಹಾಗೆ ಬೈಯ್ಯುವುದಿಲ್ಲ. ಅವನ ಬೈಗಳು ಕಿವಿಗೆ ಬೀಳುತ್ತಿದ್ದುವು. "ನಿನಗೆ ನಿಮ್ಮಪ್ಪ ಸರಿಯಾದ ವಯಸ್ಸಿನಲ್ಲಿ ಮದುವೆ ಮಾಡಿದ್ದರೆ ಇಷ್ಟು ಹೊತ್ತಿಗೆ ನಾಲ್ಕು ಮಕ್ಕಳಿರಬೇಕಾಗಿತ್ತು. ಅದು ಬಿಟ್ಟು ಕತ್ತೆಯಂತೆ ಬೆಳೆಸಿ ನನ್ನ ಕತ್ತಿಗೆ ಉರುಲು ಹಾಕಿದರು. ನಾನು ಕುರುಡು ಮುಂಡೇ ಮಗನಲ್ಲದಿದ್ದರೆ ನಿನ್ನ ಕತ್ತಿಗೆ ತಾಳಿ ಬಿಗಿಯುತ್ತಿದ್ದೆನೇ? ನನ್ನ ಕರ್ಮ ನಿನ್ನನ್ನು ಕಟ್ಟಿಕೊಂಡೆ! ಹೆಣ್ಣು ಮುಂಡೆ ಹಾಳಾಗು ಎಂದು ಸುಮ್ಮನಿದ್ದಷ್ಟು ತಲೆಯ ಮೇಲೆ ಹತ್ತುತ್ತಿದ್ದೀ. ಕಾಲುಕಾಲಿನಿಂದ ಒದ್ದು ಜುಟ್ಟು ಹಿಡಿದು ಬೀದಿಗಿಳಿದಾಗ ನಿಮ್ಮಪ್ಪ ಅಡ್ಡ ಬರುತ್ತಾನೋ ನಿಮ್ಮಣ್ಣ ಮುಂಡೇ ಮಗ ಅಡ್ಡ ಬರುತ್ತಾನೋ...."

"ಬದ್ಮಾಷ್!" ಕೋಪದಿಂದ ಚೀರಿತು ನನ್ನ ಹೃದಯ. ಆ ಕರೆಗೆ ಓಗೊಟ್ಟಂತೆ ಕಂಪಿಸುತ್ತಿತ್ತು ಶರೀರ. ಮುಷ್ಟಿ ಬಿಗಿಯಾಯ್ತು! ಆ ಒದೆ ನಿನಗೇ ಒದೇತೀನಿ, ನಿಮ್ಮಪ್ಪ ಅಡ್ಡ ಬರುತ್ತಾನೋ ನಿಮ್ಮ ತಾತ ಅಡ್ಡ ಬರುತ್ತಾನೋ ನಾನೂ ನೋಡ್ತೀನಿ ಎಂದು ಕೊಂಡಂತೆ ರೈಲಿನ ಹೊಗೆಯಂತೆ ನನ್ನ ಉಸಿರು ಭುಕ್ ಎಂದು ಹೊರಬರುತ್ತಿತ್ತು. ಮುಂದಡಿಯಿರಿಸಿದೆ...

"ನಿಲ್ಲು" ಘರ್ಜಿಸಿತು ಹೃದಯ.

"ಅವಿವೇಕಿ ಆವೇಶಪಡಬೇಡ" ಎಚ್ಚರಿಸಿತು ಮತ್ತೆ...

ಹೌದು ಎಂದುಕೊಂಡೆ. ಭಾರವಾದ ಉಸಿರೊಂದು ನಿಧಾನವಾಗಿ ಹೊರ ಬಂತು. ಅವನೊಂದಿಗೆ ಘರ್ಷಣೆಗೆ ಸಮಯವಲ್ಲ. ಉಪಯೋಗವೂ ಇಲ್ಲ. ನನ್ನ ಕೋಪತಾಪಗಳಿಗೆ ಅನುವಾದ ಅವಕಾಶವಿಲ್ಲ. ಭಾನುವನ್ನು ಈ ವಿಷವೃತ್ತದಿಂದ ಹೊರ ತರಲಾಗುವುದಿಲ್ಲ. ಈ ಸೆರೆ ಅವಳಿಗೆ ಅನಿವಾರ್ಯ.

ನನ್ನನ್ನು ನಾನು ನಿಗ್ರಹಿಸಿಕೊಂಡೆ. ಒಂದು ಘಳಿಗೆ ನಿಂತೆ. ಹಿಂದಿರುಗಿ ಹೊರಟು ಹೋಗೋಣವೆನ್ನಿಸಿತು. ಆದರೆ... ಭಾನು ಎಷ್ಟು ನೊಂದಿರುತ್ತಾಳೋ! ಒಂದು ಸಾರಿ ಕೊಂಚ ಸಮಾಧಾನಪಡಿಸಿ ಹೋದರೆ....

ಬಾಗಿಲು ತೆರೆಯಿತು. ಬೆನ್ನ ಮೇಲೆ ಬಟ್ಟೆಯ ಮೂಟೆ ಹೊತ್ತುಕೊಂಡು, ಅಗಸನೇನೋ ಹೊರಬಂದ. ಅಚ್ಚರಿಗೊಂಡು ನಿಂತೆ. ಅವನು ನನ್ನತ್ತ ನೋಡಿ ತಲೆ ತಗ್ಗಿಸಿಕೊಂಡು ಹೊರಟು ಹೋದ. ಒಬ್ಬ ಅಗಸರವನ ಮುಂದೆ, ನವನಾಗರೀಕತೆಯಲ್ಲಿನ ಸಮಾಜದ ಒಬ್ಬ ವ್ಯಕ್ತಿ ಹೆಂಡತಿಯನ್ನು ಹೀನವಾಗಿ, ನೀಚವಾಗಿ, ಅನೂಹ್ಯ ರೀತಿಯಲ್ಲಿ ಬೈಯುವುದನ್ನು ನಾನು ಈಗ

ಕಣ್ಣಾರೆ ಕಾಣದಿದ್ದರೆ ನಂಬುತ್ತಿರಲಿಲ್ಲ. ಹೆಣ್ಣು ಎಷ್ಟೊಂದು ಅಭಿಮಾನವತಿ ಆದರೆ ಬಾಯ್ತೆರೆದು ಉತ್ತರ ಹೇಳದೆ ಸಹಿಸಬೇಕಾಗಿ ಬಂತು. ಏನು ಈ ದುರದೃಷ್ಟ?

ಆ ಘಳಿಗೆಯಲ್ಲಿ ಒಂದು ವಿಷಯಕ್ಕೆ ಬಹಳ ಚಿಂತಿಸಿದೆ. ಭಗವಂತನನ್ನೇ ಬೈದೆ. ಇದೇ ಭಾನು, ನಾನು ಒಬ್ಬ ತಾಯಿಯ ಹೊಟ್ಟೆಯಲ್ಲಿ ಹುಟ್ಟದಂತೆ ಮಾಡಿದ್ದ ದೇವರು. ಭಾನುವಿಗೆ ಅಣ್ಣಂದಿರಿಲ್ಲದಂತೆ ಮಾಡಿದ. ನಾನೇ ಭಾನುವಿನ ಸ್ವಂತ ಅಣ್ಣನಾಗಿದ್ದಿದ್ದರೆ, ಆ ದಾರಿಯೇ ಬೇರೆ. ಆ ಭಾವನೆನಿಸಿಕೊಂಡವನ ಒಂದೊಂದು ಮಾತಿಗೂ ಹಂಗಿಸಿ ಹಂಗಿಸಿ ದವಡೆಯ ಮೇಲೆ ಬಾರಿಸಿ, ಮೈಮೂಳೆ ಮುರಿಯುವಂತೆ ಬಡಿದು ತಂಗಿಯನ್ನು ಕರೆದುಕೊಂಡು ಹೋಗಿ ತಾಯಿಯ ಮಡಿಲಲ್ಲಿ ಮಲಗಿಸುತ್ತಿದ್ದೆ. ಅವಳು ಆ ನರಕದಲ್ಲಿ ಎಂತಹ ಯಾತನೆಯನ್ನನುಭವಿಸುತ್ತಿದ್ದಳು ಎಂಬುದನ್ನು ಚಿತ್ರಿಸಿದಂತೆ ವರದಿ ಒಪ್ಪಿಸುತ್ತಿದ್ದೆ. ಆದರೆ... ಆದರೆ... ನಾನು ಭಾನುವಿನ ಅಣ್ಣನಾದರೂ ಸ್ವಂತ ಅಣ್ಣನಲ್ಲ. ಯಾವ ವಿಧದಲ್ಲೂ ಅವಳಿಗೆ ರಕ್ಷೆಯಾಗಲಾರೆ. ನಾನು ದೂರವಾಗಿಯೇ ಇರಬೇಕು.

ಮತ್ತೆ ಹಿಂದಿರುಗಿ ಹೋಗಬೇಕೆನ್ನಿಸಿತು. ಆದರೆ ಅಪ್ರಯತ್ನವಾಗಿ ಒಳಗೆ ನಿಧಾನದಿಂದ ಅಡಿ ಇರಿಸಿದೆ. ಭಾವ... ಛೀ! ಆ ಪಶುವನ್ನು ಭಾವನೆಂದು ಕರೆಯಲು ಮನಸ್ಸೇ ಅಂಗೀಕರಿಸದು. ಕನ್ನಡಿಯ ಮುಂದೆ ನಿಂತು ತೀಡಿ ಬಾಚಿಕೊಳ್ಳುತ್ತಿದ್ದ. ತಕ್ಷಣ ಹಿಂದಿರುಗಿ ನನ್ನನ್ನು ನೋಡುತ್ತಲೇ ತಡವರಿಸಿದಂತಾದರೂ ಸುಧಾರಿಸಿಕೊಂಡ.

''ಬಂದಿರಾ? ನಿಮ್ಮ ತಂಗಿ ಅತಿ ಬುದ್ಧಿವಂತಳೇನೋ, ಎಂತಹ ಘನಕಾರ್ಯ ಮಾಡಿದಳೋ ನೋಡಿದಿರಾ?'' ಎಂದ.

ನನಗೆ ಕೋಪ ಉಕ್ಕಿ ಬಂತು. ಮನೆಯ ಹೊಸಲು ದಾಟುತ್ತಿರುವಂತೆಯೇ ನನ್ನ ತಂಗಿಯ ಮೇಲೆ ನನ್ನ ಹತ್ತಿರ ದೂರುವುದೇ!

''ಏನು ಮಾಡಿದಳು?'' ಕ್ಲುಪ್ತವಾಗಿ ಕೇಳಿದೆ.

''ಬಹಳ ದೊಡ್ಡ ಕಾರ್ಯ ಸಾಧನೆ ಮಾಡಿದ್ದಾಳೆ! ಅದನ್ನು ನೀವು ಕೇಳಿ ಮೆಚ್ಚುವುದೊಂದೇ ಬಾಕಿ!''

ಅವನ ಧೋರಣೆಗೆ ನನಗೆ ಅಸಹ್ಯವಾಯ್ತು.

''ಇವಳಿಗೆ ಅಹಂಕಾರದಿಂದ ಕಣ್ಣುಮುಚ್ಚಿ ಹೋಗಿದೆ ಎಂದರೆ ಆ ಅಗಸಮುಂಡೇ ಮಗನಿಗೂ ಹಾಳಾಗಿಹೋಯ್ತೆ? ಕುರುಡು ಮುಂಡೇ ಮಕ್ಕಳು! ನಿನ್ನೆ ಸಾಯಂಕಾಲ ಪಾರ್ಟಿಗೆ ಹಾಕಿಕೊಂಡು ಹೋಗಿದ್ದುದು. ಬಂದ ಕೂಡಲೆ ಬಿಚ್ಚಿ ಸ್ಟ್ಯಾಂಡಿನ ಮೇಲೆ ಹಾಕಿದ್ದು. ಮಧ್ಯಾಹ್ನ ನಿದ್ರೆಯಿಂದೇಳುವ ಹೊತ್ತಿಗೆ ಕೊಳೆಯ ಬಟ್ಟೆಯ ಜೊತೆ ಮೂಟೆ ಕಟ್ಟುತ್ತಿದ್ದಾನೆ. – ಎದುರಿಗೆ ನಿಂತು ತಮಾಷೆ ನೋಡುತ್ತಿದ್ದಾಳೆ ಈ ಯಜಮಾನಿ! ಮಡಿಕೆಯೂ ನಲುಗದ ಪ್ಯಾಂಟು ಕಣ್ಣಿಗೆ ಕಾಣಲಿಲ್ಲವೆ?''

ಅವನ ಫಿರ್ಯಾದು ಕೇಳಿ ಬೆರಗಾಗಿ ಹೋದೆ! ಎಂತಹ ಮನುಷ್ಯ ಇವನು? ಇಷ್ಟು ಯಃಕಶ್ಚಿತ ವಿಷಯಕ್ಕೆ...

"ಏನು ರಾಯರೇ! ಮಾತೇ ಇಲ್ಲ?"

"ಮಾತು ಏಕಿಲ್ಲ? ನೀವು ಆ ಬಿಳೀ ಪ್ಯಾಂಟನ್ನು ಹ್ಯಾಂಗರಿಗೆ ಹಾಕದೆ ಸ್ಟ್ಯಾಂಡಿನ ಮೇಲೇಕೆ ಹಾಕಿದಿರಿ?"

"ಓಹೋ! ತಾ ಮಾತನಾಡಿ ತಂಗಿಯನ್ನು ಗೆಲ್ಲಿಸಬೇಕೆಂದುಕೊಳ್ಳುತ್ತಿದ್ದೀರಾ? ಹಾಗೆಂದೂ ಪ್ರಯತ್ನಿಸಬೇಡಿ. ನಾನು ನನ್ನಿಷ್ಟ ಬಂದಂತೆ ಮಾಡುತ್ತೇನೆ. ಅವಳೂ ತನ್ನಿಷ್ಟ ಬಂದಂತೆ ಮಾಡುವುದೇ?"

"ಭಾವಾ! ಪ್ರತಿ ಸಣ್ಣ ವಿಷಯವನ್ನೂ ಅಪಾರ್ಥ ಮಾಡಿಕೊಳ್ಳಬೇಡಿ. ಇದರಲ್ಲಿ ಇಷ್ಟ ಬಂದಂತೆ ಮಾಡುವುದೇನಿದೆ? ಸಾಮಾನ್ಯವಾಗಿ ನಿಮ್ಮ ಮನೆಯಲ್ಲಿ ಮಾಸಿದ ಬಟ್ಟೆಗಳೇ ಸ್ಟ್ಯಾಂಡಿನ ಮೇಲಿರುತ್ತವೆ. ಈ ಪ್ಯಾಂಟು ಅಲ್ಲಿಯೇ ಇದ್ದುದರಿಂದ ಅಕಸ್ಮಾತ್ ಅದನ್ನು ಹಾಕಿದ್ದಾಳೆ. ಸ್ವಲ್ಪ ಎಚ್ಚರಿಕೆಯಿಂದ ನೋಡಿದರೆ ಮಾಸಿದ್ದಲ್ಲವೆಂದು ಗೊತ್ತಾಗುತ್ತಿತ್ತು."

"ಹೌದು! ಎಚ್ಚರಿಕೆಯಿಂದ ನೋಡುವ ಅಗತ್ಯ ಅವಳಿಗೆಲ್ಲಿದೆ?"

"ಏಕಿಲ್ಲ? ಇಲ್ಲದೆ ಅಲ್ಲ. ತಪ್ಪಾಗಿ ಹೋಯ್ತು. ತಪ್ಪು ಮಾಡುವುದು ಮಾನವನ ಸಹಜ ಗುಣ. ಆದರೆ ಅದನ್ನು ಕ್ಷಮಿಸಬಲ್ಲ ಹಿರಿ ಹೃದಯ, ಮನಸ್ಸು ಇತರರಿಗಿರಬೇಕು. ಒಂದು ವಾರದಲ್ಲಿ ಅದೇ ಪ್ಯಾಂಟು ಮಡಿ ಮಡಿಯಾಗಿ ಪುನಃ ಇಸ್ತ್ರಿಯಾಗಿ ಬರುತ್ತದೆ. ಈವತ್ತೆಲ್ಲಾ ಇನ್ನೆರಡಾಣೆ ಜಾಸ್ತಿ ಖರ್ಚಾಗುತ್ತದೆ. ಅಷ್ಟೆ ತಾನೇ? ಇಷ್ಟು ಸಣ್ಣ ವಿಷಯಕ್ಕೆ ಅಗಸರವನ ಮುಂದೆ ಬಾಯಿಗೆ ಬಂದಂತೆ ಬೈಯುವುದೇ! ಅದು ಯಾರಿಗೆ ಅವಮಾನವೆಂದು ಊಹಿಸಿದಿರಾ?"

ನನ್ನ ಮಾತು ಕೇಳಿ ಕೊಂಚ ಬೆವೆತು ಹೋದ – ಆ ಬೈಗಳಗಳನ್ನು ನಾನೂ ಕೇಳಿಸಿಕೊಂಡೆನೆನ್ನುವುದು ಗೊತ್ತಾಯ್ತು. ನಾನು ಮತ್ತೆ ಮುಂದುವರಿಸಿದೆ –

"ಬಿಳಿಯ ಬಟ್ಟೆಯನ್ನು ಅಪ್ಪಿತಪ್ಪಿ ಅಗಸನಿಗೆ ಹಾಕುವುದು ತಪ್ಪು ಎನ್ನುತ್ತೀರಾ?"

ಅವನು ಮುಖ ಗಂಟು ಹಾಕಿಕೊಂಡ.

"ತಪ್ಪು ಮಾಡುವುದೂ, ಕ್ಷಮೆ ಬೇಡುವುದೂ ಎಂದರೆ ನನಗೆ ಅಸಹ್ಯ! ಇಷ್ಟು ಸಣ್ಣ ಕೆಲಸವನ್ನು ಸರಿಯಾಗಿ ಮಾಡಲಾಗದಿದ್ದುದಕ್ಕೆ ನಾಚಿಕೆಪಡಬೇಕು."

"ಇರಬಹುದು, ಆದರೆ ಬೈಯುವಾಗಲೂ ನಯ, ನಾಜೂಕು ಇರಬೇಕು."

"ಓಹೋ! ನೀವು ಬೈದರೆ ಕೇಳಲು ಸುಶ್ರಾವ್ಯವಾಗಿ, 'ನೈಸ್' ಆಗಿ, ಆನಂದಕರ ವಾಗಿರುತ್ತದೇನೋ!"

"ಬೈಗಳು ಎಂದೂ ಯಾರಿಗೂ ಆನಂದವನ್ನುಂಟುಮಾಡವು. ಆದರೆ ಬೈಸಿಕೊಳ್ಳುವವರ ಅಭಿಮಾನ ಘಾಸಿಗೊಳ್ಳುವಷ್ಟು ತೀವ್ರವಾಗಿರಬಾರದು ಭಾವನವರೆ! ನೀವು ಬಾಯಿಗೆ ಬಂದಂತೆ ಬೈಯ್ಯುತ್ತಿದ್ದರೆ ಭಾನು ಎಷ್ಟು ತೀವ್ರವಾಗಿ ನೊಂದುಕೋಳ್ಳುತ್ತಾಳೋ ಎಂದು ಒಮ್ಮೆಯಾದರೂ ಯೋಚಿಸಿದ್ದೀರಾ?"

"ಅಗತ್ಯವಿಲ್ಲ. ತಾವಂತಹ ಅಭಿಮಾನದವರಾಗಿರುವಾಗ, ನಿಮ್ಮ ತಂಗಿಗೆ ಮದುವೆ ಮಾಡದೆ ಮನೆಯಲ್ಲಿಯೇ ಇರಿಸಿಕೊಳ್ಳಬೇಕಾಗಿತ್ತು."

"ಅಂದರೆ ನಿಮ್ಮ ಅಭಿಪ್ರಾಯ? ಮದುವೆ ಮಾಡಿಕೊಂಡ ಹೆಂಗಸು ವ್ಯಕ್ತಿತ್ವವನ್ನೇ ಕಳೆದುಕೊಳ್ಳುತ್ತಾಳೆಂದೇ?"

ಖಳನಾಯಕ ನಗುವಂತೆ ವಿಕಟಾಟ್ಟಹಾಸ ಮಾಡಿದ. ನಾನು ಮತ್ತೂ ಬೆರಗಾದೆ.

"ವ್ಯಕ್ತಿತ್ವ! ಅಹ್ಹಹ್ಹಹ್ಹಹ್ಹಾ! ಕೂಳಿಗಾಗಿ ಒಬ್ಬ ಗಂಡಸಿನ ಮೇಲೆ ಆಧಾರಗೊಳ್ಳುವ ಹೆಣ್ಣಿಗೂ ವ್ಯಕ್ತಿತ್ವವೆ? ಎಂತಹ ದೊಡ್ಡ ಪದ ಉಪಯೋಗಿಸುತ್ತೀರ್ರೀ? ಹಸಿವಾದರೆ ಹಿಟ್ಟು ಸಂಪಾದಿಸಿಕೊಳ್ಳಲು ಯೋಗ್ಯತೆ ಇಲ್ಲದ ಹೆಣ್ಣಿಗೆ, ವ್ಯಕ್ತಿತ್ವವಂತೆ, ಸ್ವತಂತ್ರವಂತೆ, ಆಶಯಗಳಂತೆ, ಆದರ್ಶಗಳಂತೆ..."

ಅವನ ವಿತಂಡ ವಾದವನ್ನು ಕೇಳುತ್ತಾ ಬೆಪ್ಪನಂತೆ ಕುಳಿತೆ, ಅವನು ಬಾಯಿಗೆ ಬಂದದ್ದನ್ನೇ ಬೊಗಳುತ್ತಿದ್ದ.

"ಹೆಂಗಸನ್ನು ಪೋಷಿಸುವವನು ಗಂಡಸು. ರಕ್ಷಿಸುವವನು ಗಂಡಸು! ಪಾಲಿಸುವವನು ಗಂಡಸು! ಈ ಕೆಲಸಗಳನ್ನು ಹೆಂಗಸು ಮಾಡಬಲ್ಲಳೆ ಹೇಳಿ! ಪ್ರಕೃತಿಯೇ ಹೆಣ್ಣನ್ನು ಅಡಗಿಸಿಟ್ಟಿದೆ! ಇನ್ನು ಯಾರೂ ಕೊಡುವ ಸ್ವಾತಂತ್ರವೆಲ್ಲಯ್ಯಾ? ಈ ಹೆಂಗಸು ಸ್ವಾತಂತ್ರ್ಯಗಳು, ವ್ಯಕ್ತಿತ್ವಗಳು, ಅಭ್ಯುದಯಗಳು – ಎಲ್ಲ ಉಪನ್ಯಾಸ ಕೊಡಲು ಲಾಯಖ್ಖೇ ವಿನಹ ಆಚರಣೆಗೆ ತರಲು ಯಾರಿಗೂ ಸಾಧ್ಯವಿಲ್ಲ. ಗಂಡಸಿಗೆ ಪ್ರಾಧಾನ್ಯತೆ ಇಲ್ಲವಾದಾಗ ಗಂಡು ಹೆಣ್ಣು ಎನ್ನುವ ಭೇದವೆಲ್ಲಿ? ಸರಿ! ನೀವು ಹೆಂಡತಿಯನ್ನು ಬೈಯ್ಯದೆ ಅನ್ನದೆ, ಎಷ್ಟರ ಮಟ್ಟಿಗೆ ವ್ಯಕ್ತಿತ್ವಕ್ಕೆ ಬೆಲೆ ಕೊಡುತ್ತೀರೋ ನಾನು ನೋಡುತ್ತೇನೆ!" ಎಂದ.

ಅತ್ಯಾಶ್ಚರ್ಯದಿಂದ ಹಾಗೇ ನಿಂತು ಬಿಟ್ಟೆ. ಆ ವ್ಯಕ್ತಿ ಏನು ಎಂದು ಪೂರ್ತಿ ಅರ್ಥವಾಯ್ತು. ಭಾನುವಿನಂತಹ ಅಭ್ಯುದಯವಾದಿಗೆ, ಇಂತಹ ಸನಾತನವಾದಿ ಗಂಟು ಬಿದ್ದುದು ಎಂತಹ ವಿಚಿತ್ರ! ಭಾನುಮತಿಯ ಕೋಮಲ ಹೃದಯ ಈ ಕರ್ಕಶತೆಯ ಕತ್ತರಿಯಲ್ಲಿ ಸಿಲುಕಿ ಚೂರು ಚೂರಾಗಿ ಕಣಕಣವಾಗಿ ಹೋಗುತ್ತಿದೆ. ಪರಿಷ್ಕಾರರಹಿತ, ಪರಮ ದಾರುಣ!

ಅವನೊಂದಿಗೆ ಏನೋ ವಾದಿಸಬೇಕೆಂದು, ಏನೋ ಒಪ್ಪಿಸಬೇಕೆಂದೂ ಆವೇಶ ಉಕ್ಕಿ ಬರುತ್ತಿತ್ತಾಗಲೀ, ಆ ಮೂರ್ಖನನ್ನು ಬದಲಿಸವಂತಹ ಶಕ್ತಿ ನನ್ನಲ್ಲಿಲ್ಲ. ಅವನಿಗೆ ಬುದ್ಧಿ ಹೇಳುವುದು ವೃಥಾ ಕಂಠ ಶೋಷಣೆ. "ಮೂರ್ಖನಿಗೆ ಬುದ್ಧಿಯನ್ನು ನೂರ್ಕಾಲ ಪೇಳಿದರೆ ಗೋರ್ಕಲ್ಲ ಮೇಲೆ ಮಳೆ ಸುರಿದಂತೆ ಸರ್ವಜ್ಞ" ಎನ್ನುವುದು ನೂರಕ್ಕೆ ನೂರು ಪಾಲೂ ಸತ್ಯ. ಮೂರ್ಖನೊಬ್ಬನೇ ಮೂರ್ಖನಲ್ಲ, ಅವನೊಂದಿಗೆ ವಾದಿಸುವವರು, ವಾದಿಸಲು ಪ್ರಯತ್ನಿಸುವವರು ಎಲ್ಲರೂ ಮೂರ್ಖರ ಗುಂಪಿಗೇ ಸೇರುತ್ತಾರೆ! ಮಾತನಾಡುತ್ತಿದ್ದಂತೆ ಧಡಧಡನೆ ಹೊರಟು ಹೋದ. ಮುಂಬಾಗಿಲನ್ನು ಹಾಕಿ ಒಳ ಬಂದೆ, ಅಡಿಗೆಯ ಮನೆಯಲ್ಲಿ ಮಂಡಿಯ ಮೇಲೆ ತಲೆಯೂರಿ ಕುಳಿತಿದ್ದಳು ಭಾನು. ಮೆಲ್ಲಗೆ ಹತ್ತಿರ ಕುಳಿತು ತಲೆ ಸವರಿದೆ. ತಲೆ ಎತ್ತಿ ನೋಡಿದಳು. ಥಟ್ಟನೆ ಮುಖಕ್ಕೆ ಕೈ ಅಡ್ಡವಿರಿಸಿಕೊಂಡಳು.

ಅವಳನ್ನು ನೋಡಿ ನನ್ನ ಕಣ್ಣು ತುಂಬಿ ಬಂತು. ಎಂದಿನಂತೆ ಅಳಬೇಡವೆಂದು ಸಮಾಧಾನಪಡಿಸದಾದೆ, ಶಾಂತಿವಹಿಸೆಂದು ನೀತಿಬೋಧೆ ಮಾಡದಾದೆ. ಅವಳ ಸಂಸಾರ

ಸರಿಹೋಗುತ್ತದೆಂದು ಭವಿಷ್ಯ ನುಡಿಯದಾದೆ. ಏನು ಮಾಡಲಾಗದೆ ಮೌನದಿಂದ ಕುಳಿತು ಬಿಟ್ಟೆ.

"ನೀನು ಇನ್ನೂ ಏಕೆ ಬಾಯಿ ಮುಚ್ಚಿಕೊಂಡಿರುತ್ತೀ! ಅವನಿಗೆ ಸರಿಯಾದ ಉತ್ತರ ಕೊಡಬಾರದಾಗಿತ್ತೇ?"

"....."

"ಒರಟು ಜನಗಳ ಹತ್ತಿರ ನಯ ವಿನಯ ಕೆಲಸಕ್ಕೆ ಬಾರದು" ಎಂದೆ.

ಕಣ್ಣೊರೆಸಿಕೊಂಡಳು ಭಾನುಮತಿ.

"ಅಗಸರವನ ಮುಂದೆ ಒದೆಸಿಕೊಳ್ಳಬೇಕಾಗಿತ್ತೇ?"

"ಹೌದು! ತನ್ನ ಪೌರುಷಕ್ಕೆ ಒಂದು ಹೆಣ್ಣು ಅಡ್ಡಿ ಬಂದರೆ ಆ ವ್ಯಕ್ತಿ ಎಂತಹ ನೀಚ ಕೃತ್ಯಕ್ಕಾದರೂ ಹಿಂದೆಗೆಯ."

"ನಾನು ಮಾತು ಮಾತಿಗೆ ಎದುರು ಹೇಳದಿದ್ದರೆ ಇಂದು ಈ ಸ್ಥಿತಿಯಲ್ಲಿರಬೇಕಾಗಿರಲಿಲ್ಲ" ಎಂದಳು.

"ಆದರೆ ಭಾನು! ಪ್ರತಿ ಸಣ್ಣ ವಿಷಯಕ್ಕೂ ಭಾವ ಏಕೆ ಮೂರ್ಖನಾಗಿ ವರ್ತಿಸುತ್ತಾನೆ?" ಎಂದು ಕೇಳಿದೆ.

ಭಾನು ಕೂಡಲೆ ಉತ್ತರ ಕೊಡಲಿಲ್ಲ.

"ಇದು ಸಣ್ಣ ವಿಷಯವೇ ಇರಬಹುದು. ಅದರ ಪೂರ್ವ ರಂಗ ಬೆಳಿಗ್ಗೆ ನಡೆದಿತ್ತು. ನಿನ್ನೆಯ ದಿನ ಸಾಯಂಕಾಲ ಅವರ ಪೆನ್ನು ಪಾರ್ಟಿಯಲ್ಲಿ ಕಳೆದು ಹೋಯಿತಂತೆ. ಅದೇನೋ ನನಗೆ ನಂಬಿಕೆಯಿಲ್ಲ. ಯಾವನೋ ಸ್ನೇಹಿತ ಮೆಲ್ಲಗೆ ಎಗರಿಸಿರುತ್ತಾನೆ. ಐವತ್ತು ರೂಪಾಯಿಯ ಪೆನ್ನು!"

"ಅದು ಹೋಯ್ತೆ? ನಿಜವಾಗಿಯೂ!"

"ನೀನು ಮದುವೆಯಲ್ಲಿ ಬಹುಮಾನವಾಗಿ ಕೊಟ್ಟಿದ್ದೇ ಹೋಯ್ತು. ಬೆಳಿಗ್ಗೆ ಆಫೀಸಿಗೆ ಹೋಗುವ ಮುನ್ನ ನಿನ್ನ ಪೆನ್ನು ಕೇಳಿದರು. ರಿಪೇರಿ ಮಾಡಿಸಲು ನಿನಗೆ ಕೊಟ್ಟಿದ್ದೇನೆಂದು ಹೇಳಿದೆ. ಅದರಿಂದ ಜಗಳ ಬಂತು. ನಿನ್ನನ್ನೂ ನನ್ನನ್ನೂ ಇಷ್ಟಬಂದಂತೆ, ಬಾಯಿಗೆ ಬಂದಂತೆ ಬೈದರು."

"ನನಗೊಬ್ಬ ಬಾಡಿಗೆ ಅಣ್ಣ ಸಿಕ್ಕಿದ್ದಾನಂತೆ, ಅವನ ಆಸರೆ ಇದೆ ಎಂದು ಮೆರೆಯುತ್ತಾ ಗಂಡನನ್ನೇ ಲಕ್ಷಿಸದೆ ಮೆರೆಯುತ್ತಿದ್ದೇನಂತೆ."

" ಆ ಪೆನ್ನಿನ ವಿಷಯ ನನಗೇಕೆ ಹೇಳಲಿಲ್ಲ? ನಾನು ರಿಪೇರಿ ಮಾಡಿಸಿಕೊಡುತ್ತಿರಲಿಲ್ಲವೆ? ನನಗಿಂತಲೂ ಅವನೇ ಹೆಚ್ಚೇ ನಿನಗೆ? ನೀವಿಬ್ಬರೂ ನನ್ನನ್ನು ಪೆದ್ದನನ್ನಾಗಿ ಮಾಡಬೇಕೆಂದು ಯೋಚಿಸುತ್ತಿದ್ದೀರಾ? ನನ್ನ ಅಗತ್ಯವಿಲ್ಲದೆ ಎಲ್ಲಾ ಕೆಲಸಗಳನ್ನು ಅವನ ಕೈಲೇ ಮಾಡಿಸಿಕೊಳ್ಳುತ್ತೀಯಾ? ಅವನೇ ನಿನ್ನನ್ನು ಪೋಷಿಸುತ್ತಿದ್ದಾನೇನೆ...."

"ಇದೇ ಧೋರಣೆ, ನಾನು ಪೆನ್ನಿನ ವಿಷಯ ತಮಗೆ ಹೇಳಲಿಲ್ಲವೆಂದು ಆಕ್ಷೇಪಣೆ ತಪ್ಪು

ಎಂದು ನಿರ್ಣಯಿಸಿದರೆ ತಪ್ಪೇ!''ಆದರೆ ನಾನೇಕೆ ಅವರಿಗೆ ತಿಳಿಸಲಿಲ್ಲವೋ ಆ ಕಾರಣವನ್ನು ತಿಳಿಸಿದೆ.

''ನಾನೇನು ಹೇಳಿದರೂ ನೀವು ಕಿವಿಗೇ ಹಾಕಿಕೊಳ್ಳುವುದಿಲ್ಲ. ಲೈಬ್ರರಿಯಿಂದ ಪುಸ್ತಕ ತಂದು ಕೊಡಿ ಎಂದೆ, ನೀವು ಗಮನಿಸಲೇ ಇಲ್ಲ. ಬಣ್ಣ ಬಣ್ಣದ ದಾರಗಳು ಬೇಕು ಎಂದೆ, ತಂದುಕೊಡಲಿಲ್ಲ. ಕಾಗದ ಬರೆಯಬೇಕು. ಒಂದು ಕಾರ್ಡು ತಂದು ಕೊಡಿ ಎಂದೆ, ಕೇಳಿಸಿಕೊಳ್ಳಲೇ ಇಲ್ಲ. ನಾನೇನು ಕೇಳಿದರೂ ಎಲ್ಲಕ್ಕೂ ಸೊನ್ನೆಯೇ. ಇನ್ನು ಯಾವ ನಂಬಿಕೆಯಿಂದ ಪೆನ್ನಿನ ವಿಷಯ ನಿಮಗೆ ಹೇಳಲಿ? ನೀವು ಯಾವುದೂ ನನಗಾಗಿ ಮಾಡುವುದಿಲ್ಲವೆಂದು ತಿಳಿದಾಗ ನಮ್ಮಣ್ಣನಿಗೆ ಹೇಳಿದೆ!''

''ಮುಚ್ಚೆ ಬಾಯಿ ಬಜಾರಿ! ಒಂದೆರಡಕ್ಷರ ಕಲಿತೆ ಎಂದು ಬುದ್ಧಿವಂತಿಕೆ ಖರ್ಚು ಮಾಡುತ್ತೀಯಾ? ನನಗೆ ಆದರೆ ತರುತ್ತೇನೆ. ಇಲ್ಲವಾದರೆ ಇಲ್ಲ. ನೀನು ರೋಷ ತೋರ್ಪಡಿಸುತ್ತೀಯಾ? ನಿನಗೆ ಸಲಾಂ ಹಾಕುತ್ತಾ ನೀನು ಹೇಳಿದ್ದೆಲ್ಲಾ ಮಾಡಲು ನೀನೇನು ಮಹಾರಾಣಿಯೇ?''

''ನೋಡಿದೆಯಾ ಕೇಸು? ನಾನು ಮಹಾರಾಣಿ ಹೇಗಾಗುತ್ತೇನೆ? ಮಹಾರಾಣಿಯಾಗಿದ್ದರೆ ಹೀಗೆ ಇವರ ಮುಂದೆ ಕುರಿಯಂತೆ ತಲೆ ತಗ್ಗಿಸಿ ನಿಲ್ಲಬೇಕಾಗುತ್ತೇ? ಅಂದರೆ ಇವರಿಗೆ ಮಹಾರಾಣಿ ಹೆಂಡತಿಗಿಂತಲೂ ಮಿಗಿಲಾದವಳೇ?''

''ನೀನು ಮಹಾರಾಜನಾದರೆ, ನಾನು ಮಹಾರಾಣಿಯಾಗುತ್ತಿದ್ದೆ! ಎನ್ನಬೇಕಾಗಿತ್ತು.'' ಎಂದೆ ಕೋಪದಿಂದ.

''ನಾನು ಹಾಗೆ ಮಾತಿಗೆ ಮಾತು ಬೆಳೆಸುವುದಿಲ್ಲ. ನನಗೆ ಅಸಹ್ಯವಾದ ವಿಷಯವೆನಿಸಿದರೆ ಉತ್ತರವನ್ನೇ ಹೇಳುವುದಿಲ್ಲ. ಏನುತ್ತರ ಹೇಳಲೂ ಮನಸ್ಸಾಗದೆ ತಲೆ ತಗ್ಗಿಸಿ ಕುಳಿತುಕೊಂಡೆ. ಅವರ ಮಾತು ಇನ್ನೂ ಕೇಳು.

''ನೀನು ಹೆಣ್ಣು ಎಂಬುದನ್ನು ನೆನಪಿರಿಸಿಕೋ! ಗಂಡಸಾದವನು ನಾನು ನಿನಗೆ ಗಂಡನೇ ವಿನಹ ಗುಲಾಮನಲ್ಲ. ತಿಳಿಯಿತೇ ಭಾನುಮತೀದೇವಿ!''

''ಭಗವಂತಾ! ಅಡಿಗಡಿಗೂ ಅವಹೇಳನೆ, ಅಪಹಾಸ್ಯ, ದೌರ್ಜನ್ಯ, ನರಕ... ನಾನು ಅನುಭವಿಸಲಾರೆ, ಎಂದು ಅತ್ತೆ. ಆಡುತ್ತಾ ಬಂದ ಮಗು ನನ್ನ ಕುತ್ತಿಗೆಯನ್ನು ಕಟ್ಟಿಕೊಂಡು ಕುಳಿತುಕೊಂಡು, ತನ್ನ ಪುಟ್ಟ ಕೈಗಳಿಂದ ನನ್ನ ಕಣ್ಣೊರೆಸಿತು...''

''ಚೆನ್ನಾಗಿದೆ ಭಾನು! ಇನ್ನು ನಾನು ಬಂದು ಹೋಗುವುದನ್ನು ನಿಲ್ಲಿಸಿದರೇ ಒಳ್ಳೆಯದೇನೋ!''

''ಅಣ್ಣ! ನೀನೂ ಬರದಿದ್ದರೆ ನಾನೂ, ಮಗೂ...''

''ನಿನಗೆ ಸಹಾನುಭೂತಿಯನ್ನು ತೋರಿಸುವ ಸ್ಥಿತಿಯೂ ನನಗಿಲ್ಲವಮ್ಮ! ನನಗೇನೋ ತುಂಬಾ ದಿಗಿಲಾಗುತ್ತಿದೆಯಮ್ಮ.''

ಬಹಳ ಹೊತ್ತು ಮೌನದಿಂದ ಕುಳಿತೆವು.

"ಹುಂ! ಎದ್ದು ಹೋಗಿ ಮುಖ ತೊಳೆದುಕೊಂಡು ಬಾ!" ಎಂದೆ.

ಭಾನು ಎದ್ದು ಹೋಗಿ ಮುಖ ತೊಳೆದುಕೊಂಡು ಬಂದಳು. ಚೀಲವನ್ನು ಮಣೆಯ ಮೇಲಿರಿಸಿ ಎಲ್ಲವನ್ನೂ ಕೆಳಗೆ ಸುರಿದೆ. ಮಗು ಮೊದಲು ಬಿಸ್ಕತ್ತಿನ ಪೊಟ್ಟಣವನ್ನು ಕೈಗೆ ತೆಗೆದುಕೊಂಡು ಬೀದಿಗೋಡಿದ.

"ಏಯ್! ಏಯ್!" ಎಂದು ಕೂಗಿದೆ.

"ಬತ್ತೀನಿ ತಾಲೋ ಮಾವ!"ಎಂದವನೇ ಮಾಯವಾದ.

"ಮುಂಡೇದಕ್ಕೆ ಮಾತು ಬಂದು ಬಿಡ್ತೂ", ಎಂದಳು ಭಾನು, ಎಲೆಗೆ ಅನ್ನ ಹಾಕಿಕೊಳ್ಳುತ್ತಾ ನಾನು ಹತ್ತಿರವೇ ಕುಳಿತುಕೊಂಡೆ.

"ಭಾನೂ...!" ಕೂಗಿದೆ.

ತಲೆ ಎತ್ತಿ ನೋಡಿದಳು.

"ಏನು ತಿಳಿದುಕೊಳ್ಳಬೇಡ. ಭಾವ ಬೈಯುತ್ತಿದ್ದುದನ್ನು ಕೇಳಿ ಎಷ್ಟೊಂದು ಕೋಪ ಬಂತು ಗೊತ್ತೇ? ನಾನೆಂದೂ ದುಡುಕಲಿಲ್ಲ. ಅದೇಕೋ ಅವನನ್ನು ಹಿಡಿದುಕೊಂಡು ಹಣ್ಣುಗಾಯಿ ನೀರುಗಾಯಿ ಎನ್ನುವಂತೆ ಬಡಿಯಬೇಕೆನ್ನಿಸಿತು, ಅದೇಕೋ ತಡೆದೆ."

ಭಾನು ಆಶ್ಚರ್ಯದಿಂದ ನೋಡಿದಳು.

"ಎಷ್ಟು ದುಡುಕಿದ್ದೆ ಕೇಶು? ನೀನೇನಾದರೂ ಅವರ ಮೇಲೆ ಕೈ ಹಾಕಿದ್ದಿದ್ದರೆ, ಮುಗಿದೇ ಹೋಗುತ್ತಿತ್ತು. ಎಷ್ಟು ಅಪಹಾಸ್ಯವಾಗುತ್ತಿತ್ತು? ಬಾಳು ಪೂರ್ತಿ ನೆನಪುಳಿಯುವಂತಹ ಕೆಲಸಗಳನ್ನು ಇನ್ನೆಂದೂ ಯೋಚಿಸಬೇಡ! ಅದು ನನಗೂ ನಾಚಿಕೆಗೇಡಲ್ಲವೆ? ಹೋಗಲಿ... ಅವರವರ ಪಾಪ ಅವರವರದು! ಗಂಡನಾಗಲೀ, ಹೆಂಡತಿಯಾಗಲೀ, ತಾಯಿಯಾಗಲೀ, ಮಗನಾಗಲೀ, ಅವರವರು ಮಾಡಿದ್ದನ್ನು ಅವರವರೇ ಅನುಭವಿಸುತ್ತಾರೆ. ಆ ಶಿಕ್ಷೆ ಅದೇನೋ ಅದನ್ನು ಭಗವಂತನೇ ನಿರ್ಣಯಿಸಿ ವಿಧಿಸಬೇಕೇ ವಿನಹ ನಾವಲ್ಲ. ಭಾವನ ಮೇಲೆ ನಿನಗಸಹ್ಯವಾಗಿದೆಯಲ್ಲವೆ?"

"ಇಲ್ಲ ಭಾನು! ಕೋಪ ಬಂದುದೇನೋ ನಿಜ – ಆದರೆ ... ಏನು ತಿಳಿದುಕೊಳ್ಳಬೇಡ!" ಎಂದೆ ಲಜ್ಜೆಯಿಂದ.

"ಭಾನು ಊಟ ಮಾಡುತ್ತಿದ್ದುದನ್ನು ನೋಡಿದರೆ ನನಗೇನೋ ತುಂಬಾ ವ್ಯಥೆಯಾಯ್ತು. ಹೆಂಡತಿಗೆ ಅನ್ನ ಹಾಕುತ್ತಿದ್ದೇನೆಂದು ಗರ್ವಿಸುವ ಗಂಡ! ಅನುಕ್ಷಣವೂ ಹೊಸ ಹೊಸದಾಗಿ ಬದುಕುವಂತಹ ಭಾನು. ಅಪ್ರಯತ್ನವಾಗಿ ನನ್ನತ್ತಲೇ ನೋಡಿದಳು ಭಾನು. ಅದೇಕೋ ನನ್ನ ದೃಷ್ಟಿ ಅವಳ ಮೇಲೆ ಕೇಂದ್ರೀಕೃತವಾಗಿತ್ತು.

"ನನ್ನನ್ನು ಒಬ್ಬರು ಪೋಷಿಸುತ್ತಿದ್ದಾರೆನ್ನುವ ಈ ಕೃತಜ್ಞತಾ ಭಾವ ಎಷ್ಟು ದಿನ ನನ್ನ ಸಂಸಾರವನ್ನು ನಡೆಸುತ್ತದೆನ್ನುತ್ತೀ."

ಎಂದು ಕೇಳಿದಳು ಭಾನುಮತಿ.

ನಾನು ಏನೂ ಉತ್ತರಕೊಡಲಿಲ್ಲ.

"ಬೆಳಗಿನಿಂದಲೂ ಊಟ ಮಾಡಲು ಮನಸ್ಸಾಗದೆ ಸುಮ್ಮನಿದ್ದೆ. ಈಗಲೂ ಸೇರದು." ಎಂದು ನೀರಿನ ಲೋಟ ಕೈಗೆ ತೆಗೆದುಕೊಂಡಳು.

"ಭಾನು... ಏನಿದು?"

ನನ್ನ ಮಾತು ಮುಗಿಯುವಷ್ಟರಲ್ಲಿ ಅವಳಾಗಲೇ ಎದ್ದಿದ್ದಳು.

"ಕ್ಷಮಿಸಣ್ಣ! ನಾಳೆ ಎದ್ದು ಕೆಲಸ ಮಾಡಲು, ಈಗ ತಿಂದಿದ್ದು ಸಾಕು."

ಕೆಲ ಹೊತ್ತು ಮೌನವಾಗಿಯೇ ಉರುಳಿತು.

"ಅಣ್ಣ! ಲಕ್ಷ್ಮತ್ತೆ ವಿಷಯ ನಿನಗೆ ಗೊತ್ತೇ?"

ಕೇಳಿದಳು ಭಾನು.

"ನನಗೆ ಅಷ್ಟು ಗೊತ್ತಿಲ್ಲಮ್ಮಾ, ಏನೋ ಬೇಡಿಕೊಂಡು ಸತ್ತು ಹೋದಳು ಎನ್ನುತ್ತಾರಲ್ಲ ಅವಳೇ ಅಲ್ಲವೇ?"

"ಹೌದು, ಭಗವಂತನನ್ನು ಬೇಡಿಕೊಂಡು ರೋಗ ತಂದುಕೊಂಡು ಸತ್ತು ಹೋದ ಅತ್ತೆ, ಅದೃಷ್ಟವಂತೆ! ರಾತ್ರಿಯ ಹೊತ್ತು ಅಜ್ಜಿ ಅವಳ ವಿಷಯ ಹೇಳುತ್ತಿದ್ದರೆ, ದಿನ ದಿನವೂ ಹೊಸತಾಗಿರುತ್ತಿತ್ತು. ಕೇಳುತ್ತಿರುವಂತೆ ಏನೋ ಆವೇಶ ಉಂಟಾಗುತ್ತಿತ್ತು."

"ಅತ್ತೆಯ ವಿಷಯ ನಿನಗೆ ಚೆನ್ನಾಗಿ ಗೊತ್ತಿರಬೇಕು. ಅತ್ತೆಯ ಮನೆಯಲ್ಲಿ ತುಂಬಾ ತೊಂದರೆಯನುಭವಿಸಿದಳಂತೆ, ಹೌದೆ?"

"ಅತ್ತೆ ಅನುಭವಿಸಿದ್ದು ಯಾತನೆಯಲ್ಲ, ನರಕ! ಅಜ್ಜಿ ಹೇಳುತ್ತಾ ಹೇಳುತ್ತಾ ಅಳಲನ್ನು ತಡೆಯಲಾರದೆ ಅತ್ತುಬಿಡುತ್ತಿದ್ದಳು. ಆಗ ನಾನು ಬಹಳ ದೊಡ್ಡವಳಾದಂತೆ ಅಜ್ಜಿಯ ಕಣ್ಣೊರೆಸಿ ಸಮಾಧಾನಪಡಿಸುತ್ತಿದ್ದೆ. ನನ್ನನ್ನು ಕಂಡರೆ ಅಜ್ಜಿಗೆ ಪಂಚಪ್ರಾಣ. ನನಗೆ ಅತ್ತೆಯ ಹೋಲಿಕೆಯೇ ಇದೆಯಂತೆ. ನನ್ನನ್ನು ನೋಡುತ್ತಿದ್ದರೆ ಅತ್ತೆಯ ನೆನಪೇ ಬರುತ್ತದೆ ಎನ್ನುತ್ತಿದ್ದಳು ಅಜ್ಜಿ."

* * *

ಒಬ್ಬಳೇ ಮಗಳೆಂದು ಮುದ್ದಾಗಿ ಸಾಕಿ ಹತ್ತಿರದ ಊರಿನಲ್ಲಿಯೇ ಆಸ್ತಿವಂತನೊಬ್ಬನನ್ನು ನೋಡಿ ಮದುವೆ ಮಾಡಿದ್ದರು. ಅತ್ತೆಯ ರೂಪಾತಿಶಯಗಳನ್ನು ಅಜ್ಜಿ ಹೊಗಳುತ್ತಿದ್ದರೆ ಅತಿಶಯೋಕ್ತಿ ಏನೋ ಅನ್ನಿಸುತ್ತಿತ್ತು. ಯಾವುದು ಸುಳ್ಳಾದರೂ ಅತ್ತೆಯ ರೂಪ ಮಾತ್ರ ಅತಿಶಯದ ರೂಪ. ಉಂಗುಷ್ಟದಿಂದ ಶಿರಸ್ಸಿನವರೆಗೂ ಹೊಳೆಯುವ ಬಂಗಾರದ ಬಣ್ಣ. ತಿದ್ದಿದಂತಿದ್ದ ಅಂಗಸೌಷ್ಟವ. ಎರಕ ಹುಯ್ದ ವಿಗ್ರಹದಂತಿದ್ದಳಂತೆ. ಕಾರ್ಮುಗಿಲಿನಂತಹ, ದಟ್ಟವಾಗಿದ್ದ ತಲೆಗೂದಲನ್ನು ಜಡೆ ಹಾಕಿಕೊಳ್ಳಲಾರದೆ ಗಂಟು ಹಾಕಿಕೊಂಡಿದ್ದರೆ, ಆ ಗಂಟು ಹಿಂಭಾಗದಲ್ಲಿ ದುಂಡಾಗಿ ಆವರಿಸಿ ಚಂದ್ರಬಿಂಬವನ್ನು ಮುಚ್ಚಿದ ಮೇಘವನ್ನು ನೆನಪಿಗೆ ತರುತ್ತಿತ್ತು. ಅತಿ ವಿಶಾಲವಾದ ಆ ಕಣ್ಣುಗಳನ್ನು ಅಗಲವಾಗಿ ತೆರೆದು ನೋಡಿದರೆ ಪೂರ್ತಿಯಾಗರಳಿದ ಪದ್ಮವೇನೋ ಎನ್ನುವ ಭ್ರಾಂತಿಯಾಗುವಂತಿತ್ತು. ಸಹಜವಾದ ಚೆಂದುಟಿಗಳನ್ನು ನೋಡಿದರೆ, ತಾಂಬೂಲ ರಾಗರಂಜಿತವೇನೋ ಎನ್ನುವಂತೆ

ಗೋಚರಿಸುತ್ತಿತ್ತು. ಕಾಲಿನುಗುರುಗಳು ತಾವರೆಯ ರೇಖೆಯಂತೆ ಮೃದುವಾಗಿ ಶುಭ್ರವಾಗಿ ಕಾಣುತ್ತಿತ್ತಂತೆ. ಅತ್ತೆ ನೀರು ಕುಡಿಯುತ್ತಿದ್ದರೆ ಕಂಠ ಭಾಗದಲ್ಲಿ ಕಾಣಿಸುತ್ತಿತ್ತಂತೆ. ಎದುರಾಗಿ ಯಾರಾದರೂ ನಿಂತರೆ ಅವರ ಆಕಾರ ಅತ್ತೆಯ ಕೆನ್ನೆಗಳಲ್ಲಿ ಪ್ರತಿಬಿಂಬಿಸುತ್ತಿತ್ತಂತೆ. ಆ ಸೌಂದರ್ಯವನ್ನು ನೋಡಿ ಚಂದ್ರನೂ ಕಳೆಗುಂದುತ್ತಿದ್ದನಂತೆ. ಅತ್ತೆ ಅಪರೂಪದ ಅಂದದ ಖನಿ! ಬಂಗಾರದ ಛಾಯೆಯ ಮೈಗೆ ಊದು ಬಣ್ಣದ ಸೀರೆಯುಟ್ಟು ಕಚ್ಚೆ ಹಾಕಿಕೊಂಡು, ಮುಡಿಯಲ್ಲಿ ಮಲ್ಲಿಗೆಯ ದಂಡೆಯನ್ನು ಧರಿಸಿಕೊಂಡು, ಮಂಗಳ ದ್ರವ್ಯಗಳ ತಟ್ಟೆಯನ್ನು ಕೈಲಿ ಹಿಡಿದುಕೊಂಡು, ಪ್ರತಿದಿನ ಉದಯಕಾಲದಲ್ಲಿ ದೇವಸ್ಥಾನಕ್ಕೆ ಹೋಗಿ ಬರುತ್ತಿದ್ದಳಂತೆ. ಸಂಧ್ಯಾಸಮಯದಲ್ಲಿ ಕೊರಳೆತ್ತಿ ಮಧುರ ಸ್ವರದಿಂದ ಪುರಾಣ ಗ್ರಂಥಗಳನ್ನು ಪಠಿಸುತ್ತಿದ್ದರೆ ಕೇಳುವವರಿಗೆ ಮೈಮರೆವಾಗುತ್ತಿತ್ತಂತೆ.

ಅತ್ತೆ ದೇವತಾ ಸ್ತ್ರೀ!

ಆದರೆ ಶಾಪಗ್ರಸ್ತೆ!

ಅಪರೂಪ ಸೌಂದರ್ಯವತಿ!

ಆದರೆ ಅತಿ ದೌರ್ಭಾಗ್ಯೆ!

ಅತ್ತೆಯನ್ನು ಅವಳ ಗಂಡ ಕಣ್ಣೆತ್ತಿ ನೋಡತ್ತಿರಲಿಲ್ಲ. ಅತ್ತೆಯ ಸುಖ ಮದುವೆಯೊಂದಿಗೇ ಮುಗಿದು ಹೋಗಿತ್ತು. ಮದುಮಗಳಾಗಿ ನರಕದಲ್ಲಡಿಯಿರಿಸಿದ್ದಳು.

ಮಾನವ ಲಕ್ಷಣಗಳೇ ಬೇರೆ. ಕೋರಿಕೆಗಳೇ ಬೇರೆ, ಅಭ್ಯಾಸಗಳೇ ಬೇರೆ. ಆ ವಿಷಯ ತಾತನಿಗೆ ಗೊತ್ತಿರಲಿಲ್ಲವೇ? ಅಂದರೆ ಗೊತ್ತು. ಪೂರ್ತಿಯಾಗಿ ಗೊತ್ತು – ಆದರೆ ಆ ಕಾಲ ಬೇರೆ. ಆ ವ್ಯಕ್ತಿಗಳೇ ಬೇರೆ, ಗಂಡಸಿಗೆ ನಿಷೇಧವೆನ್ನುವುದು ಇಲ್ಲ. ಗಂಡಸಿಗೆ ಅಪವಿತ್ರತೆ ಅಂಟುವುದಿಲ್ಲ. ಆದುದರಿಂದಲೇ ಅತ್ತೆ ನೀತಿಬಾಹಿರನೊಬ್ಬನಿಗೆ ಹೆಂಡತಿಯಾದಳು.

ಆದರೆ ಮಾವನ ಅಭ್ಯಾಸಗಳಲ್ಲಿ ಏಕಾಗ್ರತೆಯಿತ್ತು. ಅತ್ತೆಯ ಅಪರೂಪ ಸೌಂದರ್ಯ ಅವನ ಏಕಾಗ್ರತೆಯನ್ನು ಭಂಗಗೊಳಿಸಲು ಅಸಮರ್ಥವಾಗಿತ್ತು.

ಮಾವ ರಾತ್ರಿಯಾಗುತ್ತಿರುವಂತೆ ಶುಭ್ರವಾದ ಇಸ್ತ್ರಿ ಪಂಚೆಯುಟ್ಟು, ಅಲ್ಪಕಾ ಕೋಟು ಧರಿಸಿ, ಅದರ ಮೇಲೆ ಜರಿಯ ಅಂಗವಸ್ತ್ರ ಹಾಕಿಕೊಂಡು ವಾಸನೆಯ ಎಣ್ಣೆ ಹಾಕಿ ಮೀಸೆಯನ್ನು ಬಾಚಿ ಹುರಿ ಮಾಡಿಕೊಂಡು, ಸುಗಂಧಭರಿತ ತಾಂಬೂಲ ಜಗಿಯುತ್ತಾ, ಬೆರಳು, ಬೆರಳುಗಳಿಗೂ ವಜ್ರದುಂಗುರ ನಕ್ಷತ್ರಗಳಂತೆ ಹೊಳೆಯುತ್ತಿದ್ದರೆ ಸಂತೋಷಿಸುತ್ತಾ, ಬೆಳ್ಳಿಯ ಕಟ್ಟು ಧರಿಸಿದ ಬೆತ್ತವನ್ನು ತೂಗಾಡಿಸುತ್ತಾ, ಕರ್ ಕರ್ ಎಂದು ಶಬ್ದ ಮಾಡುವ ಕೆರಗಳನ್ನು ಮೆಟ್ಟಿ ರಾಜಠೀವಿಯಿಂದ ಹೊರಡುತ್ತಿದ್ದನಂತೆ.

ಎಲ್ಲಿಗೆ?

ವೇಶ್ಯಾವಾಟಿಕೆಗೆ?

"ಮಿತಿ ಮೀರಿದ, ಮೋಜಿನಿಂದ ತನ್ನ ಸರ್ವಸ್ವವನ್ನೂ ಅರ್ಪಿಸಿಕೊಳ್ಳಬೇಕೆಂದು ಸಾನಿಯನ್ನರಸಿ ಹೋಗುತ್ತಿದ್ದ, – ಸುಮಾರು ರಾತ್ರಿ ಕಳೆದು ಬೆಳಗಿನ ಝಾವದಲ್ಲಿ

ಅಲಂಕಾರವೆಲ್ಲಾ ನಲುಗಿ ಹೋದನಂತರ, ವೇಶ್ಯೆಯರು ಮುಂಗೈಗೆ ಬಿಗಿದಿದ್ದ ಹೂವಿನ ಸರದ ಹೂಗಳು ಬಾಡಿ ಉದುರುತ್ತಿದ್ದರೆ, ವಿವಿಧ ಬಗೆಯ ಸುವಾಸನೆ ಮೂಗಿನ ಸೆಲೆಯೊಡೆಯುವಂತೆ 'ಗುಟ್' ಎಂದು ಬರುತ್ತಿರುವಂತೆ ಮನೆ ಸೇರಿ ಅಂಗಳದಲ್ಲಿ ಹಾಸಿಗೆ ಹಾಸಿಕೊಂಡು ನಿದ್ರಿಸುತ್ತಿದ್ದನಂತೆ.''

''ಆ ದುರದೃಷ್ಟಕ್ಕೆ ಅತ್ತೆ ಚಿಂತಿಸುತ್ತಿದ್ದಳೋ ಇಲ್ಲವೋ, ಅಥವಾ ಮನಸ್ಸಿಗೇನಾದರೂ ತಿಳಿದುಕೊಂಡಳೋ ಇಲ್ಲವೋ ಎಂದು ಅಜ್ಜಿಗೂ ತಿಳಿಯಲಿಲ್ಲ. ಎಂತಹ ಘಳಿಗೆಯಲ್ಲೂ ಅತ್ತೆಯ ಮುಖದ ಮೇಲೆ ಚೆದುರದ ಕಿರುನಗೆ ಎಂತಹ ವ್ಯಸನವನ್ನೂ ಮುಚ್ಚಿ ಬಿಡುತ್ತಿತ್ತು. ಅತ್ತೆ ಎಂದಾದರೂ ಸಾಹಸಮಾಡಿ ಗಂಡನ ಏಕಾಂತ ಮಂದಿರದಲ್ಲಡಿಯಿರಿಸಿದರೆ, ಹಿಂದಿರುಗಿ ಬರುವಾಗ ಅವಳ ಮೃದುವಾದ ಕೆನ್ನೆಗಳ ಮೇಲೆ ಮುದ್ರೆಯೊತ್ತಿದಂತಿರುತ್ತಿದ್ದ ಕಂದುಬಣ್ಣದ ಗುರುತು ನಡೆದ ಘಟನೆ ಇಂತಹುದೆಂದು ಹೇಳುತ್ತಿದ್ದಿತು. ಶರೀರದಲ್ಲಿ ಪ್ರವಹಿಸುವ ರಕ್ತವೆಲ್ಲಾ ರೋಷಗೊಂಡು ಕಪೋಲಗಳ ಮೇಲೆ ಇರುತ್ತಿತ್ತು. ಅದೂ ಅತ್ತೆಯ ದಾಂಪತ್ಯ ಸುಖ!''

''ಇನ್ನು ಸಂಸಾರದ ವಿಷಯ ತೆಗೆದುಕೊಂಡರೆ- ''

''ಸಾಧಾರಣವಾಗಿ ಅಂದಿನ ದಿನಗಳಲ್ಲಿ ಅತ್ತೆಯ ಎದುರಿಗೆ ಸೊಸೆ! ಹುಲಿ ಎದುರಿನ ಮೇಕೆಯ ಮರಿಯಂತೆ! ಕರ್ಕಶತೆಗೆ, ದೌರ್ಜನ್ಯಕ್ಕೆ ಸಾಕಾರ ಅತ್ತೆಯವರು! ಒಂದು ಹೊತ್ತು ಅತ್ತೆಗೆ ಹೊಟ್ಟೆ ತುಂಬಾ ಊಟ ಹಾಕುತ್ತಿರಲಿಲ್ಲ. ಹದಿನೈದು ದಿನಕ್ಕೊಂದು ಸಾರಿಯಾದರೂ ಅತ್ತೆಯ ನೆತ್ತಿ ಎಣ್ಣೆ ಕಾಣುತ್ತಿರಲಿಲ್ಲ. ಅತ್ತೆಗೆ ಅರಿವು ಬಂದಂದಿನಿಂದಲೂ ಪ್ರಾಣಪ್ರದವಾದ ದೇವತಾ ಪ್ರಾರ್ಥನೆ, ಗ್ರಂಥಪಟಣೆ ಮುಂದುವರಿಯಲವಕಾಶವಿರಲಿಲ್ಲ. ಸೂರ್ಯಹುಟ್ಟುವ ಮೊದಲಿನಿಂದ ಮುಳುಗಿದ್ದು ಬಹಳ ಹೊತ್ತಿನವರೆಗೂ ಚಾಕರಿ! ಅತ್ತೆ ಎಂಬುವಳು ಹುಡುಕೀ ಹುಡುಕೀ ಆಜ್ಞಾಪಿಸುವ ಅರ್ಥರಹಿತ ಹುಚ್ಚು ಚಾಕರಿ. ಮಗ ಮನೆ ತಲುಪುವ ಹೊತ್ತಿಗೆ ಸೊಸೆಯ ಮೇಲೆ ಏನೋ ಅಪವಾದ. ಫಲಿತಾಂಶ ದಂಡನೆ! ಅತ್ತೆ ಹೊರಗಾದ ದಿನವಂತೂ ಹಿಡಿ ಅನ್ನಕ್ಕೂ ಸೊನ್ನೆ. ಮೇಲಾಗಿ ಶಾಪಗಳು!

''ಥೀ!ಥೀ! ಎಲ್ಲರ ಮನೆಯ ಸೊಸೆಯರೂ ಮುದ್ದು ಮುದ್ದು ಮಕ್ಕಳನ್ನು ಹೆತ್ತು ಮನೆಬೆಳಕು ಮಾಡಿದರೆ ನೀನು ತಿಂದು ಕುಕ್ಕರಿಸುತ್ತಿಯಲ್ಲೇ? ಗೊಡ್ಡು ಮುಂಡೆಗೆ ಕೂಳೇಕೆ?''

– ಎಂದು ಮೂದಲಿಸಿ ದಿನವಿಡೀ ಉಪವಾಸವಿರಿಸುತ್ತಿದ್ದಳು. ಮನೆಯ ಮೂಲೆ ಮೂಲೆಗೂ ಮಂಚಗಳಿದ್ದರೂ, ಅತ್ತೆ ಮಾತ್ರ ಎಂದೂ ನೆಲದಮೇಲೆ ಮಲಗಬೇಕು – ಹಾಲು ಮೊಸರಿನ ಕೋಡಿ ಮನೆಯಲ್ಲಿ ಹರಿಯುತ್ತಿದ್ದರೂ ಅತ್ತೆಯ ಲಭ್ಯ ಗಂಜಿ ನೀರು!

ಅತ್ತೆಗೆ ಯಾರೊಬ್ಬರ ಆದರಣೆಯೂ ಇಲ್ಲ ಅಪ್ಯಾಯತೆಯೂ ಇಲ್ಲ. ಆದರೂ ತನ್ನ ಕಷ್ಟ ಸುಖಗಳನ್ನು, ಎಂದೂ ತಾಯಿಯೊಂದಿಗೆ ಹೇಳಿಕೊಳ್ಳುತ್ತಿರಲಿಲ್ಲ. ಯಾರಿಂದಲಾದರೂ ಮಗಳ ವಿಷಯ ತಿಳಿದಾಗ ಅತ್ತೆ ಸಹಿಸಲಾರದೆ ಗೋಳೋ ಎಂದು ಅಳುತ್ತಿದ್ದಳಂತೆ. ಅತ್ತೆಯನ್ನು ನೋಡಬೇಕೆಂದು ಅಜ್ಜಿ ಅವರ ಊರಿಗೆ ಹೋದರೆ, ಗಾಡಿಯಿಂದಿಳಿದು ಪೊಸಲು ಬಳಿ ಹೋಗುತ್ತಿರುವಂತೆ ಬೀಗಿತ್ತಿ ಎದುರಾಗಿ ಉರಿ ಉರಿ ಎಂದು ಮುಖ ಕೆಂಪಗೆ ಮಾಡಿಕೊಂಡು,

"ಏನಮ್ಮಾ, ನಿನ್ನ ಮಗಳನ್ನು ಕಷ್ಟಪಡಿಸುತ್ತಿದ್ದೇನೆಂದು ನೋಡಲು ಬಂದೆಯಾ?"

ಎಂದು ನಿಷ್ಠುರವಾಗಿಯೋ ಸ್ವಾಗತ ಬಯಸುತ್ತಿದ್ದಳಂತೆ. ಅಜ್ಜಿಗೆ ಕೋಪ ಬಂದರೂ ಸಹನೆಯಿಂದ ತಡೆದುಕೊಂಡು,

"ಅದೇನತ್ತಿಗೆ! ಅವಳಿಗೇನು ಕಷ್ಟವಿದೆಯಮ್ಮ? ಏನೋ ಹೆತ್ತ ಕರುಳು, ಮಗಳನ್ನು ನೋಡಬೇಕೆನ್ನಿಸಿತು... " ಎನ್ನುತ್ತಿದ್ದರೆ,

"ಸಾಕು ಸುಮ್ಮನಿರಮ್ಮ! ನೀನೊಬ್ಬಳೇ ಮಗಳನ್ನು ಹೆತ್ತಿದ್ದೀ! ಅವಳೇನು ಹಾಲು ಕುಡಿಯುವ ಹಸುಗೂಸೇ? ಘಳಿಗೆ ಘಳಿಗೆಗೂ ಓಡಿ ಬರುತ್ತೀಯಲ್ಲ?"

ಎಂದು ಗದರಿಸಿಕೊಳ್ಳುತ್ತಿದ್ದರಂತೆ.

ಅಜ್ಜಿ ಏನುತ್ತರವನ್ನೂ ಕೊಡುತ್ತಿರಲಿಲ್ಲ. ಹೇಳಿದರೆ ವರ್ಷಕ್ಕೊಮ್ಮೆಯಾದರೂ ಮಗಳ ಮುಖ ನೋಡುವ ಅವಕಾಶವೂ ಇರುತ್ತಿರಲಿಲ್ಲ. ಅಜ್ಜಿ ಇರುವಷ್ಟು ಹೊತ್ತೂ ಬೀಗಿತ್ತಿಯಾದ ವಳು ಸುತ್ತು ಮುತ್ತಲೇ ಸುತ್ತುತ್ತಿರುತ್ತಿದ್ದಳಂತೆ. ಇನ್ನು ಅಜ್ಜಿಗೆ ಏನು ಮಾತನಾಡಲೂ ಅವಕಾಶವಿರುತ್ತಿರಲಿಲ್ಲ. ಮಗಳನ್ನು ಕಣ್ಣಲ್ಲಿ ನೋಡಿಕೊಂಡು ಮತ್ತೆ ಹಿಂದಿರುಗಿ ಬಂದು ಬಿಡುತ್ತಿದ್ದಳಂತೆ. ಬೀಗಿತ್ತಿಯಾದವಳು ಊಟಕ್ಕೂ ಉಪಚರಿಸುತ್ತಿರಲಿಲ್ಲವಂತೆ.

ವರ್ಷಕ್ಕೊಂದು ದಿನ ಯಾವುದಾದರೂ ಹಬ್ಬದ ನೆಪದಿಂದ ಅತ್ತೆಯನ್ನು ಕರೆದುಕೊಂಡು ಬಂದ ದಿನ ಅಜ್ಜಿ ತಾತನಿಗೆ ಅದೇ ಒಂದು ಹಿರಿಯ ಹಬ್ಬ, ಮಹಾ ಪರ್ವ ದಿನ!

ಒಂದು ದಿನ ಸಾಯಂಕಾಲ ತಾತ ಹೊಲದ ಕಡೆ ಹೋಗಿದ್ದಾಗ ಮಗಳನ್ನು ನೋಡಬೇಕೆನಿಸಿತಂತೆ. ಕೂಡಲೇ ಉತ್ತರೀಯವನ್ನು ಒದರಿ ಭುಜದ ಮೇಲೆ ಹಾಕಿಕೊಂಡು ದೊಣ್ಣೆಯೂರಿಕೊಂಡು ಅಳಿಯನ ಊರಿನತ್ತ ಹೊರಟ.

ಮನೆಯ ಹತ್ತಿರ ಹೋಗುವ ಹೊತ್ತಿಗೆ ತುಂಬಾ ಕತ್ತಲಾಗಿತ್ತಂತೆ. ಅಳಿಯ ದೇವರು ಬೈಠಕ್‌ಖಾನೆಯಲ್ಲಿ ಮಿತ್ರ ವೃಂದದೊಂದಿಗೆ ಇಷ್ಟಾಗೋಷ್ಠಿ ನಡೆಸುತ್ತಿದ್ದರಂತೆ. ಬೀದಿಯ ಬಾಗಿಲಲ್ಲಿ ನಿಂತಿದ್ದ ಮಾವನವರನ್ನು ನೋಡಿಯೂ ಕೂಡ ಮಾತನಾಡಿಸಲಿಲ್ಲವಂತೆ. ತಾತನಿಗೆ ವಿಪರೀತ ಅವಮಾನವಾಯಿತಂತೆ. ಆದರೂ ಸಂಭಾಳಿಸಿಕೊಂಡು ಅಳಿಯದೇವರನ್ನು ಹೆಸರು ಹಿಡಿದು ಕರೆದನಂತೆ. ಆ ಮಹಾರಾಯ ಹೊರಗೆ ಬಾರದೆಯೇ ಅಲ್ಲಿಂದಲೇ, –

"ಯಾರು ನೀನು?" ಎಂದು ಕೇಳಿದನಂತೆ.

ತಾತನಿಗೆ ರೋಷ ಉಕ್ಕಿ ಬಂತಂತೆ.

"ನಾನು ಯಾರೆಂದು ತಿಳಿಯದಂತೆ ನಟಿಸುತ್ತೀಯಾ? ಹುಂ, ನಾನು ಅಗ್ರಹಾರದ ರಾಮಯ್ಯ!"

"ಓಹೋ! ಅಗ್ರಹಾರದಲ್ಲಿ ನಿನ್ನಂತಹ ರಾಮಯ್ಯಗಳು ನೂರೆಂಟು ಮಂದಿ! ಎಲ್ಲರ ಕುಲಗೋತ್ರಗಳನ್ನೂ ತಿಳಿದಿರಬೇಕೆನ್ನುತ್ತೀಯಾ?"

ಎನ್ನುತ್ತಲೇ ಗೆಳೆಯರೊಂದಿಗೆ ತಾನೂ ಉರುಳುರುಳಿ ನಗಲಾರಂಭಿಸಿದನಂತೆ. ತಾತನವರ ಕೋಪ ತಾರಕಕ್ಕೇರಿತು. ಛೀತ್ಕರಿಸಿಕೊಂಡು ಹಿಂದಿರುಗುವುದರಲ್ಲಿದ್ದಾಗ ಬೀಗಿತ್ತಿ ಬಜಾರಿ ಬೀದಿಯ ಬಾಗಿಲಿಗೆ ಬಂದಳಂತೆ.

"ಯಾರಪ್ಪಾ ಅದು?" ಕೇಳಿದಳು. ತಾತನ ಕೋಪ ತಾತ್ಕಾಲಿಕವಾಗಿ ಕಡಿಮೆಯಾಯ್ತು.

"ನಾನಮ್ಮ! ಲಕ್ಷ್ಮಿಯ ತಂದೆ."

"ಯಾವ ಲಕ್ಷ್ಮಿ?" ಠೇಂಕಾರದಿಂದ ಕೇಳಿದಳು.

ಬೆಕ್ಕಸ ಬೆರಗಾಗಿ ತಾತ ಮರು ಘಳಿಗೆಯಲ್ಲೇ ಥಟ್ಟನೆ ಹಿಂದಿರುಗಿದರಂತೆ. ಅವರಿಗೆ ಅತಿಯಾದ ಅವಮಾನವನ್ನು ಅನುಭವಿಸುವಂತಾಯ್ತು. ಅದೇ ಕೊನೆ. ಆ ಮನೆಯ ಹೊಸಲು ಮತ್ತೆ ಮೆಟ್ಟಲಿಲ್ಲ.

"ಮಗಳು ಸತ್ತು ಹೋದಳು ಇನ್ನು ಆ ದರಿದ್ರ ಕೊಂಪೆಯ ಹೆಸರೆತ್ತಬೇಡ."

ಎಂದು ಅಜ್ಜಿಗೆ ಆಜ್ಞಾಪಿಸಿದರು ತಾತ.

ಅಜ್ಜಿ ತಾತನ ಕಾಲಿಗೆ ಬಿದ್ದು ಬೇಡಿಕೊಂಡರಂತೆ. ದಯಾಮಯ, ತಾತ ಕಣ್ಣೊರೆಸಿಕೊಂಡು ಅಜ್ಜಿಯನ್ನು ಸಮಾಧಾನಪಡಿಸಿ ಹಬ್ಬಕ್ಕೆ ಅಳಿಯ ಮಗಳನ್ನು ಕರೆದುಕೊಂಡು ಬರುವಂತೆ ಕಳಿಸಿದರಂತೆ.

ಆದರೆ ಅಳಿಯ ಕದಲದೆ ಕಲ್ಲಿನಂತೆ ಕುಳಿತ.

"ನನ್ನ ಮಾತು ತೆಗೆದು ಹಾಕಬೇಡಪ್ಪಾ! ನಿನ್ನ ತಾಯಿಯ ಸಮಾನಳು. ಹಬ್ಬದ ದಿನ ನನ್ನ ಮನೆಯಲ್ಲಿ ಎಲೆಯ ಮುಂದೆ ನೀನು ಕುಳಿತು ಎದ್ದರೆ ನನಗೆ ತುಂಬಾ ಸಂತೋಷವಾಗುತ್ತದೆ!"

ಎಂದು ಅಜ್ಜಿ ಅಳಿಯನನ್ನು ಗೋಗರೆಯುತ್ತಿದ್ದರೆ, ಬೀಗಿತ್ತಿ ಬಿಸ ಬಿಸನೆ ಬಂದು, ಹುಂ! ಹಬ್ಬದ ದಿನ ನಿನ್ನ ಮನೆಯ ಎಲೆಯ ಮುಂದೇಕೆ ಕೂಡಬೇಕು? ಅಷ್ಟು ನಮಗೆ ಗತಿ ಇಲ್ಲವೇ! ತಾಯಿಯ ಮಮತೆಯನ್ನು ತೋರಿಸಲೆತ್ನಿಸುತ್ತೀಯಾ? ಉಡುಗೊರೆ ಕೊಡುತ್ತೀಯಾ?" ಎಂದಳಂತೆ.

ಬೀಗಿತಿಯ ಇಂಗಿತವರಿತ ಅಜ್ಜಿ ಉಡುಗೊರೆ ಕೊಡಲು ಮಾತು ಕೊಟ್ಟು ಅಳಿಯನನ್ನು ಇಳಿಸಿಕೊಂಡು ಬರುತ್ತಿದ್ದಳಂತೆ. ಹಬ್ಬದ ದಿನ ಅಳಿಯ ಮಗಳು ಒಂದಾಗಿರಲೆಂದೇ ಆ ಪ್ರಯತ್ನವೆಲ್ಲಾ – ಆದರೆ ಮಾಮ ಹಬ್ಬದೂಟ ಉಂಡು ತಾಂಬೂಲದಲ್ಲಿನ ರೂಪಾಯಿಯನ್ನು ಜೇಬಿಗಿಳಿಸಿ ಹೊರಟು ಹೋಗುತ್ತಿದ್ದ. ಅಜ್ಜಿ ಕಣ್ಣೀರು ಹಾಕಿಕೊಂಡರೆ ಅತ್ತೆಯೇ ಸಮಾಧಾನಪಡಿಸುತ್ತಿದ್ದಳಂತೆ.

"ಅಮ್ಮಾ! ಏಕಮ್ಮಾ ಅಷ್ಟೊಂದು ದುಃಖಿಸುತ್ತೀ? ನಮಗೆ ನಮ್ಮ ಪುರಾಣದ ಕಥೆಗಳು ತಿಳಿಯವೆ? ಸೀತಾದೇವಿಯನ್ನು ತ್ಯಜಿಸಿದ್ದ ಶ್ರೀರಾಮಚಂದ್ರ ಮತ್ತೆ ಪರಿಗ್ರಹಿಸಲಿಲ್ಲವೆ? ಕಾನನದಲ್ಲಿ ದಮಯಂತಿಯನ್ನು ಬಿಟ್ಟುಹೋದ ನಳಚಕ್ರವರ್ತಿ ತಿರುಗಿ ಸೇರಲಿಲ್ಲವೆ? ಸಾವಿತ್ರಿಯನ್ನು ಏಕಾಂಗಿಯಾಗಿ ಬಿಟ್ಟು ಮರಣಿಸಿದ್ದ ಸತ್ಯವಂತ ಪುನರ್ಜೀವಿಯಾಗಲಿಲ್ಲವೆ? ಕಷ್ಟಪಟ್ಟವರೆಲ್ಲಾ ಪುನಹ ಸುಖವನ್ನು ಕಾಣಲಿಲ್ಲವೆ? ಅಮ್ಮಾ ಧರ್ಮಕ್ಕೆ ಅಪಜಯವಾದುದನ್ನು ಎಲ್ಲಿಯಾದರೂ ಎಂದಾದರೂ ಕೇಳಿದ್ದೀಯಾ? ಏಕಮ್ಮ, ಎಲ್ಲವನ್ನೂ ತಿಳಿದು ಕೂಡ ಪರಿತಪಿಸುತ್ತಿಯೋ?"

* * *

ಅತ್ತೆ ಅದೇ ಧೈರ್ಯದಿಂದ, ಭವಿಷ್ಯದ ಮೇಲೆ ಯಾವುದೋ ಒಂದು ಆಶೆಯಿರಿಸಿಕೊಂಡು ನಾಲ್ಕು ವರ್ಷ ಸಂಸಾರ ಮಾಡಿದಳು. ಅಂದು ಅತ್ತೆಯ ರೂಪ ಲಾವಣ್ಯ, ಸಹನೆ ಸದ್ಗುಣಗಳು ಎಲ್ಲಕ್ಕೂ ಊರೆಲ್ಲಾ ಹೆಸರುವಾಸಿಯಾಗಿತ್ತು.

ಮಾವನ ಪ್ರೇಯಸಿ ಮೋಹನಾಂಗಿಗೆ ಅತ್ತೆಯ ಸೌಂದರ್ಯವನ್ನು ತಿಲಕಿಸಬೇಕೆಂದೂ, ಅತ್ತೆಯ ಸೌಶೀಲ್ಯವನ್ನೂ ಪರೀಕ್ಷಿಸಬೇಕೆಂದೂ ಬುದ್ಧಿಯುಂಟಾಯ್ತು. ಮಾವನನ್ನು ರೇಗಿಸಿದಳು.

"ನೋಡ್ರೀ, ನಿಮ್ಮ ಠೀವಿ ಗೀವಿ ನನ್ನ ಹತ್ತಿರ ಮಾತ್ರವಲ್ಲ! ನಿಮ್ಮ ಹೆಂಡತಿಯ ಮುಂದೆ ನೀವು ನನ್ನೊಂದಿಗೆ ಧೈರ್ಯವಾಗಿ ನಿಂತಂತೆ ನಿಂತರೆ ಆಗ ಗೊತ್ತಾಗುತ್ತದೆ ನಿಮ್ಮ ಪ್ರಜ್ಞೆ! ಒಪ್ಪಿಕೊಳ್ಳುತ್ತೀರಾ?"

– ಎಂದು ಅಪಹಾಸ್ಯ ಮಾಡಿ ಸವಾಲು ಹಾಕಿದಳಂತೆ. ಆಗ ಮಾವ ಮೋಹನಾಂಗಿಯನ್ನು ಓರೆಗಣ್ಣಿನಿಂದ ನೋಡುತ್ತಾ, ಅತಿ ಹಗುರವಾಗಿ, ಹೆಮ್ಮೆಯಿಂದ ನಕ್ಕಿರಬಹುದು!

ಮಾರನೆಯ ದಿನ ಮಾವಯ್ಯ ಮೋಹನಾಂಗೀ ಸಮೇತನಾಗಿ ಮನೆಗೆ ದಯಮಾಡಿಸಿದ. ಮೇನಾದಿಂದಿಳಿಯುತ್ತಿರುವಂತೆಯೇ ಅತ್ತೆಯ ಕೈಲಿ ಮೋಹನಾಂಗಿಗೆ ಕಾಲು ತೊಳಿಸಿದನಂತೆ. ಅದು ಅಪೂರ್ವವಾದ ವಿಷಯ! ಸಾಮಾನ್ಯ ಸ್ತ್ರೀಯಾದವಳು ಕೇಳಿ ಸಹಿಸಲಾರದ ವಿಷಯ! ಆದರೆ ಅತ್ತೆ ಅದೇ ಮಂದಹಾಸದಿಂದ ಆ ಕೆಲಸ ಮಾಡಿದಳಂತೆ! ಕಾಲು ತೊಳೆದು ಮೋಹನಾಂಗಿಯ ಕಾಲನ್ನು ಚೌಕದಿಂದ ಒರೆಸಿದಳಂತೆ! ಕೈಹಿಡಿದು ಕರೆದೊಯ್ದು ಮಂಚದ ಮೇಲೆ ಕೂಡಿಸಿದಳು! ವಿವಿಧ ರೀತಿಯ ತಿಂಡಿ ತಿನಿಸುಗಳನ್ನು ಮಾಡಿ ತಟ್ಟೆಯಲ್ಲಿರಿಸಿಕೊಂಡು ಹಾಲಿನ ಲೋಟಾಗಳನ್ನು ತೆಗೆದುಕೊಂಡು ಹೋಗಿ ಅವರಿಬ್ಬರ ಮುಂದಿರಿಸಿ ದೂರದಲ್ಲಿ ದಾಸಿಯಂತೆ ಕೈ ಕಟ್ಟಿ ನಿಂತಳಂತೆ! ಮೋಹನಾಂಗಿ ಎಂಜಲು ಮಾಡಿದ್ದನ್ನು ಮಾವಯ್ಯ ತಿನ್ನುವುದು. ಮಾವಯ್ಯ ಕುಡಿದುದನ್ನು ಮೋಹನಾಂಗಿ ಕುಡಿಯುವುದು. ಇಬ್ಬರೂ ಸರಸವಾಡುತ್ತಾ, ಎಂಜಲು ತಿನ್ನಿಸಿ ತಿನ್ನುತ್ತಾ ಸಲ್ಲಾಪವಾಡುತ್ತಾ ನಗುನಗುತ್ತಿದ್ದರೆ, ಅತ್ತೆಯ ಮುಖದಲ್ಲಿ ಚಿಂತೆಯ ಚಿಹ್ನೆಯಾಗಲೀ, ಕೋಪದ ಚಿಹ್ನೆಯಾಗಲೀ, ಅಸಹ್ಯದ ಭಾವವಾಗಲೀ, ಏನೂ ಯಾವ ಪರಿಣಾಮವೂ ಕಂಡು ಬರಲಿಲ್ಲ! ಓರೆಗಣ್ಣಿನಿಂದ ಅತ್ತೆಯನ್ನು ಕ್ಷಣಕ್ಷಣವೂ ಶಲ್ಯ ಪರೀಕ್ಷೆ ಮಾಡುತ್ತಿದ್ದ ಮೋಹನಾಂಗಿ ಬೆಕ್ಕಸಬೆರಗಾದಳು.

ಕಚ್ಚೆ ಹಾಕಿ ಉಟ್ಟುಕೊಂಡ ಸೀರೆ ಅತ್ತೆಯ ಲಾವಣ್ಯವನ್ನು ದ್ವಿಗುಣಗೊಳಿಸಿತ್ತು. ಮಂದವಾಗದ ಮಂದಹಾಸ ಮುಖದ ಮೇಲೆ ಮಾಸದಂತೆ ಮಿನುಗುತ್ತಿತ್ತು. ಇಹಲೋಕದ ವಿಷಯಗಳಿಗೆ ಅತೀತಳಾಗಿ ತಿರುಗಾಡುತ್ತಿದ್ದ ಅತ್ತೆಯ ಮುಂದೆ ಮೋಹನಾಂಗಿ ನಾಚಿ ತಲೆ ತಗ್ಗಿಸಿದಳು. ತಾನೇ ತ್ರಿಭುವನ ಸುಂದರಿ ಎಂದು ಮೆರೆಯುತ್ತಿದ್ದ ಮೋಹನಾಂಗಿಗೆ ಗರ್ವ ಭಂಗವಾಗಿ ಪರಾಜಿತಳಾದಂತಾಯ್ತು. ಬೀಳ್ಕೊಂಡು ಹೊರಡುವ ಮುನ್ನ ಅತ್ತೆಯ ಪಾದಗಳ ಮೇಲೆ ತಲೆಯಿರಿಸಿ ತನ್ನ ಕಣ್ಣೀರಿನಿಂದ ಅತ್ತೆಯ ಕಾಲ್ತೊಳೆದು, ಅತ್ತೆಯಿಂದ ಆಶೀರ್ವಾದ ಪಡೆದುಕೊಂಡು ಪರಿವರ್ತಿತಳಾದಳು. ದುಃಖಭರಿತ ಹೃದಯದಿಂದ ಪುನಹ ನಮಸ್ಕರಿಸಿ ಹೊರಟು ಹೋದಳು ಮೋಹನಾಂಗಿ.

ಅಂದು ರಾತ್ರಿ ಮೋಹನಾಂಗಿ ಪ್ರಿಯತಮನನ್ನು ಆದರದಿಂದಾಹ್ವಾನಿಸದೆ ತಿರಸ್ಕರಿಸಿದಳು. ಮೇಲಾಗಿ ಪರಿವರ್ತಿತ ಮನಸ್ಸಿನಿಂದ ದಿವ್ಯ ಜ್ಞಾನ ಜ್ಯೋತಿಯನ್ನು ಕಾಮಾಂಧನಾದ ಪ್ರಿಯತಮನಿಗೆ ತೋರಿಸಲೆತ್ನಿಸಿದಳು.

"ಸ್ವಾಮೀ! ಸಾಕ್ಷಾತ್ತು ಮಹಾಲಕ್ಷ್ಮಿಗೆ ಒಡೆಯರಾದ ನೀವು ನನ್ನ ಮನೆಯ ಹೊಸಿಲು ದಾಟುವುದು ತೀರದ ಅಪಚಾರ. ಇನ್ನು ಸಹಿಸಲಾರೆ. ರತಿದೇವಿಯನ್ನೇ ಪತ್ನಿಯಾಗಿರಿಸಿಕೊಂಡು, ಬಾಹ್ಯಾಡಂಬರಗಳ ಗಾಜಿನ ಮಣಿಯ ಹೊಳಪಿಗೆ ಮನಸಿತ್ತು, ನೀಚಾತಿನೀಚವಾಗಿ ಬದುಕುವ ನನ್ನ ಮೇಲಿನ ಈ ಮೋಹಕ್ಕೆ ಅರ್ಥವೇನು? ಆಕೆಯ ಸೌಂದರ್ಯ, ಸೌಶೀಲ್ಯ, ಶಾಶ್ವತವಲ್ಲವೇ? ನೀವು ಆರಾಧಿಸುತ್ತಿರುವ ನನ್ನ ಈ ರೂಪ ಯಾವ ಘಳಿಗೆಯಲ್ಲಿ ಮಾಸಿ ಹೋಗುತ್ತದೋ, ಈ ಯೌವನ ಎಂದು ಮರೆಯಾಗುತ್ತದೋ ಯೋಚಿಸಿದ್ದೀರಾ? ಹೋಗಲೀ ಕಳೆದು ಹೋದುದನ್ನು ನೆನಪಿಸಿಕೊಳ್ಳಬೇಡಿ. 'ಮಿಂಚಿ ಹೋದ ಕಾರ್ಯಕ್ಕೆ ಚಿಂತಿಸಿ ಫಲವಿಲ್ಲ. ನುಂಗಿದ ತುತ್ತಿನ ರುಚಿ ಬಯಸಬೇಡಿ.' ಇನ್ನು ಮೇಲೆ ಆ ದೇವತಾ ಮೂರ್ತಿಗೆ ಅನ್ಯಾಯವಾಗಕೂಡದು. ನಾನು ವ್ಯಭಿಚಾರಿಣಿಯೇ ಆದರೂ ನನಗೂ ಆತ್ಮ ತೃಪ್ತಿಬೇಕು. ಇನ್ನು ನೀವು ನನ್ನ ಬಾಳಿನಲ್ಲಡಿಯಿರಿಸಬೇಡಿ. ನಿಮಗೆ ಜ್ಞಾನೋದಯವಾಗಿ ನಿಮ್ಮ ತಪ್ಪಿನರಿವು ನಿಮಗಾದರೆ... ಆ ದೇವತೆ ದುರದೃಷ್ಟಶಾಲಿಯನ್ನು ಕ್ಷಮಿಸಿದರೆ..."

ಮಾತನಾಡುತ್ತಿದಂತೆ ಅಳಲುಕ್ಕಿ ಬಂದು ಕಣ್ಣೀರು ಧಾರೆ ಧಾರೆಯಾಗಿ ಹರಿಯಿತು. ಮಾವಯ್ಯ ಅತ್ಯಾಶ್ಚರ್ಯಗೊಂಡು,

"ಮೋಹಿನೀ...!"

ಎನ್ನುತ್ತಾ ಹತ್ತಿರ ಹೋದರೆ ಮೋಹಿನಿ ಸರಸರನೆ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡಳು. ಆ ಮುಚ್ಚಿದ ಬಾಗಿಲು ಮತ್ತೆ ಮಾವಯ್ಯನಿಗಾಗಿ ತೆರೆಯಲಿಲ್ಲ. ಮಾವಯ್ಯ ಮನೋರೋಗದಿಂದ ಮಂಚ ಹಿಡಿದ, ವಿಪರೀತವಾಗಿ ಕನವರಿಸಿಕೊಳ್ಳುವುದು, ದುಃಖಿಸುವುದು ಹುಚ್ಚು ಹುಚ್ಚಾಗಿ ಎದ್ದು ಓಡಿಹೋಗುವುದು ಮುಂತಾದ ಲಕ್ಷಣಗಳು ಜಾಸ್ತಿಯಾದವು. ಮದ್ದುಗಳು ಕೆಲಸಕ್ಕೆ ಬಾರದಾದುವು.

ಮಾವಯ್ಯನ 'ಖಾಯಿಲೆ' ಅತ್ತೆಗೆ ಗೊತ್ತು. ತಾನೇ ಮೋಹನಾಂಗಿಯ ಮನೆಗೆ ಹೊರಟಳು. ಆದರೆ ಅವಳು ಆ ಹಿಂದಿನ ದಿನ ರಾತ್ರಿಯೇ ಊರು ಬಿಟ್ಟು ಹೊರಟು ಹೋಗಿದ್ದಳು. ಅತ್ತೆ ಹತಾಶಳಾಗಿ ಹಿಂದಿರುಗಿ ಬಂದಳು. ಇನ್ನು ಮಾವಯ್ಯನ ಮನೋವ್ಯಥೆಗೆ ಮದ್ದಿಲ್ಲ. ವೈದ್ಯವಿಲ್ಲ. ದಿನಗಳುರುಳುತ್ತಿದ್ದವು. ಪರಿಸ್ಥಿತಿ ವಿಷಮಿಸುತ್ತಿತ್ತು. ನಿದ್ರಾಹಾರಗಳನ್ನು ತೊರೆದು ಅತ್ತೆ ಮಾಡುತ್ತಿದ್ದ ಸೇವೆ ವ್ಯರ್ಥವಾಗುತ್ತಿತ್ತು. ಶೋಕ ದೇವತೆಯಂತೆ ಕುಳಿತಿದ್ದ ಅತ್ತೆ ಏನೋ ನೆನಪು ಬಂದವಳಂತೆ ಎದ್ದಳು. ಭಗವಂತನನ್ನು ಧ್ಯಾನಿಸುತ್ತಾ ಮಾವಯ್ಯನ ಮಂಚದ ಸುತ್ತ ಪ್ರದಕ್ಷಿಣೆ ಮಾಡಿದಳು.

"ಪ್ರಭೂ! ಶ್ರೀರಾಮಚಂದ್ರ! ನನ್ನ ಆಯಸ್ಸನ್ನು ನನ್ನ ಗಂಡನಿಗೆ ಪ್ರಸಾದಿಸಿ ಬದುಕಿಸಿ ಈ ದೀನಳನ್ನು ನಿನ್ನ ಚರಣಗಳಲ್ಲಿ ಸೇರಿಸಿಕೋ ತಂದೆ! ಸೌಭಾಗ್ಯವತಿಯಾಗಿ ಈ ಬಾಳು ಮುಕ್ತಾಯವಾಗಲೀ ರಾಮ! ಇದೊಂದೇ ನನ್ನ ಬಾಳಿನಾಸೆ!"

– ಎಂದು ಪ್ರಾರ್ಥಿಸಿದಳು.

ಭಕ್ತರನ್ನು ಬೇರಾವ ರೀತಿಯಲ್ಲೂ ಸಂತೋಷಪಡಿಸಲಾರದೆ ತನ್ನಲ್ಲಿ ಸೇರಿಸಿಕೊಳ್ಳಲು ಸಿದ್ಧನಾಗುತ್ತಾನೇನೋ ಭಗವಂತ! ಪವಿತ್ರ ಮೂರ್ತಿಯಾದ ಅತ್ತೆಯ ಆಸೆ ಫಲಿಸಿತು. ಮಾವಯ್ಯ ಆರೋಗ್ಯವಂತನಾದ. ಅತ್ತೆ ಖಾಯಿಲೆ ಮಲಗಿದಳು. ಆಗ ಅಜ್ಜಿ ಗರ್ಭವತಿ. ಮಗಳ ಖಾಯಿಲೆಯ ವಿಷಯ ತಿಳಿದು ಅಪಾರ ದುಃಖದಿಂದ ಬಂದಳು. ಔಷಧಿ ಕೊಡಿಸ ಹೋದರೆ ಅಡ್ಡಿಪಡಿಸಿದಳು ಅತ್ತೆ.

"ಅಮ್ಮಾ! ನನ್ನ ಗಂಡನ ಆರೋಗ್ಯಕ್ಕೆ ನನ್ನ ಪ್ರಾಣವನ್ನು ದಾನ ಮಾಡಿದ್ದೇನೆ. ಆ ಹರಕೆ ಸಲ್ಲಿಸದೆ ನಾನು ಬದುಕ ಬಯಸಿದರೆ ಅದು ಮಹಾಪರಾಧವಲ್ಲವೇನಮ್ಮಾ? ನನ್ನನ್ನು ಮರೆತು ಬಿಡಮ್ಮ! ನಾನು ದೇವರ ಹತ್ತಿರ ಹೊರಟು ಹೋಗುತ್ತೇನೆ" ಎಂದಳಂತೆ.

ಅತ್ತೆಗೆ ವಿಷಮಿಸಿದ ದಿನ ರಾತ್ರಿ ತಾತ ಕೋಪವನ್ನು ಮರೆತು, ಹಟ ತೊರೆದು, ಅಳಿಯನ ಮನೆಯಲ್ಲಡಿಯಿರಿಸಿದ. ಅತ್ತೆಯ ವಾದವನ್ನು ಅಲ್ಲಗಳೆದು ಔಷಧೋಪಚಾರ ಮಾಡಿಸಿದ.

ಮತ್ತೊಂದು ದುರದೃಷ್ಟ! ಅತ್ತೆ ಬಹಿಷ್ಟೆಯಾದಳು. ಮೈಮೇಲೆ ಭತ್ತ ಹಾಕಿದರೆ ಅರಳಾಗುವಂತಹ ಜ್ವರದಲ್ಲೂ ಸೊಸೆಗೆ ಸ್ನಾನವಾಗಬೇಕೆಂದು ಹಟ ಹಿಡಿದಳು ಆ ಅತ್ತೆಯ ಅತ್ತೆ. ನರ ರೂಪ ರಕ್ಕಸಿ! ಉಪಕಾರವನ್ನು ಮರೆತ ಕೃತಘ್ನೆ! ಅಜ್ಜಿ ಅತ್ತು ಕರೆದು ಬೇಡಿಕೊಂಡರೂ ಉಪಯೋಗವಾಗಲಿಲ್ಲ. ಅನಾಚಾರ ತನ್ನಮನೆಯಲ್ಲಿ ಕೂಡದೆಂದಳು. ತಾತಯ್ಯ ಎದ್ದು ಗಾಡಿ ತರಲು ಹೋದರು. ಅಷ್ಟರಲ್ಲಿ ಆ ರಾಕ್ಷಸಿ ಬಿಂದಿಗೆಯ ತುಂಬಾ ತಣ್ಣೀರು ತಂದು ಅತ್ತೆಯ ತಲೆಯ ಮೇಲೆ ಧಡಧಡನೆ ಸುರಿದಳು.

ಅಂದು ರಾತ್ರಿ ಅತ್ತೆಗೆ ಜ್ಞಾನ ತಪ್ಪಿತು. ಸೂರ್ಯ ಉದಯಿಸಿದ – ಅತ್ತೆ ಅಸ್ತಮಿಸಿದಳು. ಸೌಂದರ್ಯ ರಾಶಿ, ಪವಿತ್ರತಾ ಮೂರ್ತಿ, ಸೌಭಾಗ್ಯವತಿಯಾಗೇ ಜನ್ಮ ಸಾಕು ಮಾಡಿ ಕೊಂಡಳು. ತುಂಬು ಗರ್ಭವತಿ ಅಜ್ಜಿ ಆಗರ್ಭ ಶೋಕವನ್ನು ಹೇಗೆ ತಡೆದುಕೊಂಡಳೋ, ಏತಕ್ಕಾಗಿ ಬದುಕಿದ್ದಾಳೋ ಅರ್ಥವಾಗದು.

* * *

ವಿಧಿ ವಿಪರೀತ! ಆಕೆ ವಿಚಿತ್ರ! ಅತ್ತೆಯ ಪವಿತ್ರ ದೇಹ ಅಗ್ನಿ, ಜ್ವಾಲೆಗಳಲ್ಲಿ ಲೀನವಾಗುತ್ತಿದ್ದ ಸಮಯದಲ್ಲಿ ಅಜ್ಜಿ ಪ್ರಸವಿಸದಳು. 'ಬೇಡಿ ಬಂದ ಭಾಗ್ಯ' ಗಂಡು ಮಗು! ಏನು ಈ ಪ್ರಕೃತಿ! ಎಷ್ಟು ವಿಚಿತ್ರಗಳನ್ನು ಸೃಷ್ಟಿಸಬಲ್ಲದು?

ಆಗಾಗ ಭಗವಂತ ಮಾನವರನ್ನು ತೊಗಲು ಬೊಂಬೆಗಳನ್ನಾಗಿ ಮಾಡಿಕೊಂಡು ಆಡಿಸುತ್ತಾನೇನೋ, ಬ್ರಹ್ಮಾಂಡವೇ ಆ ದೇವನಾಡುವ ಬೊಂಬೆಯಾಟ!

ಒಂದು ಕಡೆ ಖೇದ! ಮತ್ತೊಂದು ಕಡೆ ಮೋದ!

ಒಂದು ಮಗುವಿನ ಮರಣ! ಮತ್ತೊಂದು ಮಗುವಿನ ಜನನ! ಆ ಮಾತೃ ಹೃದಯ, ತಾಯ ಕರುಳು ಅಳಬೇಕೋ? ಸಂತೋಷಿಸಬೇಕೋ? ಎಂತಹ ಅನುಭೂತಿ ಪಡೆಯುತ್ತದೆ? ಅಜ್ಜಿಯೂ ಕೂಡ ಸರಿಯಾಗಿ ಉತ್ತರ ಹೇಳದಾದಳು. ಆ ಹಸುಮಗುವೇ ನಮ್ಮ ತಂದೆ!

"ಅಪ್ಪ ದೊಡ್ಡವನಾಗಿ, ನಾನು ಹುಟ್ಟಿದ ಮೇಲೆ ಸ್ವಲ್ಪ ದೊಡ್ಡವಳಾದಾಗ ಅಜ್ಜಿ ನನಗೆ ಈ ಕರುಣ ಕಥೆಯನ್ನು ಕಣ್ಣೀರು ಸುರಿಸುತ್ತಾ ಹೇಳಿದ ಆ ಅನುಭೂತಿಯನ್ನು ಹೇಗೆ ವರ್ಣಿಸಲಿ?"

* * *

ಭಾನು ನಿಲ್ಲಿಸಿದಳು. ನಾನೂ ಭಾರವಾದ ನಿಟ್ಟುಸಿರೆಳೆದೆ.

"ಎಂತಹ ವಿಚಿತ್ರವಾದ ಕಥೆ ಹೇಳಿದೆ ಭಾನು? ನಿನಗೆ ಅತ್ತೆಯ ಹೋಲಿಕೆ ಇದೆ ಎಂದಳೆ ಅಜ್ಜಿ?"

"ಹೌದು! ರೂಪದಲ್ಲಿ ಮಾತ್ರವಲ್ಲ. ಹಣೆಯಬರಹದಲ್ಲಿಯೂ ಹಾಗೇ ಎಂದು ಈಗ ಅನ್ನಿಸುತ್ತಿದೆ. ಅತ್ತೆಯ ಕಥೆ ಕೇಳಿ ಆ ದಿನ ನಾನೇನೆಂದುಕೊಂಡೆ ಗೊತ್ತೇ? ಅತ್ತೆಗೆ ಎಷ್ಟು ರೂಪವಿದ್ದರೂ, ಎಷ್ಟು ಸುಗುಣಗಳಿದ್ದರೂ ಗಂಡನನ್ನು ಒಲಿಸಿಕೊಳ್ಳದ ಆ ಬುದ್ಧಿವಂತಿಕೆ ಏಕೋ, ಆ ಶಕ್ತಿ ಸಾಮರ್ಥ್ಯಗಳೇನೂ ಇಲ್ಲವೆಂದೂ, ಅತ್ತೆಯ ಸರಳತೆಯೇ ಅವಳನ್ನು ಬಲಿ ತೆಗೆದುಕೊಂಡಿತೆಂದೂ, ಅವಳ ಸ್ಥಾನದಲ್ಲಿ ನಾನಿದ್ದಿದ್ದರೆ ಅಂತಹ ಕಷ್ಟಗಳಿಗೆ ಗುರಿಯಾಗುತ್ತಿರಲಿಲ್ಲವೆಂದೂ... ಅಣ್ಣಾ! ಈಗ ನನಗೆ ಬರುತ್ತದೆ. ನನ್ನ ನಿರ್ಣಯದ ಹಿಂದೆ ಎಷ್ಟು ಸತ್ಯ ಕೊಳೆಯುತ್ತಿದೆಯೋ, ಆಗ ನನಗೆ ಯಾರಾದರೂ ಹೇಳಿದ್ದರೆ ನಾನು ನಂಬುತ್ತಿರಲಿಲ್ಲವೇನೋ!"

ಅಂದು – ಮದುವೆಗೆ ಮೊದಲು – ನನ್ನ ಯೋಚನೆ ಏನಾಗಿತ್ತೆಂದು ಕೇಳುತ್ತೀಯಾ? ಆ ದಿನಗಳೇ ಬೇರೆ; ಆ ಮನುಷ್ಯರೇ ಬೇರೆ. ಅಂದು ಹೆಂಗಸಿಗೆ ಹೆಂಡತಿಯಾಗಿಯಾಗಲೀ, ಸೊಸೆಯಾಗಿಯಾಗಲೀ ಎಂತಹ ಸ್ಥಾನವೂ ಇಲ್ಲ. ತನ್ನ ಮಗಳು ಅತ್ತೆಯ ಮನೆಯಲ್ಲಿ ನರಕಯಾತನೆಯನ್ನನುಭವಿಸುತ್ತಿದ್ದರೆ ತಾಯಿ ತಂದೆಯರು ಕಣ್ತೆರೆದು ನೋಡುವುದೊಂದು ಯಾವುದಕ್ಕೂ ಅಶಕ್ತರಾಗಿರುತ್ತಿದ್ದರು. ಸಾಮಾಜಿಕ ನಿಯಮಗಳನ್ನು ಮೀರುವಂತಹ ಸಾಹಸವಂತರಲ್ಲ.

ಆದರೆ ಇಂದು ಅತ್ತೆ ಮತ್ತೆ ಹುಟ್ಟಿದರೆ ಅಷ್ಟು ಅನ್ಯಾಯವಾಗಿ ಬಲಿಯಾಗುವ ಅಗತ್ಯ ಬರುವುದಿಲ್ಲ. ಇಂದಿನ ಪುರುಷ ಸತ್ಯವಾದಿ! ದಯಾಮಯ! ನ್ಯಾಯಪಾಲಕ! ಸ್ತ್ರೀಯ ಬೆಲೆಯನ್ನರಿತಿದ್ದಾನೆ. ಸ್ತ್ರೀಯನ್ನು ಅರ್ಥ ಮಾಡಿಕೊಂಡಿದ್ದಾನೆ. ಹೆಣ್ಣನ್ನು ಮನಸಾರೆ ಪ್ರೇಮಿಸುತ್ತಾನೆ. ಆದರಿಸುತ್ತಾನೆ. ಆರಾಧಿಸುತ್ತಾನೆ. ಕ್ರಮ ಕ್ರಮವಾಗಿ ಸ್ತ್ರೀ ಎಲ್ಲಾ ವಿಧದಲ್ಲೂ ಪುರುಷನ ಸ್ಥಾಯಿಯನ್ನು ಪಡೆಯುತ್ತಿದ್ದಾಳೆ. ಆ ಅವಕಾಶವನ್ನು ಪುರುಷನೇ ಅವಳಿಗೆ ಕಲ್ಪಿಸುತ್ತಾನೆ. ಕಲ್ಪಿಸುತ್ತಿದ್ದಾನೆ. ಅಂತಹ ಸ್ತ್ರೀ–ಪುರುಷರ ನಡುವೆ ಕಲಹಗಳಾಗಲೀ, ವಿಮುಖತೆಯಾಗಲೀ ತಾವೇ ಇಲ್ಲ. ವಿದ್ಯಾವಂತರಾಗಿ, ಜ್ಞಾನ ಸಂಪನ್ನರಾಗಿರುವ ಇಂದಿನ ವ್ಯಕ್ತಿಗಳೂ ಹಿಂದಿನವರಂತೆ ಸನಾತನಿಗಳಂತೆ, ನಾಗರೀಕರಂತೆ ಬಾಳುತ್ತಿದ್ದಾರೆಂದರೆ ನಾಚಿಕೆಗೇಡು.

ಅತ್ತೆಗೂ ನನಗೂ ಅಂತ್ಯವಿಲ್ಲದ ಅಂತರವಿದೆ. ಅತ್ತೆ ಸಾಧಿಸಲಾಗದ ಅಭ್ಯುದಯವನ್ನು ನಾನು ಸಾಧಿಸಬಲ್ಲೆ, ಅತ್ತೆ ಶಾಪಿಸಲಾರದ ಪುರುಷನನ್ನು ನಾನು ಶಾಪಿಸಬಲ್ಲೆ, ಅತ್ತೆ

ಪಡೆಯಲಾಗದ ಗೌರವ ಮರ್ಯಾದೆಗಳನ್ನು ನಾನು ಪಡೆಯಬಲ್ಲೆ. ಅತ್ತೆ ಕಲ್ಪಿಸಿಕೊಳ್ಳಲಾಗದ ಸ್ವರ್ಗ ಸೀಮೆಯನ್ನು ನಾನು ಕಲ್ಪಿಸಿಕೊಳ್ಳಬಲ್ಲೆ. ಈ ಪ್ರಗತಿ, ಅಭ್ಯುದಯ, ಈ ಪರಿವರ್ತನೆ ಎಲ್ಲಾ ಅತ್ತೆ ನೋಡಿದ್ದರೆ...

"ಅಣ್ಣಯ್ಯ! ಈ ಕ್ಷಣದಲ್ಲಿ ನನ್ನ ತಲೆ ಲಜ್ಜೆಯಿಂದ ಬಾಗದೇಕೆ? ಈ ಮನಸ್ಸು ಒಡೆದು ಚೂರು ಚೂರಾಗದೇಕೆ?"

"ನಾನು ಊಹಿಸಿದ್ದೆಲ್ಲಾ ಬರೀ ಊಹೆ!... ಅಸತ್ಯ! ನಾಟಕ! ಇಂದಿಗೂ ಎಂತಹ ಪರಿವರ್ತನೆಯೂ ಆಗಲಿಲ್ಲ. ಹೆಣ್ಣಿನ ಬಾಳಿನಲ್ಲಿ ಅಭ್ಯುದಯವೇನೂ ಅವತರಿಸಲಿಲ್ಲ. ಪುರುಷ ಲೋಕದಲ್ಲಿ ಮಾನಸಿಕ ಪ್ರಗತಿ ಹಣಕಿ ಹಾಕಲಿಲ್ಲ, ಸ್ತ್ರೀಗೆ ಸಮಾನತೆ,ಹಕ್ಕುಗಳು, ಕಟ್ಟು ಕಾಯಿದೆಗಳು ಎಲ್ಲಾ ದಗಾ! ಮೋಸ! ಲಾಂಛನ ಪ್ರಾಯ! ಉಪನ್ಯಾಸಕ್ಕೇ ಪರಿಮಿತ! ಬರೀ ಕಾಗದದ ಮೇಲೆ ಮಾತ್ರ! ಅನುಭವದಲ್ಲಿ, ನೈಜ ಬಾಳುವೆಯಲ್ಲಿಲ್ಲ. ನಾನು ಅತ್ತೆಗಿಂತಲೂ ಒಂದಂಗುಲವೂ ಪುರೋಗಮಿಸಲಿಲ್ಲ."

ಕೊಂಚ ಕಾಲ ಸುಮ್ಮನಿದ್ದಳು ಭಾನುಮತಿ. ನಂತರ ಮತ್ತೆ ಆರಂಭಿಸಿದಳು.

"ಮಾವಯ್ಯ ವೇಶ್ಯೆಯರ ಮನೆ ಬಾಗಿಲುಗಳಿಗೆ ತಿರುಗಿದರೆ, ಅತ್ತೆ ಬುದ್ಧೀ ಇಲ್ಲದೆ ಸುಮ್ಮನಿದ್ದಳೆಂದೂ, ಚಿಕ್ಕಪ್ಪ ಎಲೆಯಾಟವಾಡುತ್ತಲೆ ಬದುಕಿದರೆ ಚಿಕ್ಕಮ್ಮ ನಾಚಿಕೆ ಇಲ್ಲದೆ ಸುಮ್ಮನಿದ್ದಳೆಂದೂ, ಗಂಡ ಹೋಟಲಿನಲ್ಲಿ ರೂಂ ಮಾಡಿಕೊಂಡು ಇದ್ದರೆ ಹೆಂಡತಿ ಪ್ರೇಮ ರಹಿತಳಾಗಿಯೇ ಇದ್ದಾಳೆಂದೂ, ಅಂದು ಹೆಂಡತಿಯರೇ ಗಂಡಂದಿರನ್ನು ಹಾಳು ಮಾಡಿದರೆಂದೂ, ದುಶ್ಚಟಗಳಿಗೆ ಪ್ರೋತ್ಸಾಹಿಸದರೆಂದೂ, – ಕ್ಷಮೆ, ಸಹನೆ, ಪಾತಿವ್ರತ್ಯಗಳ ಹೆಸರಿನಲ್ಲಿ ಅರ್ಥರಹಿತ ಪರಿಸ್ಥಿತಿಗಳನ್ನು ಅನುಭವಿಸಿದರೆಂದು ಏನೇನೋ ಅಂದುಕೊಂಡಿದ್ದೆ!"

"ಅವರೆಲ್ಲಾ ಹಾಗೇಕೆ ಮಾಡಿದರೋ, ಮಾಡಲಾರದಾದರೆ ದಾರಿ ಏನು ಎಂದು ಒಮ್ಮೆಯಾದರೂ ಯೋಚಿಸಿದ್ದನೇ? ಹೆಣ್ಣಿಗೆ ಎಷ್ಟು ಆಸೆಗಳಿರಲೀ, ಆಶಯಗಳಿರಲೀ, ಅಭಿಮಾನವಿರಲೀ ಬಲೀಯವಾದ ವ್ಯಕ್ತಿತ್ವವಿರುತ್ತದೆಂದೂ ನೀಚಾತಿ ನೀಚವಾಗಿ ನಿಲ್ಲುವಂತಹ ಘಳಿಗೆ ಯಾವಾಗಲೋ ಒಂದು ಸಾರಿ ಬಂದೇ ತೀರುತ್ತದೆ. ಲೋಕದಲ್ಲಿ ಪೂಜನೀಯಳಾದ ಹೆಂಗಸು ಗಂಡನಿಗೆ ಅತಿ ಹಗುರ ಕೆಲಸಕ್ಕೆ ಬಾರದವಳು!"

ಭಾನು ಏನೇನೋ ನಿರ್ಣಯಿಸಿಕೊಂಡಿದ್ದಳು. ಅವಳ ಯೋಚನೆಗಳು ನನಗೆ ಅಸಮಂಜಸವೆನಿಸಿದವು.

"ಭಾನು! ನಾನು ಗಂಡಸಾಗಿ ಮಾತನಾಡುತ್ತಿದ್ದೇನೆ. ನಿನ್ನ ದಾಂಪತ್ಯ ಇತರ ದಾಂಪತ್ಯಗಳಿಗಿಂತಲೂ ಭಿನ್ನವಾಗಿದೆ, ಭಿನ್ನವಾದುದು. ನಿನ್ನ ಗಂಡನಲ್ಲಿ ಅನೇಕ ಲೋಪದೋಷಗಳಿವೆ. ಅವು ನಿನಗೆ ಅಮಿತ ವ್ಯಥೆಯನ್ನುಂಟು ಮಾಡುತ್ತಿದೆ. ಆದರೆ ನಿನ್ನ ಪ್ರತ್ಯೇಕಾನುಭವದಲ್ಲಿ ಗಂಡು ಜಾತಿಯ ಮೇಲೆ ಒಂದು ಬಗೆಯ ದ್ವೇಷವನ್ನು ಬೆಳೆಸಿಕೊಳ್ಳ ಬೇಡ. ಇಡೀ ಜಾತಿಗೇ ಒಂದು ಅಪವಾದವನ್ನು ಆರೋಪಿಸಬೇಡ. ನೀನು ಎಣಿಸಿದ, ಬಗೆದ,

ಆಶಿಸಿದ ಪ್ರಗತಿ ನೂರಕ್ಕೆ ನೂರು ಪಾಲೂ ಆಗದಾದರೂ ಬಹಳ ಮಟ್ಟಿಗೆ ನಿಜ! ಅದಕ್ಕೆ ನಿದರ್ಶನವೇನೆಂದರೆ ನಿನಗೆ ಇಷ್ಟೊಂದು ವಿಷಯ ಅರ್ಥವಾಗಿರುವುದೇ! ಅಣ್ಣನಾದರೂ ಒಬ್ಬ ಗಂಡಸಿನೊಂದಿಗೆ ನೀನು ವಾದಿಸುತ್ತಿರುವುದೇ – ಹಿಂದೆ ಹೆಂಗಸಾದವಳು ಇಷ್ಟು ವಿಷಯಗಳನ್ನು ತಿಳಿದಿದ್ದಳೇ – ಮಾತನಾಡುತ್ತಿದ್ದಳೇ?

"ನೀನೆಂದಂತೆ ಇನ್ನೂ ಪೂರ್ತಿಯಾಗಿ ಮಾತ್ರ ನಮ್ಮ ಮನಸ್ಸು, ತಿಳುವಳಿಕೆಗಳು ವಿಕಸಿಸಿಲ್ಲ ಭಾನು! ನೂರಾರು ವರ್ಷಗಳಿಂದ ಹರಿಯುತ್ತಿರುವ ಈ ಸನಾತನ ರಕ್ತ ಎಂದಿಗೆ ಅಂತ್ಯವಾಗಬೇಕು? ಅದಕ್ಕೆ ಕೆಲವು ತಲೆಮಾರುಗಳಾದರೂ ಕಳೆಯಬೇಕು. ಅಭಿವೃದ್ಧಿಯನ್ನು ಆಕಾಂಕ್ಷಿಸುತ್ತಿರುವ ಸ್ತ್ರೀ ಅತಿ ಜಾಗ್ರತೆಯಾಗಿ ಬದಲಾಗುತ್ತಾಳೆ. ಅದೇ ವೇಗದಲ್ಲಿ ಅಧಿಕಾರವನ್ನು ಕಳೆದುಕೊಳ್ಳಬೇಕಾದ ಪುರುಷ ಬದಲಾಗುತ್ತಿದ್ದಾನೆ. ಆದುದರಿಂದಲೇ ಈ ನಮಾನಸಿಕ ಕ್ಷೋಭೆ!"

"ಅಣ್ಣ! ಏನೋ ದ್ವೇಷದಿಂದಾಗಿ ಸ್ವಲ್ಪ ಅತಿಶಯೋಕ್ತಿಯಿಂದ ಮಾತನಾಡಿದೆನಾಗಲೀ ನ್ಯಾಯವನ್ನಂಗೀಕರಿಸಲು ಪುರುಷನೇ ಮೂರ್ಖನಾಗಿ ಮೊಂಡುತನ ಮಾಡುತ್ತಾನೆ? ಹಾಗಾದರೆ ಮದುವೆ ಎನ್ನುವ ಸಂಸ್ಕಾರಕ್ಕೆ ಅರ್ಥವೇನೆನ್ನುತ್ತೀ? ಈ ಸೃಷ್ಟಿಯ ಕ್ರಮವನ್ನು ಮುಂದುವರಿಸಲಿಕ್ಕಾಗಿ ತಮ್ಮ ಸ್ಥಾನದಲ್ಲಿ ಕೆಲವು ಜೀವಿಗಳನ್ನು ಪೃಥ್ವಿಗೆ ಅರ್ಪಿಸಿ ತಾವು ಉದುರಿ ಹೋಗುವಂತಹ ಪವಿತ್ರ ಕಾರ್ಯ ನಿರ್ವಹಣೆಗೆ ಮಾತ್ರವೇ ಮದುವೆಯೇ? ಈ ಪ್ರಕೃತಿ ಧರ್ಮ ನಿರ್ವಹಣೆಯಲ್ಲಿ ಸ್ತ್ರೀ ಪುರುಷ ಭೇದಾಭಿಪ್ರಾಯಗಳಿಲ್ಲದೆಯೇ ಪ್ರಗತಿ ಸಾಧ್ಯವೇ? ಮದುವೆಯಾದ ಮಾತ್ರ ಒಂದು ಹೆಣ್ಣನ್ನು ಒಬ್ಬ ಗಂಡಿಗೆ ಮಾರಿದಂತಾಯ್ತೆ? ಒಬ್ಬ ವ್ಯಕ್ತಿಯ ಮೇಲೆ ಮತ್ತೊಬ್ಬ ವ್ಯಕ್ತಿಗೆ ಸರ್ವ ಹಕ್ಕು ಅಧಿಕಾರಗಳೂ ಲಭಿಸುತ್ತವೆಯೇ?"

"ಗಂಡಸು ತಾನೊಂದು ಹೆಣ್ಣನ್ನು ಸಂಪಾದಿಸಿಕೊಂಡೆನೆಂದ ಹೆಮ್ಮೆಪಡುವುದರಲ್ಲಿ ಅಹಂಕಾರಪಡುವುದರಲ್ಲಿ ಅರ್ಥವಿದೆಯೆ? ಈ ಯೋಚನೆಗಳೇ ನನ್ನನ್ನು ಹಿಂಸೆಗೆ ಗುರಿ ಮಾಡಿ, ಮನಶ್ಶಾಂತಿಯನ್ನು ಯೋಜನೆಗಳ ದೂರ ಮಾಡಿವೆ."

"ನಾನು ಯಾವಾಗಲೂ ಏನು ಯೋಚಿಸಕೂಡದು, ದುಃಖಿಸಕೂಡದು ನನಗೆ ಸಂತೋಷಬೇಕು. ಅಪಾರವಾದ, ಅಂತ್ಯದಲ್ಲೂ ಸಂತೋಷಬೇಕು! ... ಹೇಗೆ?"

"ನನಗೆ ಗೊತ್ತು! ನನ್ನಲ್ಲಿ ಪರಿವರ್ತನೆಯುಂಟಾದಂದು, ನಾನು ನಾನಾಗಿ ಇಲ್ಲವಾದಂದು ಸಂತೋಷವಾಗಿ, ಸುಖದಿಂದಿರಬಲ್ಲೆ.

"ನಾನು ಒಬ್ಬ ವ್ಯಕ್ತಿ, ನನಗೂ ವ್ಯಕ್ತಿತ್ವವಿದೆ ಎಂದು ತಿಳಿಯದೆ ಮರೆತಂದು, ಹೆಣ್ಣಿನ ಮೇಲೆ ಸದಭಿಪ್ರಾಯವೇ ಇಲ್ಲದ ಗಂಡನೊಂದಿಗೆ ಬದುಕಬಲ್ಲುದು, ಪುರುಷನ ಸಾಂಗತ್ಯವಿಲ್ಲದೇ ಹೆಣ್ಣು ಬದುಕಲಾರಳೆಂದು ತಿಳಿದುಕೊಂಡಂದು, ಅನ್ನಕ್ಕಿಂತಲೂ ಅಭಿಮಾನ ಹೆಚ್ಚಿಲ್ಲವೆಂದು ಮನಸ್ಸನ್ನು ವಂಚಿಸಿಕೊಂಡಂದು ನಿಶ್ಚಿಂತೆಯಾಗಿರಬಹುದು. ಆಗ ಎಲ್ಲವೂ ಸುಖವೇ! ಪ್ರತಿಯೊಂದೂ ಸಂತೋಷವೇ! ಆದರೆ ನನ್ನಲ್ಲಿ ಆ ಬದಲಾವಣೆ ಬರುತ್ತದೆನ್ನುತೀಯಾ? ಬರಬೇಕೆನ್ನುತ್ತೀಯಾ?"

ಮಾತನಾಡುತ್ತಿದ್ದಂತೆ ಭಾನುಮತಿಯ ಕಣ್ಣಿನಿಂದ ಗಂಗಾವತರಣವಾಯ್ತು. ನಾನು ಬೆಪ್ಪಾಗಿ ಅವಳ ಆವೇದನೆಯನ್ನು ನೋಡುತ್ತಿದ್ದೆ. ಅವಳ ಮಾತಿನಲ್ಲಿ ಆವೇಶ ಅವಧಿ ಮೀರಿತ್ತು. ಅವಳ ಮಾನಸಿಕ ಆವೇದನೆ ಮಿತಿ ಮೀರುತ್ತಿತ್ತು.

"ಭಾನೂ! ನಿನ್ನ ಪ್ರಶ್ನೆಗಳಿಗೆ ಉತ್ತರವೇನು ಎಂದು ನನಗೆ ಅರ್ಥವಾಗುತ್ತಿಲ್ಲ. ಹೇಳ ಬೇಕೆಂದರೂ ಈಗ ಪುರುಷನಾಗಿ ನನಗೆ ಆ ಅರ್ಹತೆ ಇಲ್ಲ. "

"ಈಗ ನಾನು ಯಾವ ವಿಚಾರವನ್ನಾಗಲೀ ಮಾತನಾಡಿದೆನೋ, ಆದರೆ ನನಗೊಂದು ಆಶಯವಿದೆ. ನನ್ನ ಮಗ ಬೆಳೆದು ದೊಡ್ಡವನಾಗಿ ಅಭಿವೃದ್ಧಿಗೆ ಬರಬೇಕು. ಆದರ್ಶ ಪ್ರಾಯವಾದ ವ್ಯಕ್ತಿಯಾಗಬೇಕು. ಪುರುಷ ಲೋಕದಲ್ಲಿ, ಈ ಕಗ್ಗತ್ತಲೆಯ ಸಮಾಜದಲ್ಲಿ ಮಾಣಿಕ್ಯವಾಗಿ ಬೆಳಗಬೇಕು. ಅನ್ಯಾಯಗಳನ್ನು ನೋಡಿ ಅಸಹ್ಯಿಸಿಕೊಳ್ಳುವಂತಹ ಅಕ್ರಮ ಗಳನ್ನು ನೋಡಿ ಆವೇಶಪಡುವಂತಹ ದುರದೃಷ್ಟಶಾಲಿಗಳನ್ನು ನೋಡಿ ಕಣ್ಣೀರು ಕರೆಯು ವಂತಹ ಪವಿತ್ರ ಮೂರ್ತಿಯಾಗಬೇಕು. ಆ ದಿನ... ಆ ದಿನ ಎಂದು? ಯಾವಾಗ ಬರುತ್ತದೆ? ಹೇಳಣ್ಣಾ?"

"ಬರುತ್ತದೆ ಭಾನೂ! ಬರುತ್ತದೆ. ನಿನ್ನಂತಹ ಮಾತೃ ಮೂರ್ತಿಯ ಪೋಷಣೆಯಲ್ಲಿ ನಿನ್ನ ಮಗ ಉದಯ ಪೂರ್ಣ ಪುರುಷನಾಗಿ ರೂಪ ಹೊಂದುತ್ತಾನೆ."

ಭಾನು ಖೇದದಿಂದ ನಕ್ಕು.

"ಹುಂ..... ಆದರೆ... ಎಂದಾದರೂ ಆ ಪೋಷಣೆಗೇ ಲೋಪ ಬಂದರೆ....?"

"ಭಾನೂ! ಛೀ! ಏನಮ್ಮಾ ಈ ಸುಡುಗಾಡು ಮಾತು?"

"ಅಷ್ಟು ಭಯವೇಕಣ್ಣಾ? ನೀನಿದ್ದೀಯಲ್ಲ? ನನ್ನ ಆಶಯ, ಬಯಕೆ ನಿನಗೆ ಗೊತ್ತು."

"ಭಾನೂ! ನೀನು ಹೀಗೆ ಮಾತನಾಡುವುದು ಚೆನ್ನಾಗಿರುವುದಿಲ್ಲವಮ್ಮ? ನೋಡಮ್ಮ ನಿನ್ನ ಅಣ್ಣ ನಿನಗೆ ಯಾವ ಕಷ್ಟಕ್ಕಾಗಲೀ, ಸುಖಕ್ಕಾಗಲೀ ಜೊತೆಗಿರುತ್ತಾನಮ್ಮ. ಹಾಗಂದ ಮಾತ್ರ ಇಂತಹ ಜವಾಬ್ದಾರಿಯನ್ನು ನನ್ನ ಮೇಲೆ ಹೊರಿಸುತ್ತೀಯಾ? ಆ ದಿನ ಎಂದಿಗೂ ಬರಬಾರದು. ನೀನು ತಾಯಿ. ಆ ಜವಾಬ್ದಾರಿಯನ್ನು ನೀನೇ ನಿರ್ವಹಿಸಬೇಕು ಭಾನೂ! ನಿನಗೇನಾದರೂ ಆದರೆ ನಿನ್ನಣ್ಣ ಏನಾಗುತ್ತಾನೆಂದು ಯೋಚಿಸು. ಕಣ್ಣೀರಿಗೂ ಕೂಡ ಕೊಂಚ ಬೆಲೆ ಇತ್ತು ನೀನು ಬದುಕಿರಬೇಕಮ್ಮ. ಯಾರಿಗೋಸ್ಕರವೂ ಅಲ್ಲ. ನಿನಗೋಸ್ಕರವೂ ಅಲ್ಲ, ನಿನ್ನ ಮಗುವಿಗೋಸ್ಕರ! ನೀನು ಆಕಾಂಕ್ಷಿಸುತ್ತಿರುವ ಅಭ್ಯುದಯಕ್ಕೋಸ್ಕರ? ನಿನ್ನಂತಹವರು ಎಲ್ಲವನ್ನೂ ಸಹನೆಯಿಂದ ಸಹಿಸಿ ಬದುಕಿದ್ದು ಕೆಲವು ಮಕ್ಕಳನ್ನು ಸಾಕಿ ಬೆಳೆಸಿದಂತೆ ಅಲ್ಲವೆ, ಎಂದಿಗಾದರೂ ಈ ಅನ್ಯಾಯ ಅಳಿಸುವುದೇ! ಅದನ್ನೇ ನಿನ್ನ ಧ್ಯೇಯವಾಗಿರಿಸಿಕೋ ಭಾನು! ಯಾವಾಗಲೂ ಹುಚ್ಚು ಹುಚ್ಚಾಗಿ ಯೋಚಿಸಬೇಡ."

"ಇಲ್ಲಣ್ಣಾ! ಎಷ್ಟು ದುಃಖವನ್ನಾದರೂ ಸಹಿಸಿ ನನ್ನ ಮಗುವನ್ನು ನಾನು ಕೈಯಾರೆ ಸಾಕಿ ಬೆಳೆಸುತ್ತೇನೆ" ಎನ್ನುತ್ತಾ ಭಾನು ತನ್ನ ಮಗುವಿನ ಕೆನ್ನೆಗೆ ತನ್ನ ಕೆನ್ನೆಯೊತ್ತಿದಳು.

ಎಂತಹ ಪರಿಸ್ಥಿತಿ ಬಂದರೂ ಭಾನು ಬದುಕಿರುತ್ತಾಳೆ. ಮಗನ ಮೇಲೆ ಭಾನುವಿಗೆ ಅಪಾರ ಅನುರಾಗ! ಪ್ರತಿ ತಾಯಿಯೂ, ಪ್ರತಿ ಮಕ್ಕಳನ್ನೂ ಅಷ್ಟು ಗಾಢವಾಗಿ

ಪ್ರೇಮಿಸುತ್ತಾಳೆನ್ನುವುದು ನಿಜವಲ್ಲದಿರಬಹುದು. ಭಾನು ಮಗನನ್ನು ಮಾತ್ರ ಹೃದಯದಿಂದ ಮಾತ್ರವಲ್ಲ, ಮುಂದಿನ ಪೀಳಿಗೆಗಳಿಗೆ ಬೆಳಕು ತೋರಿಸಿ ನಡೆಸುವಂತಹ ಒಬ್ಬ ಆದರ್ಶ ಮೂರ್ತಿಯನ್ನು ರೂಪಿಸಬೇಕೆನ್ನುವ ನಾರೀ ಹೃದಯದಿಂದ ವಿಶೇಷವಾಗಿ ಅಭಿಮಾನಿಸುತ್ತಾಳೆ. ಅಂತಹ ಸಂಕಲ್ಪವನ್ನು ಮಾಡಿಕೊಂಡಿರುವಂತಹ ಭಾನು ಎಂದೂ ಯಾವ ಅಪಾಯವನ್ನು ಮಾಡಿಕೊಳ್ಳಲಾರಳು. ಅದೇ ನನ್ನ ನಂಬಿಕೆ!

ಒಂದು ರೀತಿಯಲ್ಲಿ ಯೋಚಿಸಿದರೆ ಭಾನು ಮಾನಸಿಕ ಅನಾರೋಗ್ಯಕ್ಕೆ ಗುರಿಯಾದವಳು. ಏನೋ ಒಂದು ನೇರಾಲೋಚನೆ. ನೂರಕ್ಕೆ ನೂರು ಪಾಲೂ ನ್ಯಾಯ, ಅನ್ಯಾಯ ಎರಡೇ ಇರಬೇಕೆನ್ನುತ್ತಾಳೆ. ಆದರೆ ಆ ಯೋಚನೆಗಳು ಹಾಗೆ ಉಳಿದರೆ, ಆ ನಿರ್ಣಯಗಳು ವಿಫಲವಾದರೆ ಕುಗ್ಗಿ ಹೋಗುತ್ತಾಳೆ. ಧೈರ್ಯಗುಂದುತ್ತಾಳೆ. ತೀವ್ರತಮವಾದ ಅಭಿಪ್ರಾಯಗಳನ್ನು ಏರ್ಪಡಿಸಿಕೊಳ್ಳುತ್ತಾಳೆ. ಪರಿಸ್ಥಿತಿಗಳು ಪ್ರತಿರೋಧಿಸಿದರೆ ತಡೆಯಲಾರದಂತಾಗುವುದು ಬಲಹೀನತೆಯೇ ಅಲ್ಲವೇ? ಅಲ್ಲವೆನ್ನುತ್ತಾಳೆ. ವ್ಯಕ್ತಿತ್ವ ಬಲವಾಗಿರಬೇಕು ಎಂತಹ ಪರಿಸ್ಥಿತಿಯೇ ಬರಲಿ.. ವ್ಯಕ್ತಿ ನೀಚನಾಗಿ ಬದುಕಕೂಡದು. ಅಷ್ಟರಲ್ಲಿಯೇ ಅಂತ್ಯವಾಗುವ ವ್ಯಕ್ತಿತ್ವವನ್ನು ಕಾಪಾಡಿಕೊಳ್ಳಬೇಕು. ಭಾನು ಪರಿಸ್ಥಿತಿಗಳಿಗೆ ಶಿರಬಾಗಿಸಲಾರದ ದುರದೃಷ್ಟವಂತೆ! ಭಾನು ನನಗೊಂದು ಸಮಸ್ಯೆಯೇ ಆದಳು.

ಆ ಸಮಸ್ಯೆ ಹೇಗೆ ಪರಿಷ್ಕಾರವಾಗುತ್ತದೋ ಅದು ನನ್ನ ಊಹಾತೀತವಾದುದು. ಏನೋ ಯೋಚಿಸುತ್ತಿರುವಾಗ ಒಮ್ಮೆ ಏನೋ ಹೊಳೆಯಿತು. ಭಾನುವನ್ನು ಈ ಸುಖವಿಲ್ಲದ ಸಂಸಾರದಿಂದ ದೂರ ಕರೆದುಕೊಂಡು ಒಂದು ಯಾವುದಾದರೂ ತರಪೇತಿ (ಟ್ರೈನಿಂಗ್)ಗೆ ಸೇರಿಸಿದರೆ? ಯಾವುದಾದರೂ ಕೆಲಸಕ್ಕೆ ಸೇರಿಸಿದರೆ? ವ್ಯತ್ಯಾಸಗೊಳ್ಳದ ವ್ಯಕ್ತಿಗಳಿಗಾಗಿ ಎಷ್ಟು ದಿನ ಬಾಳನ್ನು ನರಕಮಾಡಿಕೊಳ್ಳುವುದು?

ಮತ್ತೆ ನಾಲ್ಕು ತಿಂಗಳು ತಡೆದರೆ ನನ್ನ ವಿದ್ಯಾಭ್ಯಾಸ ಪೂರ್ತಿಯಾಗುತ್ತದೆ. ಕೆಲಸವೂ ಸಿಗುತ್ತದೆ. ಆಗ ಭಾನುವಿಗೆ ಯಾವುದು ಇಷ್ಟವಾಗುತ್ತದೋ ಅದನ್ನು ಮಾಡಬಹುದು. ಆ ಊಹೆ ನನಗೆ ತುಂಬಾ ಮನಶ್ಶಾಂತಿಯನ್ನುಂಟು ಮಾಡಿತು.

* * *

ಭಾನುವನ್ನು ನೋಡಿ ಒಂದು ತಿಂಗಳಾಗಿತ್ತು. ಎಷ್ಟೋ ಸಾರಿ ಹೊರಡಬೇಕೆಂದುಕೊಂಡವನು ಕಾರ್ಯಕ್ರಮವನ್ನು ಸ್ಥಗಿತಗೊಳಿಸಿದ್ದೆ. ಏಕೋ ಹೋಗುವ ಮನಸ್ಸಾಗಲಿಲ್ಲ. ಒಂದು ವೇಳೆ ಹೋದರೆ ಏನಾದರೊಂದು ಹೊಸ ವಿಷಯವನ್ನು ಕೇಳಬೇಕಾಗುತ್ತದೆ. ಈ ಒಂದು ತಿಂಗಳ ಕಾಲಾವಧಿಯಲ್ಲಿ ಏನಾದರೂ ವಿಶೇಷ ನಡೆದಿಲ್ಲವೆಂದರೆ, ಭಾನುವಿನ ಸಂಸಾರದಲ್ಲಿ ಒಂದು ತಿಂಗಳು ಪ್ರಶಾಂತತೆ ನೆಲಸಿದ್ದಿತೆಂದರೆ ಸೂರ್ಯ ಪಶ್ಚಿಮದಲ್ಲಿ ಹುಟ್ಟಿದಷ್ಟು ಆಶ್ಚರ್ಯವಾಗುತ್ತಿತ್ತು. ಆದರೆ ಭಾನುವಿನಿಂದ ದೂರವಿರಲು ನನ್ನ ಮನಸ್ಸು ಅಂಗೀಕರಿಸಲಿಲ್ಲ. ಭಾನು ವ್ಯಥೆಪಡುತ್ತಾಳೆ. ಭಾನುವಿನ ಹತ್ತಿರವಿರುವ ಪುಸ್ತಕಗಳನ್ನು ಲೈಬ್ರರಿಗೆ ವಾಪಸ್ಸು ಮಾಡುವ ತಾರೀಖೂ ಮುಗಿದು ಹೋಗಿತ್ತು. ಸ್ನಾನ ಮಾಡಲೆಂದು ಸಿದ್ಧನಾಗುತ್ತಿದ್ದವನು ಬಟ್ಟೆ ಹಾಕಿಕೊಂಡು ಹೊರಟೆ.

"ಹುಂ! ತಿಂಗಳ ನಂತರ ನನ್ನ ನೆನಪು ಬಂತೇ?"

ಎಂದಳು ನಕ್ಕು.

"ನಿಜವಾಗಿಯೂ ಅವಕಾಶವಿಲ್ಲ ಭಾನೂ! ಪರೀಕ್ಷೆ ಹತ್ತಿರ ಬರುತ್ತಿದೆಯಲ್ಲ!"

ಎಂದೆ ಕುಳಿತುಕೊಳ್ಳುತ್ತಾ.

"ಎಲ್ಲಿ ನನ್ನಳಿಯ? ಎಲ್ಲಿ ಹೋಗಿದ್ದಾನೆ?"

"ಪಕ್ಕದ ಮನೆಯಲ್ಲಿ ಆಡಿಕೊಳ್ಳುತ್ತಿರಬಹುದು!"

"ಏನು ಸಮಾಚಾರ? ಭಾವ ಚೆನ್ನಾಗಿದ್ದಾರೆಯೇ?"

"ಇಬ್ಬರೂ ಚೆನ್ನಾಗಿದ್ದೇವೆ. ಮಾತು ಮಾತ್ರವಿಲ್ಲ!"

"ಚೆನ್ನಾಗಿದೆ, ಯಾವಾಗಿನಿಂದ?"

"ಮೊನ್ನೆ ಅಪ್ಪ ಕಾಗದ ಬರೆದಿದ್ದರು."

"ಏನು ವಿಷಯ?"

"ಒಂದು ದೊಡ್ಡ ವಿಶೇಷವೇ! ಅಜ್ಜಿ ಬದುಕಿದ್ದಾಗ ಯಾರಿಗೋ ಒಂದು ಸಾವಿರ ರೂಪಾಯಿಗಳನ್ನು ಬಡ್ಡಿಗೆ ಕೊಟ್ಟಿದ್ದಳಂತೆ, ಸಾಯುವಾಗ, ಅದನ್ನು ವಸೂಲ್ಮಾಡಿ ನನಗೆ ಕೊಡು ಎಂದು ಹೇಳಿದ್ದಳಂತೆ. ಅದು ನನಗೂ ಗೊತ್ತು. ನಾನಾಗ ಫಿಫ್ತ್ ಫಾರಂನಲ್ಲಿ ಓದುತ್ತಿದ್ದೆ. ಆಗ ಅಜ್ಜಿ ತೀರಿಕೊಂಡಳು. ನನಗೆ ಆಗ ಹದಿನೇಳು ವರ್ಷ. ನನಗೇಕೆ ಸಾವಿರ ರೂಪಾಯಿ ಎಂದು ಆಶ್ಚರ್ಯಗೊಂಡೆ. ಅಕ್ಕಂದಿರೆಲ್ಲ ನನ್ನನ್ನು ಹಾಸ್ಯ ಮಾಡುತ್ತಿದ್ದರು. ಆ ವಿಷಯವನ್ನು ನಾನು ಪೂರ್ತಿಯಾಗಿ ಮರೆತೇಬಿಟ್ಟಿದ್ದೆ. ಆ ಸಾಲ ತೆಗೆದುಕೊಂಡಿದ್ದವನು ಪೆಟ್ಟಿಗೆಯಲ್ಲಿಟ್ಟಿದ್ದ ಆಂಡಿಮ್ಯಾಂಡನ್ನು ನೋಡಿ ಬಡ್ಡಿ ಸಮೇತ ಎರಡು ಸಾವಿರ ರೂಪಾಯಿಗಳಾಗಿದ್ದುವೆಂದು ಹೇಳಿ ವಾಪಸ್ಸು ತಂದುಕೊಟ್ಟನಂತೆ. ಅದನ್ನೇನು ಮಾಡಬೇಕೆಂದು ಅಪ್ಪ ಕಾಗದ ಬರೆದರು. ಸರಿ ಈಗ ನನ್ನ ಹತ್ತಿರ ಎರಡು ಸಾವಿರ ರೂಪಾಯಿ ಇದೆಯಲ್ಲ! ನಿಮ್ಮ ಭಾವ ಪೂರ್ತಿಯಾಗಿ ಬದಲಾಗಿದ್ದರು."

"ಹೌದು."

"ಹೌದೋ, ಅಲ್ಲವೋ ನನಗೇನು ಗೊತ್ತು? ಆ ಕಾಗದ ನೋಡುತ್ತಿರುವಂತೆಯೇ ತುಂಬಾ ಬದಲಾಯಿಸಿದರು. ಅವರಲ್ಲಿ ಅಕಸ್ಮಾತ್ ಪರಿವರ್ತನೆಯುಂಟಾಯ್ತು. ಮಾಡಿದ ತಪ್ಪಿಗೆ ಪಶ್ಚಾತ್ತಾಪಪಟ್ಟರು. ಆ ಪಶ್ಚಾತ್ತಾಪದಿಂದ 'ದರಿದ್ರ' ಎಲೆಯಾಟವನ್ನು ಬಿಟ್ಟು ಬಿಟ್ಟರು. ಯಾವಾಗಲೂ ಮನೆಯಲ್ಲಿಯೇ ಇರುತ್ತಿದ್ದರು. ಅಮಿತಿ ಶಾಂತಿಯನ್ನೂ, ಒಳ್ಳೆಯತನವನ್ನೂ ಕಲಿತುಕೊಂಡರು. ಮಗುವನ್ನು ಮುಂದೆ ಕೂಡಿಸಿಕೊಂಡು ಆಟವಾಡಿಸಿಕೊಂಡರು. ಇನ್ನು ಪರಿವರ್ತನೆ ಸಾಕು ಎಂದುಕೊಂಡು ಒಂದು ದಿನ ಸಾಯಂಕಾಲ ನನ್ನನ್ನು ಹತ್ತಿರ ಕೂಡಿಸಿಕೊಂಡು ತಲೆ ಸವರಿದರು. ಆಹಾ! ಎಂತಹ ಪ್ರೇಮವನ್ನು ತೋರ್ಪಡಿಸಿದರು ಎನ್ನುತ್ತೀ? ನನ್ನ ಮದುವೆಯಾದಾಗಿನಿಂದ ಅಂತಹ ಪ್ರೇಮವನ್ನು ನಾನು ಕಂಡಿರಲಿಲ್ಲ. ಅದು ಪ್ರೇಮ ಚರಿತ್ರೆಗೇ ಒಂದು ನವ ಅಧ್ಯಾಯ!"

"ಭಾನೂ! ನಾನೂ ಪೂರ್ತಿಯಾಗಿ ಬದಲಾಯಿಸಿಕೊಂಡಿದ್ದೇನೆ. ನೀನು ನನ್ನನ್ನು ನಂಬುತ್ತೀಯಾ?" ಎಂದು ಕೇಳಿದರು.

"ನಂಬಿಕೆ ಏರ್ಪಡಲು ಈ ಅವಕಾಶ ಸಾಲದೇ?" ಎಂದೆ.

"ಭಾನೂ! ನನಗೆ ದುಡುಕು ಜಾಸ್ತಿ ಎಂದು ನಿನಗೆ ಗೊತ್ತಿಲ್ಲವೇ? ತಪ್ಪುಗಳನ್ನು ನೀನೇ ಕ್ಷಮಿಸದೆ ಹೋದರೆ ನನ್ನ ಗತಿ ಏನಾಗಬೇಕು?" ಎಂದು ಪ್ರಾರಂಭಿಸಿದರು. ನಾನು ಮಾತನಾಡದೆ ಸುಮ್ಮನಿದ್ದೆ.

"ಭಾನೂ! ನಾನೊಂದು ವಿಷಯ ಹೇಳುತ್ತೇನೆ. ನನ್ನನ್ನು ತಪ್ಪು ತಿಳಿದುಕೊಳ್ಳಬೇಡ. ಭಾನೂ! ನನ್ನ ಕಷ್ಟ ಸುಖಗಳಿಗೆ ನೀನು ನೆರವಾಗದೆ ಇನ್ಯಾರಾಗಬೇಕು. ಈ ಸಂಸಾರದ ಜವಾಬ್ದಾರಿ ನಮ್ಮಿಬ್ಬರದೂ ಅಲ್ಲವೇ? ವಾಸ್ತವವಾಗಿ ನಾನು ಸ್ವಲ್ಪ ಹಣ ವೃಥಾ ಹಾಳು ಮಾಡಿದೆ, ಒಪ್ಪಿಕೊಳ್ಳುತ್ತೇನೆ. ನಡೆದು ಹೋದದ್ದು ಮರೆತುಬಿಡು. ಈಗ... ನನಗೆ ಸಾವಿರ ರೂಪಾಯಿಯ ಮೇಲೆ ಸಾಲವಿದೆ. ಹೇಗೆ ತೀರಿಸಲಿ ಭಾನೂ!"

"ಸಾ... ವಿ....ರದ... ಮೇಲೆ?" ಆಶ್ಚರ್ಯಗೊಂಡು ಕೇಳಿದೆ. ಏಕೆಂದರೆ ಭಾನು ನಿರ್ವಿಕಾರವಾಗಿ ಹೇಳುತ್ತಿದ್ದಳು.

"ನನಗೆ ಆಶ್ಚರ್ಯವಾಗಲಿಲ್ಲ ಕೇಶೂ. ಸಾವಿರದ ಸುತ್ತ ಮಾತ್ರವೇನು? ಎಂದು ನನಗೆ ಆಶ್ಚರ್ಯವಾಯ್ತು. ಒಬ್ಬ ಸಾಮಾನ್ಯ ಗುಮಾಸ್ತ ಸದಾ ಕ್ಲಬ್ಬಿನಲ್ಲಿಯೇ ಕಾಲ ಕಳೆಯುತ್ತಾನೆಂದರೆ ಅವನಿಗೆ ಆ ಯೋಗ್ಯತೆ ಎಲ್ಲಿಂದ ಬರುತ್ತದೆ? ಹೇಗೆ ಬರುತ್ತದೆ ಎನ್ನುತ್ತಿ? ಹಾಗೆಯೇ ಎಷ್ಟು ಊರು ಸುತ್ತಾಡಿ ಬಂದರೆನ್ನುತ್ತೀ? ಅಗತ್ಯವಿಲ್ಲದಿದ್ದರೂ ಸುಮ್ಮಸುಮ್ಮನೆ ಅರ್ಜಿಗಳನ್ನು ಹಾಕುವುದು– ಅವರು ಟಿ.ಎ. ಕೊಡತ್ತಾರೆಂದು ಮತ್ತೊಂದು ಐವತ್ತೋ ನೂರೋ ಸಾಲ ಮಾಡಿಕೊಂಡು ಹೋಗುವುದು!

"ಈ ಸಾಲ ಸೋಲಗಳನ್ನಾದರೂ ಮಾಡಿಕೊಂಡು ಊರೂರು ತಿರಗುವುದು ಏಕೆ? ಈ ಸಾಲ ತೀರಿಸುವ ಯೋಗ್ಯತೆ ನಮಗಿದೆಯಾ?" ಎಂದರೆ

"ಈ ರೀತಿಯಲ್ಲಲ್ಲವಾದರೆ ಮತ್ತಾವ ರೀತಿಯಲ್ಲೂ ದೇಶಗಳನ್ನು ನೋಡಲಾಗುವುದಿಲ್ಲ. ಸಾಲ ತಾನೇ ತೀರುತ್ತದೆ ಬಿಡೆ!" ಎನ್ನುತ್ತಿದ್ದರು.

"ಆ ದೇಶವನ್ನು ನೋಡಬೇಕೆನ್ನುವ ಆಸೆ ನನಗಿಲ್ಲವೆ? ನಿನ್ನ ಸ್ವಾರ್ಥವನ್ನು ನೀನು ನೋಡಿಕೊಂಡರೆ ನನಗ್ಯಾರು ದಿಕ್ಕು? ಹತ್ತು ಊರುಗಳನ್ನು ನೀನು ಸುತ್ತುವ ಬದಲು ಮುಖ್ಯವಾದ, ಪ್ರೇಕ್ಷಣೀಯವಾದ ಎರಡು ಮೂರು ಊರುಗಳಿಗಾದರೂ ನನ್ನನ್ನು ಕರೆದುಕೊಂಡು ಹೋಗಬಾರದೆ?"

"ಸಿಮ್ಲಾದಲ್ಲಿ ಇಂಟರ್‌ವ್ಯೂ ಬಂದಾಗ ಇನ್ನೂರು ರೂಪಾಯಿ ಸಾಲ ಮಾಡಿಕೊಂಡು ಹೊರಟರು. ಕಾಶ್ಮೀರವನ್ನು ನೋಡಬೇಕೆಂದು ನನಗೂ ಇಷ್ಟವಿತ್ತು. ಬಾಳಿನಲ್ಲಿ ಒಮ್ಮೆಯಾದರೂ ತಾಜಮಹಲನ್ನು ನೋಡಬೇಕೆನ್ನುತ್ತಾರೆ. ಕೊನೆಗೆ ಅಲ್ಲಿಗಾದರೂ ನನ್ನನ್ನು ಕರೆದುಕೊಂಡು ಹೋಗಿದ್ದರೆ ... ನನಗೆ ಗಂಡನಲ್ಲದೆ ಇನ್ಯಾರು ಇದನ್ನೆಲ್ಲಾ ತೋರಿಸುತ್ತಾರೆ?

ನನಗೋಸ್ಕರ ಪ್ರತ್ಯೇಕವಾಗಿ ಹೊರಡಿ ಎಂದು ಹೇಳಲಿಲ್ಲವಲ್ಲ! ಹೇಗೂ ಹೋಗುತ್ತಿದ್ದಾರಲ್ಲ ಎಂದು ಕೇಳಿದೆ. ಅದಕ್ಕೇನುತ್ತರ ಬಂತು ಎಂದು ಹೇಳುವುದು ಅನಗತ್ಯ. ನೀನು ಸಾವಿರದ ಹತ್ತಿರ ಸಾಲವಾಗಿದೆಯೆ? ಎಂದು ಕೇಳಿದೆಯಲ್ಲ ಅದಕ್ಕೆ ಹೇಳಿದೆ.''

''ಸರಿ! ನಿನ್ನನ್ನು ಹಣ ಕೇಳಿದರೇ?''

''ಪೂರ್ತಿ ಕೇಳು!''

''ನನಗೇನು ತೋಚುತ್ತಿಲ್ಲ ಭಾನೂ! ನೆನಸಿಕೊಂಡರೆ ಎದೆಯೊಡೆಯುತ್ತದೆ. ಈ ಕೊರಗಿನಿಂದ ನನ್ನ ಆರೋಗ್ಯವು ಕೆಡುತ್ತಿದೆ. ಏನು ಮಾಡಲಿ ಹೇಳು.''

ಎಂದು ಲೌಕಿಕ ವ್ಯವಹಾರಕ್ಕೆ ಬಂದರು.

''ಎಂತಹ ವಿಚಿತ್ರ ಪರಿವರ್ತನೆ? ಹಣಕ್ಕಾಗಿ ಮನಷ್ಯ ಎಂತಹ ಹೀನಸ್ಥಿತಿಗೆ ಬೇಕಾದರೂ ಇಳಿಯಬಲ್ಲ! ಎಂತಹ ನೀಚ ಕಾರ್ಯಕ್ಕೂ ಹಿಂದೆಗೆಯುವುದಿಲ್ಲ! ಎಲ್ಲಕ್ಕೂ ಮಿಗಿಲಾಗಿ ಮತ್ತೊಬ್ಬನನ್ನು ಹತ್ತಿಗಿಂತ ಹಗುರ ಮಾಡಿ ನೋಡುವುದು ಮತ್ತೂ ವಿಚಿತ್ರ. ಹಣ ಒಂದಿದ್ದರೆ ಏನಾದರೂ ಮಾಡಬಹುದು. ಅದಕ್ಕೇ ದಾಸರು ಹಣದ ಗುಣವನ್ನು, 'ಹಣವೇ ನಿನ್ನಯ ಗುಣ ಎಷ್ಟು ವರ್ಣಿಸಲಿ! ಹಣವಿಲ್ಲದವನೊಬ್ಬ ಹೆಣವೇ ಸರಿ!' ಎಂದು ಹಾಡಿದ್ದು.''

''ಆಮೇಲೆ?''

''ಆಮೇಲೆ?....''

''ಏನು ಯೋಚಿಸುತ್ತಿದ್ದೀ? ಏನು ಮಾಡಲಿ ಹೇಳು ಭಾನು?''

''ನನ್ನನ್ನು ಕೇಳುವ ಅಗತ್ಯವೇನಿದೆ? ನೀವು ಸಾಲ ಮಾಡುವಾಗ ಒಂದು ರೂಪಾಯಿ ಸಾಲಕ್ಕಾದರೂ ನನ್ನ ಸಲಹೆ ಕೇಳಿದಿರಾ? ಹಾಗೇ ಅದನ್ನು ತೀರಿಸಬೇಕಾದಾಗಲೂ ನನ್ನ ಸಲಹೆಯ ಅಗತ್ಯವೇನು?''

''ಹಾಗೆ ಹೇಳಬೇಡ ಭಾನು! ಈಗ ಎಷ್ಟು ವಾದಿಸಿದರೂ ಸಾಲ ತೀರಿಸಬೇಕಲ್ಲವೆ? ನನ್ನ ಹತ್ತಿರ ಅಷ್ಟು ಹಣವಿದೆಯೆ?''

''ಸರಿ! ನಿಮ್ಮ ಹತ್ತಿರ ಹಣ ಯಾವಾಗ ಬಂದಿರುತ್ತದೆ ಹೇಳಿ? ತೀರಿಸುವ ಧೈರ್ಯವಿಲ್ಲದೆ ಹೇಗೆ ಸಾಲ ಮಾಡಿದಿರಿ?''

''ಆಗ ಅಷ್ಟು ಯೋಚಿಸದ ಅವಿವೇಕಿಯಾಗಿದ್ದೆ!''

''ಮನೆಯಲ್ಲಿ ಮಿತಿ ಮೀರಿದ ಖರ್ಚಿದೆ ಎಂದು ಅಷ್ಟು ಸಾಲವಾಯ್ತೆ? ನೋಡಿ ನನಗೆ ನಮ್ಮ ತಂದೆಯ ಮನೆಯವರೇ ಬಟ್ಟೆ ಬರೆಗಳನ್ನು ಕೊಂಡುಕೊಡುತ್ತಿದ್ದಾರೆ. ಮನೆಯಲ್ಲಿ ಕೆಲಸದವಳೂ ಬೇಡವೆಂದೂ ಎಲ್ಲ ಕೆಲಸಗಳನ್ನೂ ನಾನೇ ಮಾಡಿಕೊಳ್ಳುತ್ತಿದ್ದೇನೆ. ಸಿನಿಮಾ, ನಾಟಕ, ನೋಟ ನುಡಿಗೆಗಳನ್ನು ಎಂದೋ ತ್ಯಜಿಸಿದೆ. ತಿಂಗಳು ತಿಂಗಳಿಗೂ ನೂರೈವತ್ತು ರೂಪಾಯಿ ಬರುವಾಗ...?

''ನೋಡು ಭಾನು! ಅದೆಲ್ಲಾ ಅಂದೇನುಪಯೋಗ? ಈಗ ನೀನು ಏನು ಹೇಳಿದರೇನುಪಯೋಗ? ನನ್ನ ಕಷ್ಟ ಸುಖಗಳ ಅವಶ್ಯಕತೆ ನಿನಗಿಲ್ಲವೆ? ಈ ಸಂಸಾರದ

ಜವಾಬ್ದಾರಿ ನಿನಗೂ ಇಲ್ಲವೇ?''

ನನಗೆ ಆಗ ಏನೇನೋ ವಿಷಯಗಳು ನೆನಪಿಗೆ ಬಂದುವು. ಆಕ್ರೋಶ ಉಕ್ಕಿ ಬಂತು, ಏನು ಮಾಡಿದರೂ ತಡೆಯದಾದೆ.

''ಹುಂ! ಕಷ್ಟ-ಸುಖಗಳು! ದಿನ ತುಂಬಿದ ಗರ್ಭಿಣಿ - ಸುಡುತ್ತಿದ್ದ ಜ್ವರದಿಂದ ನರಳುತ್ತಿದ್ದಾಗ ಒಂದು ಸೋಡಾ ಕುಡಿಯಬೇಕೆಂದೂ ಒಂದಾಣೆಗೆ ಗತಿ ಇಲ್ಲದೆ ಗೋಳಾಡಿದೆನಲ್ಲ! ಅದು ನಿಮಗೆ ಗೊತ್ತೇ? ಕಾಲು ಉಳುಕಿದಾಗ ನಿಮಗೆ ಸ್ನಾನಕ್ಕೆ ನೀರು ತೋಡಲಿಲ್ಲವೆಂದು ಕೆನ್ನೆಯೂದಿಸಿದಿರಲ್ಲ! ಅದು ನೆನಪಿದೆಯಾ? ನಾನು ಇಷ್ಟಪಟ್ಟು ಅಗರುಬತ್ತಿಯ ಕಂಬಗಳನ್ನು ಕೊಂಡುಕೊಂಡರೆ, ನಿನಗ್ಯಾರು ಯಜಮಾನಿಕೆ ಕೊಟ್ಟರು! ಎಂದಿರಿ ಅದನ್ನಾಗಲೇ ಮರೆತುಬಿಟ್ಟಿರಾ? ಪಕ್ಕದ ಮನೆ ಅಜ್ಜಿಗೆ ಬಾಳೆಲೆ ಕುಯ್ದು ಕೊಟ್ಟಿದ್ದಕ್ಕೆ ಬಾಯಿಗೆ ಬಂದಂತೆ ಬೈದು ನನ್ನನ್ನು ಕಣ್ಣೀರಿನಲ್ಲಿ ಕೈತೊಳಿಸಿದಿರಲ್ಲ! ನೆನಪಿಲ್ಲವೇ? ಹೀಗೆ ಇನ್ನೆಷ್ಟು 'ಸುಖ'ಗಳನ್ನು ಹೇಳು ಎನ್ನುತ್ತೀರಿ? ಈ ಸಂಸಾರದಲ್ಲಿ ನಾನೆಷ್ಟು ಸುಖವನ್ನು ಅನುಭವಿಸಿದೆನೋ, ಅನುಭವಿಸುತ್ತಿದ್ದೇನೋ, ಅದು ನನ್ನ ಅಂತರಾತ್ಮಕ್ಕೂ ಭಗವಂತನಿಗೂ ಗೊತ್ತು. ಎಂದೂ ಇಲ್ಲದ ಕಷ್ಟಸುಖಗಳೂ, ಸಂಸಾರದ ಜವಾಬ್ದಾರಿ ಇದ್ದಕ್ಕಿದ್ದಂತೆ ಇಂದು ಹೇಗೆ ಬಂತು? ಏಕೆ ಬಂತು? ಎಷ್ಟು ಕಾಲವಿರುತ್ತದೆ? ಎಂದಾದರೂ ಏನು ಹೇಳಿದರೂ ಅಲಕ್ಷಿಸಿ, ಏನನ್ನೂ ಕಿವಿಗೆ ಹಾಕಿಕೊಳ್ಳದೆ, ನನ್ನನ್ನು ಕಾಲ ಕಸಕ್ಕಿಂತಲೂ ಕಡೆಗಣಿಸಿದಿರಿ. ಮರೆತು ಹೋದಿರಾ? ನೀವು ಏನು ಬೇಕಾದರೂ ಹೇಳಿ - ಹೇಳುವುದನ್ನು ಬಿಡಿ - ಅನವಶ್ಯಕ. ಬರೀ ಕಂಠ ಶೋಷಣೆ! ಅರಣ್ಯರೋದನ! ನನ್ನ ಹತ್ತಿರ ಬಿಡಿಗಾಸಿಲ್ಲ. ನನ್ನ ಶರೀರದಲ್ಲಿ ಪ್ರಾಣವಿರುವವರೆಗೂ ಆ ಹಣವನ್ನು ನಿಮಗೆ ಕೊಡುವುದಿಲ್ಲ. ನನ್ನ ಅನಂತರವೂ ಕೂಡ ನಿಮ್ಮ ಕೈಗೆ ಸಿಕ್ಕಿಸುವುದಿಲ್ಲ. ಇಷ್ಟೇ ನಾನು ಹೇಳುವುದು!'' ಎಂದೆ.

ಅವರು ಬಹಳ ಹೊತ್ತು ಮೌನವಾಗಿಯೇ ಕುಳಿತಿದ್ದರು. ನಂತರ,

''ಭಾನೂ! ನಿಜವಾಗಿ ನಾನು ಬಹಳ ತಪ್ಪು ಮಾಡಿದೆ. ಈಗ ಯೋಚಿಸಿದರೆ ನನಗೆ ನಿಜವೆನ್ನಿಸುತ್ತದೆ. ನನ್ನನ್ನು ಕ್ಷಮಿಸುವುದಿಲ್ಲವೆ?''

''ತಪ್ಪು, ಕ್ಷಮೆ ಎಂದರೆ ನನಗೂ ಅಸಹ್ಯವೇನೇ!''

''ಭಾನೂ! ನಿನ್ನಿಷ್ಟ ಬಂದಂತೆ ಹೇಳು - ಆದರೆ ನನ್ನನ್ನು ಕ್ಷಮಿಸು ಭಾನು! ನಾನು ಕೋಪದಲ್ಲಿ ಅಂದ ಮಾತುಗಳನ್ನು ಮರೆತು ಬಿಡು. ನನಗಾಗಿ ..''

''ಇಷ್ಟು ಬೇಗ ಬಂದ ಪರಿವರ್ತನೆ ಅಷ್ಟು ಬೇಗ ಹೋಗುತ್ತದೆ. ಬುನಾದಿಯ ಬಲ ಅಗತ್ಯವಲ್ಲವೆ?''

''ಬದಲಾಯಿಸಿದರೂ ನಂಬುವುದಿಲ್ಲವೆನ್ನುತ್ತೀ... ನಿನ್ನ ಮೇಲೆ ನನಗೆ ಪ್ರೇಮವಿಲ್ಲವೆಂದು ಕೊಂಡಿದ್ದೀಯಲ್ಲವೆ? ಅದೆಲ್ಲಾ ನಿನ್ನ ಭ್ರಮೆ ಭಾನೂ!''

''ಭ್ರಮಿಸುತ್ತಿರುವುದು ನಾನಲ್ಲ, ನೀವು! ಇನ್ನೂ ನನ್ನನ್ನು ನಂಬಲೆತ್ನಿಸುತ್ತಿರುವವರು ನೀವು ಭ್ರಮಿಸುತ್ತಿದ್ದೀರಿ!''

"ಭಾನು ಒಂದು ಮಾತು ಹೇಳು – ನಿನ್ನನ್ನು ನಾನೇ ಇಷ್ಟಪಟ್ಟು ಮದುವೆಯಾದೆನೋ? ಅಥವಾ ಯಾರೊಬ್ಬರ ಬಲವಂತಕ್ಕಾದರೂ ಮಾಡಿಕೊಂಡೆನೋ?"

"ಹೆಂಡತಿ ಎನ್ನುವ ಒಂದು ಹೆಣ್ಣೀರಬೇಕೆಂದು ಕಣ್ಣಿಗೆ ಅಂದವಾಗಿ ಕಂಡೆನೆಂದೇ ಅಂಗೀಕರಿಸಿದಿರಿ. ಆದರೆ ಮದುವೆಯಾದವರೆಲ್ಲಾ ಪ್ರೇಮಿಸುತ್ತಾರೆನ್ನುವ ನಂಬಿಕೆ ಇಲ್ಲವಲ್ಲ?"

"ಏನೋ ಭಾನು! ಇಷ್ಟು ದಿನ ನೀನು ತುಂಬಾ ಒಳ್ಳೆಯವಳಾಗಿದ್ದಿ. ಏಕೋ ತುಂಬಾ ಬದಲಾಗುತ್ತಿದ್ದೀ."

"ಅದೇ ಅಗತ್ಯವಾಗುತ್ತಿದೆ. ನೀವು ಹೇಳಿದ್ದೆಲ್ಲಾ ನಿಜವೆಂದೂ, ಮಾಡಿದ್ದೆಲ್ಲಾ ಒಳ್ಳೆಯ ದೆಂದೂ ನಂಬಿದಷ್ಟು ದಿನವೂ, ಕಣ್ತೆರೆದು ನೋಡದಷ್ಟು ದಿನವೂ, ಅನುಮಾನಿಸುವುದನ್ನೇ ಅರಿಯದಷ್ಟು ದಿನವೂ, ಒಳ್ಳೆಯವಳಾಗಿ, ತುಂಬಾ ಒಳ್ಳೆಯಾವಳಾಗಿಯೇ ಇದ್ದೆ. ಆದರೆ ... ಇನ್ನು ನೀವು ಮಾಡುವಂಥದೇನೂ ಇಲ್ಲ. ನನ್ನನ್ನು ಸುಖಪಡಿಸಲೂ ಅರಿಯಿರಿ, ದುಃಖಪಡಿ ಸಲೂ ಅರಿಯಿರಿ. ನಾನು ಯಾವುದಕ್ಕಾದರೂ ಸಿದ್ಧವಾಗಿದ್ದೇನೆ. ಕನ್ನಡಿ ಕೈ ಜಾರಿ ಒಡೆದರೆ ಮತ್ತೆ ಅದು ಎಂದಿಗೂ ಒಂದಾಗದು! ಕನ್ನಡಿಗಿಂತಲೂ ಸೂಕ್ಷ್ಮವಾದ ಮನಸ್ಸು ಮುರಿದರೆ ಅದೆಂದಿಗೂ ಸರಿಹೋಗದು!" ಎಂದೆ. ಕೊಂಚ ಹೊತ್ತು ಮೌನದಿಂದಿದ್ದು ನಂತರ,

"ಸರಿ ಭಾನೂ! ನಿನ್ನ ದಯ ನನ್ನ ಪುಣ್ಯ! ನಾನೇನೂ ಮಾಡಲಾರೆ. ಎಂದಿಗಾದರೂ ನಿನ್ನ ಮನಸ್ಸನ್ನು ಸರಿಪಡಿಸುವಂತಾದರೆ ಅದೃಷ್ಟವಂತ!" ಅದು ಕೊನೆಯ ಅಸ್ತ್ರ!

ನನಗೆ ಬೇಸರವಾಯ್ತು. ಎಂತಹ ಪರಿಸ್ಥಿತಿಯೇ ಆಗಲಿ, ಒಬ್ಬ ವ್ಯಕ್ತಿ ತನ್ನನ್ನು ತಾನು ಕೊಲೆ ಮಾಡಿಕೊಳ್ಳುವುದೇ?

"ನೀವು ದಯವಿಟ್ಟು ಅಷ್ಟು ಕೀಳಾಗಿಸಿಕೊಳ್ಳಬೇಡಿ. ಹೆಣ್ಣನ್ನು ಪೋಷಿಸಿ, ಹೆಣ್ಣನ್ನು ರಕ್ಷಿಸಿ, ಹೆಣ್ಣನ್ನು ಪಾಲಿಸುವಂತಹ ಗಂಡಸು ಒಂದು ಹೆಣ್ಣನ್ನು ಇಷ್ಟು ಬೇಡಿಕೊಳ್ಳುವುದೇ? ನಾನು ನಿಮ್ಮ ಹೆಂಡತಿಯೇ ಆಗಿರಬಹುದು. ಆದರೆ ನಾನೂ ಹೆಣ್ಣು! ನಿಮ್ಮ ವ್ಯಕ್ತಿತ್ವವನ್ನು ನೀವು ಕಾಪಾಡಿಕೊಳ್ಳಬೇಕೆಂಬುದೇ ನನ್ನ ಕೋರಿಕೆ!"

ನನ್ನ ಮಾತು ಕೇಳುತ್ತಿದ್ದಂತೆ ಅವರ ಮುಖದ ಭಾವನೆಗಳು ಕ್ರಮಕ್ರಮವಾಗಿ ಬದಲಾಗುತ್ತಿದ್ದವು. ಅಡಗಿಸಿಕೊಂಡಿದ್ದ ಕೋಪ, ಅಭಿನಯಿಸಿದ ಶಾಂತಿ, ಭಂಗಗೊಂಡ ಅಭಿಮಾನ, ಉಕ್ಕಿ ಬಂದ ಆವೇಶ – ಎಲ್ಲವೂ ಒಂದಾಗಿ ಸ್ಫೋಟಿಸಲುದ್ಯುಕ್ತವಾಗಿದ್ದವು.

"ಹುಂ! ಈಗ ಆ ದುಡ್ಡು ಏನು ಮಾಡುತ್ತೀ?" ಗಾಂಭೀರ್ಯದಿಂದ ಬಂತು ಪ್ರಶ್ನೆ.

"ಏನೋ ಮಾಡುತ್ತೇನೆ. ಏನೂ ಮಾಡಲಾಗದಾಗ ದಾರಿಯಲ್ಲಿ ಹೋಗುವ ದಾಸಯ್ಯನಿಗೆ ದಾನ ಮಾಡುತ್ತೇನಾಗಲೀ ನಿಮಗೆ ಮಾತ್ರ..."

ಮಾತು ಮುಗಿಯುವಷ್ಟರಲ್ಲಿ ನನ್ನ ಕೆನ್ನೆ ಛಟೀರ್ ಎಂದಿತು. ಕಣ್ಣು ಕತ್ತಲಾಯ್ತು. ವಾಲಿ ಕೆಳಗೆ ಬಿದ್ದೆ.

"ಡರ್ಟಿ ಕ್ರೀಚರ್! ಎಷ್ಟು ಅಹಂಕಾರ! ಕಟ್ಟಿಕೊಂಡ ಗಂಡ ಕಾಲಿಗೆ ಬಿದ್ದು ಬೇಡಿಕೊಂಡರೆ ನೀತಿ ಹೇಳುವಿಯಾ? ದುಡ್ಡು ದಾನ ಮಾಡ್ತೀಯಾ? ನೋಡುತ್ತೇನೆ. ಆ ದುಡ್ಡು ನನ್ನ ಕೈಗೆ ಹೇಗೆ ಬರುವುದಿಲ್ಲವೋ ನಾನು ನೋಡುತ್ತೇನೆ."

"ಇದೇನೇ ನಿಮ್ಮಲ್ಲಾದ ಪರಿವರ್ತನೆ!"

"ಮುಚ್ಚು ಬಾಯಿ! ನೀನು ನನ್ನನ್ನು ಆಜ್ಞಾಪಿಸುತ್ತೀಯಾ?"

"ಇಲ್ಲ ನೀವು ತುಂಬಾ ಬದಲಾಯಿದ್ದೀನೆ, ನನ್ನನ್ನು ಪ್ರೇಮಿಸಿದ್ದೇನೆ ಎಂದರೆ ಹೌದೋ ಅಲ್ಲವೋ ಎಂದು ತಿಳಿದುಕೊಂಡೆ!"

"ಅಗತ್ಯವಿಲ್ಲ. ಆ ಅವಕಾಶವನ್ನು ನೀನು ಹಾಳುಮಾಡಿಕೊಂಡೆ. ನಾನು ಎಲ್ಲ ರೀತಿಯಿಂದಲೂ ಬದಲಾಯಿಸಿ ಹೋಗೋಣವೆಂದುಕೊಂಡೆ. ಆದರೆ ನೀನದಕ್ಕೆ ಕುರುಡು ಕಾಸಿನ ಬೆಲೆಯೂ ಇಲ್ಲದಂತೆ ಮಾಡಿಬಿಟ್ಟೆ. ನಿನಗೀಗ ಬುದ್ಧಿ ಬರುವುದಿಲ್ಲ ಕಣೆ! ನಾನು ಇನ್ನೂ ಮತ್ತೂ ನಾಶವಾಗಿ ಕುಡಿದು ಕುಣಿದಾಡಿ ಯಾವಳನ್ನಾದರೂ ಜೊತೆ ಹಾಕಿಕೊಂಡು ಬಂದರೆ ಆಗ..."

"ಎಷ್ಟು ಅರ್ಥವಿಲ್ಲದ ಮಾತನಾಡುತ್ತಿದ್ದೀರಿ? ನನ್ನ ಮೇಲಿನ ಕೋಪದಿಂದ ನಿಮ್ಮನ್ನು ನೀವು ನಾಶ ಮಾಡಿಕೊಳ್ಳುತ್ತೀರಾ? ಆಜ್ಞಾಪಿಸಿ ಕ್ಷಮೆ ಸಂಪಾದಿಸುತ್ತೀರಾ? ಒಬ್ಬ ವ್ಯಕ್ತಿ ಗುಣವಂತನಾಗಿರುವುದು ಮತ್ತೊಬ್ಬರಿಗಾಗೇ? ಯಾವಳೋ ಒಬ್ಬ ಅತ್ತೆ ಸೊಸೆಯನ್ನು ಶಿಕ್ಷಿಸಲೆಂದು ಸೊಸೆಯ ಗಂಡನನ್ನೇ ಕೊಂದು, ಆಮೇಲೆ ತನ್ನ ಮಗ ಸತ್ತ ಎಂದು ಅತ್ತಳಂತೆ. ಹಾಗಾಯ್ತು ನಿಮ್ಮ ವಿಷಯ."

"ಛೀ! ನಿನ್ನ ಜೊತೆ ನನಗೇನು ಮಾತು? ನೀನೂ ಸಂಸಾರಿಯೆ? ಕಟ್ಟಿಕೊಂಡ ಗಂಡ ಮುಂಡೇಮಗ ಸಾಲಗಾರರ ಪಾಲಾಗಿ ಚಿಂತಿಸಿ ಸಾಯುತ್ತಿದ್ದರೆ ಒಡವೆಗಳನ್ನಲಂಕರಿಸಿ ಕೊಂಡು ಮೆರೆಯುತ್ತೀಯಾ? ಸಾಲಗಾರರೆಲ್ಲಾ ಸೇರಿ ನಿನ್ನ ಗಂಡನನ್ನು ಬಂದೀಖಾನೆಗೆ ತಳ್ಳಿದರೆ ನೀನು ರೂಪಾಯಿಯನ್ನೇ ಹಾಸಿಕೊಂಡು ಮಲಗುತ್ತೀಯಾ? ನಿನಗೀಗ ಬುದ್ಧಿ ಬರದು. ಆ ದಿನ... ಒಂದು ದಿನ..."

"ಹೇಳುವುದೇನಿದೆ? ಮೊದಲೇ ಕೋತಿ! ಕಳ್ಳುಕುಡಿದಿದೆ! ಬೆಂಕಿ ತುಳಿದಿದೆ! ಚೇಳೂ ಕಚ್ಚಿದೆ! ಕುಣಿಯದೇ?"

"ಹಣವನ್ನು ಬ್ಯಾಂಕಿನಲ್ಲಿ ಹಾಕಿ, ಮಗುವಿನ ವಿದ್ಯಾಭ್ಯಾಸಕ್ಕಾಗುತ್ತದೆ" ಎಂದು ನಮ್ಮ ತಂದೆಗೆ ಕಾಗದ ಬರೆದೆ – ಆದರೆ ಕಾಗದ ಬರೆದು ಎಷ್ಟು ಅತ್ತೆನೋ ಗೊತ್ತೇ?

"ಆ ಹಣಕ್ಕಿಂತ ನನ್ನ ಗಂಡನ ಬೆಲೆ ತುಂಬಾ ಕಡಿಮೆ. ಆ ಮನಷ್ಯ ಸಾಲದ ಪಾಲಾಗಿದ್ದರೂ, ಲಜ್ಜೆ ಬಿಟ್ಟು ಬೇಡಿಕೊಂಡರೂ ಅವರ ಬೇಡಿಕೆಯನ್ನು ತೀರಿಸಲಾರೆನೆಂದರೆ ಆ ಹಣಕ್ಕಾಗಿ ಆತನನ್ನೇ ತಿರಸ್ಕರಿಸಿದೆನೆಂದರೆ, ಕಾರಣವೆಷ್ಟು ಬಲೀಯವಾದುದಿರಬೇಕು? ಈ ಸಂಸಾರ ಸಕ್ರಮವಾಗಿ ಸಾಗಿದಂದು ಆ ಹಣವನ್ನು ನಾನು ಲಕ್ಷಿಸುತ್ತೇನೆಯೇ? ಕಣ್ಣೆತ್ತಿಯಾದರೂ ನೋಡುತ್ತೇನೆಯೆ? ಈ ಸುಸಾರದಲ್ಲಿ ಅನುರಾಗಬಂಧವೇರ್ಪಟ್ಟಂದು ಅವರವರ ಕಷ್ಟ ಸುಖಗಳು ಅವರವರದಾಗುತ್ತದೆಯೆ? ತಂದೆ ಸಮರ್ಥನಾದಂದು ಮಗನ ವಿದ್ಯಾಭ್ಯಾಸಕ್ಕೆ ತಾಯಿ ತಾಪತ್ರಯಪಡುವ ಅವಶ್ಯಕವೇನು? ದೇವರೇ! ಈ ವ್ಯಥೆಗೆ ಅಂತ್ಯವಿಲ್ಲವೆ? ಈ ಕಣ್ಣೀರಿಗೆ ಬೆಲೆಯೇ ಇಲ್ಲವೇ? ಎಂದು ಅತ್ತೆ. ಅದು ಈ ನಡುವೆ ನಡೆದ ವಿಶೇಷ. ನಿಮ್ಮ ಭಾವ ನನ್ನ ಕೈಲಿ ಮಾತನಾಡಿ ಮೂರು ದಿನವಾಯ್ತು."

ಎಂದು ಹೇಳಿ ನಿಡಿದಾದ ಉಸಿರೊಂದೆಳೆದಳು ಭಾನು.

"ಚೆನ್ನಾಗಿದೆಯಮ್ಮ! ಇಂಥದೇನಾದರೂ ಕೇಳಿ ವ್ಯಥೆಯನುಭವಿಸಬೇಕಾಗುತ್ತದೆಂದೇ ನನಗೆ ಭಯ ಭಾನು. ಹೋಗಲಿ, ಭಾವ ಬದಲಾಯಿಸುತ್ತೇನೆಂದಾಗ ನೀನೇಕೆ ಸಾಲ ತೀರಿಸಬಾರದಾಗಿತ್ತು?"

– ಎಂದೆ.

"ನಿನಗೇನು ಬುದ್ಧಿಯಿಲ್ಲವೇ? ಹಣಕ್ಕಾಗಿ ಬದಲಾಯಿಸುವ ವ್ಯಕ್ತಿಯನ್ನು ನಂಬು ಎನ್ನುತ್ತೀಯಾ? ಅವರಿಗೆ ಈ ಸಮಯದಲ್ಲಿ ಹಣ ಕೊಡುವುದು ಮತ್ತೂ ಪ್ರೋತ್ಸಾಹಿಸಿದಂತೆ. ಅವರ ನಡವಳಿಕೆಯಲ್ಲಿನ ಲೋಪದೋಷಗಳು ಅವರಿಗೇ ಅರ್ಥವಾಗಬೇಕು. ಅವರು ಮನಃಪೂರ್ತಿ ಪಶ್ಚಾತ್ತಾಪಪಡಬೇಕು. ಅದು ಎಂತಹ ಸಹಾಯವನ್ನಾದರೂ ಮಾಡುತ್ತೇನೆ. ಬೇಕಾದರೆ ನನ್ನ ಪ್ರಾಣವನ್ನಾದರೂ ಅರ್ಪಿಸಬಲ್ಲೆ."

ಅವಳ ಮಾತು ನನಗೂ ನಿಜವೆನ್ನಿಸಿತು.

"–ಇನ್ನು ಸ್ವಲ್ಪ ದಿನವಾದ ನಂತರ ಒಂದು ರೇಡಿಯೋ ಕೊಂಡುಕೊಳ್ಳಬೇಕು. ಅದು ನನ್ನ ಬಹುದಿನಗಳ ಬಯಕೆ" ಎಂದಳು ಭಾನು.

"ಇಷ್ಟು ದಿನ ನನಗೇಕೆ ಹೇಳಲಿಲ್ಲ ಭಾನು?"

ಆಕ್ಷೇಪಣೆಯ ಧ್ವನಿಯಲ್ಲಿ ಪ್ರಶ್ನಿಸಿದೆ.

"ಇಲ್ಲ, ನನ್ನನ್ನು ಅಪಾರವಾಗಿ ಅಭಿಮಾನಿಸುವ ನೀನು, ನನಗಾಗಿ ಏನಾದರೂ ತಂದುಕೊಡಬಲ್ಲೆ ಎಂದು ನನಗೆ ಗೊತ್ತು. ಆದರೆ ಈ ಅಭಿಮಾನ, ಪ್ರೀತಿಗಳನ್ನೂ ಎಲ್ಲಕ್ಕೂ ದುರ್ವಿನಿಯೋಗ ಮಾಡಿಕೊಳ್ಳಲು ಇಷ್ಟವಿಲ್ಲ. ನಿನ್ನ ಪ್ರೀತಿ ಮಹಾ ಉತ್ಕೃಷ್ಟವಾದುದು. ಯಾವ ಸೋದರಿಗೂ ಲಭಿಸದಂಥದು – ಅದರ ಬೆಲೆ ಅದಕ್ಕೇ ಇದೆ."

"ಭಾನೂ! ನಿನ್ನ ಜೊತೆ ಮಾತನಾಡಬೇಕೆಂದರೇ ಭಯವಾಗುತ್ತದೆ. ನನ್ನ ಊಹೆಗೆ ನಿಲುಕದೆಯೇ ಇದ್ದೀ!"

ನನ್ನ ಮಾತು ಕೇಳಿ ನಕ್ಕಳು ಭಾನುಮತಿ.

"ಇನ್ನೊಂದು ಹೊಸ ವಿಷಯ ತಿಳಿಯಬೇಕೆ? ಈ ನಡುವೆ ಒಬ್ಬ ಲೇಖಕಿ ಬಹಳ ವ್ಯಾಪಕ ರೀತಿಯಲ್ಲಿ ಕಥೆಗಳನ್ನು ಹೆಣೆಯುತ್ತಿದ್ದಾಳೆ. ನಿನಗೂ ಗೊತ್ತಿರಬಹುದು. ಅವಳ ಕಥೆಗಳೆಲ್ಲಾ ಕೇವಲ ಊಹೆ ಮಾತ್ರ! ಪಾತ್ರಗಳು ದೇವತಾ ಸಮಾನವಾದುವು! ಕಥಾ ವಸ್ತುಗಳೆಲ್ಲಾ ದಾಂಪತ್ಯಾನುಬಂಧಗಳೇ! ಎಲ್ಲವೂ ಸುಖಾಂತಗಳೇ! ಅವಳ ಕಥೆಗಳಲ್ಲಿ ಯಾವುದನ್ನಾದರೂ ಆರಿಸಿಕೋ – ಸ್ತ್ರೀ ಪುರುಷರ ನಡುವಣ ಪ್ರೇಮ, ಮಮತೆ, ಅನುರಾಗ, ಅಭಿಮಾನಗಳು ಜೀವ ನದಿಗಳಂತೆ ಪ್ರವಹಿಸುತ್ತಿರುತ್ತವೆ.

"ಹೆಂಡತಿಯ ಕಾಲಿಗೆ ಮುಳ್ಳು ಚುಚ್ಚಿಕೊಂಡರೆ ಗಂಡನಿಗೆ ಮೂರ್ಛೆ ಬಂದಂತಾಗುತ್ತದೆ. ಗಂಡನಿಗೆ ತಲೆ ನೋವು ಬಂದರೆ ಹೆಂಡತಿಗೆ ಪ್ರಜ್ಞೆಯೇ ಹೊರಟುಹೋಗುತ್ತದೆ. ಅವರು ಅಹೋರಾತ್ರಿ ವಿಹರಿಸುವುದು ಸ್ವರ್ಗ ಸೀಮೆಯಲ್ಲಿ! ಮಲಗುವುದು ಪುಷ್ಪ ಪಲ್ಲಂಗದ

ಮೇಲೇ! ಆ ಹೂವು ಕೂಡ ಘಮಘಮಿಸುವ ಮಲ್ಲಿಗೆಯ ರಾಶಿಯೇ ವಿನಹ ಸುವಾಸನಾ ರಹಿತ ಸುಮವಲ್ಲ. ವಾಸ್ತವಿಕತೆಗೆ ದೂರವಾದ ಇಂತಹ ಕಥೆಗಳನ್ನು ಬರೆಯುವುದೂ, ಓದುವುದೂ ಒಳ್ಳೆಯದಲ್ಲ."

"ಆದರೂ ನಾನೂ ಹಾಗೇ ಯೋಚಿಸಿದೆ. ನನ್ನ ಊಹೆಯೇ ಏಕೆ ತಪ್ಪಾಗಿರಬಾರದು? ಪತಿ ಪತ್ನಿಯಲ್ಲಿ ಅನುರಾಗ ಭಾವಕ್ಕೆ ಬರವೇ? ಒಂದು ವೇಳೆ ಆ ಲೇಖಕಿಯ ಕಥೆಗಳೆಲ್ಲಾ ಅವಳ ಸ್ವಾನುಭವಗಳೇ ಏಕಾಗಿರಬಾರದು? ಹಾಗೆಂದು ಯೋಚಿಸಿಕೊಂಡು ಅವಳಿಗೊಂದು ಕಾಗದ ಬರೆದೆ."

"ನಿಮ್ಮ ಕಥೆಗಳಲ್ಲಿ ಬಹಳವನ್ನು ನಾನು ಓದಿದ್ದೇನೆ. ಯಾವುದರಲ್ಲಿ ನೋಡಿದರೂ, ಅಪಾರ ಅನುರಾಗ, ಅಂತ್ಯರಹಿತ ಸಂತೋಷಭರಿತವಾಗಿರುತ್ತದೆ. ಇವುಗಳನ್ನು ನೀವು ವಾಸ್ತವಿಕತೆಯ ಆಧಾರದ ಮೇಲೆ ಬರೆಯುತ್ತಿದ್ದೀರಾ? ಇಲ್ಲ ಕೇವಲ ದಾಂಪತ್ಯ ಬಾಳುವೆಯನ್ನು ಊಹಿಸಿಕೊಂಡು ಬರೆಯುತ್ತಿದ್ದೀರಾ? ನಿಮ್ಮ ಕಥೆಗಳಲ್ಲಿ ಆನಂದ ಅನುಭವಿಸುತ್ತಿರುವ ಜೋಡಿ ಹಕ್ಕಿಗಳನ್ನು ನೋಡುತ್ತಿದ್ದೀರಾ? ದಯಮಾಡಿ ಮನಸ್ಫೂರ್ತಿಯಾದ ಉತ್ತರ ಕೊಡಿ" ಎಂದು ಬರೆದೆ.

"ಆ ಕಾಗದಕ್ಕೆ ಉತ್ತರವೇನೋ ಬಂತು. ಓದಿ ನಗು ಬಂತು. ಅದೂ ಕೇಳು."

"ನಿಮ್ಮ ಕಾಗದ ಬಂದು ತಲುಪಿತು. ನನ್ನ ಲೇಖನಕ್ಕೆ ಸಾಧಾರಣವಾಗಿ ಊಹೆಯೇ ಆಧಾರ. ಜೊತೆಗೆ ಸುತ್ತಮುತ್ತಣ ಸುಖಮಯ ಸಂಸಾರಗಳನ್ನು ನೋಡುತ್ತಿದ್ದೇನೆ. ನಾ ನೋಡಿದ ಎಲ್ಲೆಡೆಗಳಲ್ಲೆಲ್ಲಾ ನನ್ನ ಊಹೆಗೆ ವ್ಯತಿರಿಕ್ತವಾದ ವಿಚಿತ್ರ ವಾಸ್ತವಿಕತೆಗಳನ್ನು ನಾನು ನೋಡಲಿಲ್ಲ. ಇವೆ ಎಂದೂ ಊಹಿಸಲಾರೆ. ಇಂದಿನ ವ್ಯಕ್ತಿಗಳೆಲ್ಲಾ ಸುಸಂಸ್ಕೃತರು. ಅವರ ವರ್ತನೆಯಲ್ಲಿ ಎಂದೂ ಕಾಠಿಣ್ಯತೆ ಗೋಚರಿಸದು. ಯಾವುದು ಹೇಗಾದರೂ ನನ್ನ ಲೇಖನ ಸೃಷ್ಟಿಯಲ್ಲಿನ ಸೌಂದರ್ಯ ಮಾತ್ರ ನನ್ನ ಅನುಭವದ್ದಲ್ಲ. ನಿಮ್ಮಲ್ಲಿ ನಿಜ ಹೇಳಬೇಕೆಂದರೆ ನಾನಿನ್ನೂ ಅವಿವಾಹಿತೆ!"

"ಆ ಉತ್ತರ ನನಗೇನೋ ಸಮಾಧಾನವೆನ್ನಿಸಿತು. ನನಗೆ ಅವಳ ಮೇಲೆ ಕರುಣೆಯೂ ಉಂಟಾಯ್ತು ಮತ್ತೆ ಅವಳಿಗೆ ಕಾಗದ ಬರೆದೆ."

"ಅನನುಭವಿ ಲೇಖಕಿ! ಸೋದರೀ!"

"ಬಾಳಿನಲ್ಲಡಿ ಇರಿಸದ ನಿನಗೆ, ಆ ಬಾಳಿನ ಅನುಭವವನ್ನು ಒಬ್ಬ ಸಾಟಿ ಹೆಣ್ಣಾಗಿ, ಸೋದರಿಯಾಗಿ, ಶ್ರೇಯೋಭಿಲಾಷಿಯಾಗಿ ನಿನಗೆ ತೋರ್ಪಡಿಸಬೇಕೆಂದು ನನ್ನ ಅಭಿಲಾಷೆ, ಹೋಗಲಿ ಇನ್ನು ಮುಂದಾದರೂ ಕಣ್ತೆರೆದು ವಾಸ್ತವ ಬಾಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸು. ನಿನ್ನ ಊಹೆ ನಿಜಕ್ಕೆ ನೂರಾರು ಮೈಲಿಗಳ ದೂರವೆಂಬುದನ್ನು ನನ್ನ ಸ್ವಂತ ಅನುಭವದಿಂದ ಧೈರ್ಯವಾಗಿ, ಘಂಟಾಘೋಷದಿಂದ ಹೇಳುತ್ತೇನೆ. ವಾಸ್ತವಿಕತೆಯನ್ನು ಮರೆಮಾಡುವಂತಹ ನಿನ್ನ ಲೇಖನಗಳಿಂದ ಇನ್ನೂ ಬಾಳಿನಲ್ಲಿ ಅಡಿಯಿರಿಸಿರದ, ಅರ್ಭಕ ಯುವತಿಯರನ್ನು ಭ್ರಮೆಗೊಳಿಸಿ, ಭವಿಷ್ಯತ್ತಿನಲ್ಲಿ ಅವರ ಊಹೆಗಳು ತಿರುಗು

ಮುರುಗಾದಾಗ ಎಂತಹ ಸಮಾಧಾನವನ್ನು ಕೊಡಲಾರದೊಂದುಳಿದು ಮತ್ಯಾವ ಉಪಯೋಗವೂ ಇಲ್ಲ.

"ನಿನ್ನ ಊಹೆಗಳು ಕೇವಲ ಊಹೆಗಳೇ ಎಂದೂ, ನಿನ್ನ ಕನಸೆಲ್ಲಾ ಕನಸೇ ಎಂದೂ, ನಿನ್ನ ಆಶೆಗಳೆಲ್ಲಾ ನಿರಾಶೆಗಳೆಂದೂ, ನೀನು ಬರೀ ಬುರುಡೆ" ಎಂದು ತಿಳಿದುಕೊಂಡಂದು, ನಿನ್ನ ವೇದನೆ ವರ್ಣನಾತೀತವಾಗುತ್ತದೆ ಗೊತ್ತೇ? ಬಾಳಿನಲ್ಲಿ ಪರಾಜಿತಳಾದ ನಾನು ಹೇಳುವ ಈ ಮಾತುಗಳು ಒಂದು ದಿನ ನಿನಗೂ ನೆನಪಾಗುತ್ತದೆ. ಅವುಗಳ ಅಗತ್ಯತೆಯೂ ಕಂಡು ಬರುತ್ತದೆ. ಕಾರಣ ನೀನು ಹೆಣ್ಣು! ಲೇಖಕಿಯಾಗಿ ಪವಿತ್ರ ಸ್ಥಾನದಲ್ಲಿರುವ ನಿನ್ನ ಮೇಲೆ ಅತಿ ಗುರುತರವಾದ ಜವಾಬ್ದಾರಿಗಳಿವೆ. ವಾಸ್ತವಿಕತೆಯನ್ನೆಂದೂ ಮರೆಮಾಡಬೇಡ. ಓದುಗರಿಗೆ, ಸುಮ್ಮನೆ ಭ್ರಮೆ ಕಲ್ಪನೆ ಮಾಡಬೇಡ. ಇಂದಿನಿಂದ ನೀನು ಸತ್ಯತೆಯನ್ನರಿತುಕೊಂಡಿದ್ದರೆ ನಾಳೆ ನಿನಗೆ ಎದುರಾಗುವ ಪರಿಸ್ಥಿತಿಗಳು ನಿನ್ನನ್ನು ಏನೂ ಮಡುವುದಿಲ್ಲ. ಇದು ನನ್ನ ಅನುಭವಮಯವಾದ ಸಲಹೆ ಸೋದರಿ?"

"ಹೇಗಿದೆ ಸಲಹೆ?" ಕೇಳಿದಳು ಭಾನು ನಗುನಗುತ್ತಾ.

"ಅಷ್ಟೇನು ಸರಿಯಾಗಿಲ್ಲ – ನಾನು ಅನುಭವಿಸದಾದುದೆಲ್ಲವೂ ಅಸಂಭವವೆಂದುಕೊಳ್ಳುವುದು ತಪ್ಪು. ಸಾಂಸಾರರಿಕ ಬಾಳಿನಲ್ಲಿ ಸೌಖ್ಯವಿಲ್ಲದಂದು ವಿವಾಹಗಳೇ ನಡೆಯವು. ನಾವೆಂದರೆ ಎಷ್ಟು? ನಾವು ಕಂಡಿರುವ ಪ್ರಪಂಚವೆಷ್ಟು? ಭಾನುಮತಿಯ ಮನೆಯ ಪಕ್ಕದಲ್ಲೇ ಸರೋಜಾದೇವಿಯ ಸಂಸಾರ. ಮಾನವರಲ್ಲಿ ಎಂದಿಗೂ ವೈವಿಧ್ಯತೆ ಇರುತ್ತದೆ, ಹೌದೆ?"

ಮಾತನಾಡಲಾರದೆ ನಕ್ಕಳು ಭಾನುಮತಿ.

"ಅದು ಸರಿ ಭಾನು, ಸ್ನಾನ ಮಾಡಬೇಕು, ಚೌಕ ತಂದುಕೊಡು, ನಂತರ ಮಾತನಾಡೋಣ" ಎನ್ನುತ್ತಾ ಮೇಲೆದ್ದೆ.

ಸ್ನಾನ ಮಾಡಿ ಹೊರಬರುವ ಹೊತ್ತಿಗೆ ಭಾವ 'ಆಗಮಿಸಿದ.'

ಮುಖ ನೋಡುತ್ತಲೇ ಮಾತನಾಡಿಸಿದೆ.

"ಚೆನ್ನಾಗಿದ್ದೀರಾ?" ಕೇಳಿದೆ.

"ಊಂ!"

ಎಂದವನೇ ಹೊರಟುಹೋದ. ಬಚ್ಚಲು ಮನೆಯಿಂದ ಟವಲಿಗಾಗಿ ಕೂಗಿದ. ಭಾನು ನನ್ನ ಹತ್ತಿರ ಟವಲು ತೆಗೆದುಕೊಂಡು ಹೋಗಿಕೊಟ್ಟಳು. ಕೈಲಿ ಮುಟ್ಟುತ್ತಲೇ ಬಿಸಾಡಿದ.

"ಛೀ! ಒದ್ದೆ ಟವಲು ಕೊಟ್ಟರೆ ಹೇಗೆ ಒರೆಸಿಕೊಳ್ಳಬೇಕು? ಕೆಲಸಕ್ಕೆ ಬಾರದ ದರಿದ್ರ ನನ್ನ ಮಕ್ಕಳೆಲ್ಲಾ ಸೇರಿ...ನಾಚಿಕೆ ಹೇಸಿಗೆ ಇದ್ದರೆ ಸರಿ!"

ನಾನು ಬೆಪ್ಪಾಗಿ ಹೋದೆ. ನಾಚಿಕೆ, ಅವಮಾನಗಳಿಂದ ಚಿತ್ರವಧೆ ಮಾಡಿದಂತಾಯ್ತು. ಆತ್ಮಾಭಿಮಾನಕ್ಕೆ ಅತಿಯಾದ ಆಘಾತವಾಗಿ ಬಹಳವಾಗಿ ಕುಗ್ಗಿಹೋದೆ. ಅವನು ನೇರವಾಗಿ ನನ್ನನ್ನೇ ಬೈಯ್ಯುತ್ತಿದ್ದ. ಅಂತಹ ಅಹಂಕಾರಿಯ ಮನೆಯ ಬಾಗಿಲಿನಲ್ಲಿಯೇ ಇದ್ದೇನೆಂದರೆ ನಾನು ಲಜ್ಜೆ ಇಲ್ಲದವನೇ? ಸರಸರನೆ ಬಟ್ಟೆಗಳನ್ನು ಹಾಕಿಕೊಂಡು ಅವನ ಕೋಣೆಯ ಮುಂದೆ ಹೋಗಿ,

"ಕ್ಷಮಿಸಿ ಭಾವ! ಇಷ್ಟು ದಿನಗಳೂ ನಾನು ಬಂದು ಹೋಗಿ ನಿಮಗೆ ಮನಸ್ಸು ನೋಯಿಸಿದೆ. ಆದರೂ ಇತರರಿಂದ ಅವಮಾನಪಡಿಸಿಕೊಳ್ಳುವಂತಹ ನೀಚನಲ್ಲ, ಯಃಕಶ್ಚಿತನೂ ಅಲ್ಲ. ಹೋಗುತ್ತೇನೆ."

ಎಂದವನೇ ಬೀದಿಯ ಬಾಗಿಲಿನತ್ತ ನಡೆದೆ.

"ಅಣ್ಣಾ!..."

ಒಳ ಬಾಗಿಲಿನಲ್ಲಿ ನಿಂತು ಗದ್ಗದ ಕಂಠದಿಂದ ಕೂಗಿದಳು ಭಾನು. ಕಣ್ಣಿನಿಂದ ನೀರು ತೊಟತೊಟನೆ ತೊಟ್ಟಿಕ್ಕುತ್ತಿತ್ತು.

"ಏನೂ ತಿಳಿದುಕೊಳ್ಳಬೇಡಮ್ಮಾ!"

ಎಂದವನೆ ಹೊರಬಂದೆ. ರಸ್ತೆಯಲ್ಲಿ ಹೋಗುತ್ತಿರುವಾಗ ನನಗೆ ಅಳಲು ಉಕ್ಕಿ ಬಂತು. ಭಾನುವಿಗೆ ಯಾವ ಸಹಾಯವನ್ನು ಮಾಡಲಾರದುದರೊಂದಿಗೆ ಮುಖ ತೋರಿಸುವ ಅದೃಷ್ಟಕ್ಕೂ ದೂರನಾಗುತ್ತಿದ್ದೇನೆ. ಭಾನು ಬಿಕ್ಕಿ ಬಿಕ್ಕಿ ಅಳುತ್ತಿರುತ್ತಾಳೆ. ನನಗೆ ಗೊತ್ತು. ನಾನೇನು ಮಾಡಲಿ?

ಭಾನುವಿನ ಗಂಡ! ಅಂದು ನಾನು ಬಿಡದಿಗೆ ಹಾರಿ ಹೋಗಿ ನೋಡಿಕೊಂಡು ಬಂದ ರಾಜಶೇಖರ! ಅವನಲ್ಲಿ ಏನು ಕಂಡು ಮೆಚ್ಚಿದೆ? ಹಾಗಾದರೆ ಕಣ್ಣಿನಲ್ಲಿ ನೋಡಿ ತಿಳಿಯುವ ವಿಷಯ ಅತ್ಯಲ್ಪವಲ್ಲವೆ?

ವಾರ ಒಂದುರುಳಿತು. ನನ್ನ ಮನಸ್ಸಿಗೆ ಸ್ವಲ್ಪವೂ ಸಮಾಧಾನವಿರಲಿಲ್ಲ. ರಾತ್ರಿಯ ಹೊತ್ತು ಸರಿಯಾಗಿ ನಿದ್ದೆ ಬರುತ್ತಿರಲಿಲ್ಲ. ಏನೂ ತಿನ್ನಲಾಗುತ್ತಿರಲಿಲ್ಲ. ಯಾವಾಗಲೂ ಭಾನುವಿನ ನೆನಪೇ ಬರುತ್ತಿತ್ತು. ಎಲ್ಲಿ ಕುಳಿತರೂ, ಅವಳ ನೆನಪು ಬಂದು ಕಣ್ಣಿನಿಂದ ನೀರು ಉಕ್ಕಿ ಉಕ್ಕಿ ಬರುತ್ತಿತ್ತು.

ಅಂದು ರಾತ್ರಿ ನಿದ್ದೆ ಬಂದಾಗ ಏನೋ ಒಂದು ದುಃಸ್ವಪ್ನ ಬಿತ್ತು. ಭಾನು ಉರುಳುರುಳಿ ನಗುತ್ತಿದ್ದಳು. ಬೆಚ್ಚಿ ಎದ್ದೆ. ಏನೋ ಭಯವಾಯ್ತು. ಭಾನು ಅಳುತ್ತಿರುತ್ತಾಳೇನೋ! ಈ ಅರ್ಧ ರಾತ್ರಿಯಲ್ಲಿ... ಒಬ್ಬಳೇ ...ಬಹಳ ಹೊತ್ತು ಕತ್ತಲೆಯಲ್ಲಿಯೇ ಯೋಚಿಸುತ್ತಾ ಕುಳಿತಿದ್ದೆ. ಒಂದು ಸಾರಿ ಹೋಗಿ ಬರೋಣವೇ ಎನ್ನಿಸಿತು. ಆದರೆ ಆ ಅರ್ಧ ರಾತ್ರಿಯಲ್ಲಿ ಅಲ್ಲಿಗೆ ನಾನು ಹೋದರೆ ಅವಳ ಗಂಡ, ಆ ಶನಿ ಮುಂಡೇ ಮಗ ಏನಾದರೂ ಅನ್ನುತ್ತಾನೇನೋ ಎಂದು ಹಿಂದೆಗೆದೆ. ಆದರೆ, ಆಗಲೇ ನಾನು ಧೈರ್ಯಮಾಡಿ ಹೋಗಿದಿದ್ದರೆ ಭಾನು ಬದುಕುತ್ತಿದ್ದಳು. ನನ್ನ ಪ್ರೀತಿಯ ತಂಗಿ ಭಾನುವನ್ನು ನಾನಾಗಿ ಕಳೆದುಕೊಂಡೆ. ದೇವರೇ! ಅಯ್ಯೋ!! ನನ್ನ ಭಾನು ನನ್ನನ್ನು ಬಿಟ್ಟು ಹೊರಟೇ ಹೋದಳು. ಈ ತಾಯಿ ಇಲ್ಲದ ತಬ್ಬಲಿ ಕಂದನನ್ನು ನಾನೇನು ಮಾಡಲಿ?

ಭಾನು ಶಾಶ್ವತವಾಗಿ ದುಃಖದಿಂದ ವಿಮುಕ್ತಿ ಪಡೆದುಕೊಂಡಳು. ಅನಂತ ಸಾಗರ ಗರ್ಭದಲ್ಲಿ ನಿತ್ಯ ನೂತನ ಪ್ರವಾಹದಲ್ಲಿ ಎಗರೆಗರಿ ಬೀಳುವ ತರಂಗಗಳ ನಡುವೆ ಎಲ್ಲೋ...ಎಲ್ಲೋ.. ಪ್ರಾಣ ಕಳೆದುಕೊಂಡು, ಸರ್ವಸ್ವನ್ನೂ ಮರೆತು ಹೊರಟು ಹೋದಳು....ಅಯ್ಯೋ...ಭಾನು...!

* * *

ಭಾನುವಿನ ಮಗನನ್ನು ಚಿಕ್ಕಮ್ಮನ ಕೈಗೆ ಹೇಗೆ ಒಪ್ಪಿಸಿದೆನೋ ನನಗೇ ಗೊತ್ತಿಲ್ಲ. ಚಿಕ್ಕಮ್ಮ ಜ್ಞಾನಹೀನಳಾಗಿ ಬಿದ್ದು ಬಿಟ್ಟಳು. ಒಮ್ಮೆಲೇ ಮನೆಯೆಲ್ಲಾ ಶೋಕ ಸಮುದ್ರದಲ್ಲಿ ಮುಳುಗಿ ಹೋಯ್ತು.

"ಅಮ್ಮಾ!...ಭಾನೂ! ನಿನ್ನನ್ನು ಹಡೆದು ಸಾಕಿ ಸಲುಹಿದ ತಾಯಿಯೂ ಸತ್ತು ಹೋದಳೆಂದುಕೊಂಡೆಯಮ್ಮಾ?...ತಾಯೀ? ಗರ್ಭಶೋಕವೆಂದರೇನೆಂದು ತಿಳಿಯದ ನಿಮ್ಮಮ್ಮನ ಹೊಟ್ಟೆಯಲ್ಲಿ ಆರದ ಉರಿ ಹಾಕಿದೆಯಾಮ್ಮ? ನಿನ್ನ ಕಷ್ಟವನ್ನು ನನ್ನ ಹತ್ತಿರ ಹೇಳಿಕೊಂಡಿದ್ದರೆ, ಆ ಪಾಪಿಯ ಕೈಯ ಸೆರೆಯಿಂದ ಬಿಡಿಸಿಕೊಂಡು ಬಂದು ರೆಪ್ಪೆಯಲ್ಲಿರಿಸಿಕೊಂಡು ಕಾಪಾಡಿಕೊಳ್ಳುತ್ತಿದ್ದೇನಲ್ಲೇ ಕಂದಮ್ಮಾ! ನಿನ್ನ ಹಸುಗಂದನನ್ನು ನನ್ನ ಕೈಗಿತ್ತು, ಅದನ್ನು ತಬ್ಬಲಿಯನ್ನಾಗಿ ಮಾಡಿ ಹೋದೆಯಲ್ಲೇ ತಾಯಿ! ಭಾನೂ.....! ನಿನ್ನನ್ನು ಹೇಗೆ ಮರೆಯುವುದೇ ಅಮ್ಮ! ಅಲೆಗಳ ನಡುವೆ ಅಡಗಿ ಹೋದೆಯಾ ಕಂದಾ...."

ಚಿಕ್ಕಮ್ಮನಿಗೆ ಪ್ರಜ್ಞೆ ಬರುತ್ತಿರುವಂತೆಯೇ ನೆಲದ ಮೇಲೆ ಉರುಳುರುಳೀ ಅಳಲಾರಂಭಿಸಿದಳು. ಆ ದುಃಖದಲ್ಲಿ ನನ್ನನ್ನು ಬಾಯಿಗೆ ಬಂದಂತೆ ಬೈದಳು. ಭಾನುವಿನ ಸಂಸಾರದ ವಿಷಯವನ್ನು ನಾನೆಂದೂ ಹೇಳದೆ ಮುಚ್ಚಿದನೆಂದೂ, ಸೂಕ್ಷ್ಮವಾಗಿಯಾದರೂ ಹೇಳಿದ್ದರೆ ಈ ಆಘಾತವಾಗುತ್ತಿರಲಿಲ್ಲವೆಂದೂ ಹಾಡಿ ಹಾಡಿ ಅತ್ತಳು. ಹೌದೂ – ಅದೂ ನಿಜವೇ – ನಾನು ಎಂದಾದರೂ ಚಿಕ್ಕಮ್ಮನಿಗೆ ಹೇಳಿದ್ದಿದ್ದರೆ ಹೀಗಾಗುತ್ತಿರಲಿಲ್ಲವೇನೋ, ಅವರೀಗ ಏನೂ ಮಾಡುವಂತಿರಲಿಲ್ಲ.

ಮನೆಯಲ್ಲಿ ಕತ್ತಲಾಗಿತ್ತು. ಯಾರೂ ದೀಪ ಹಚ್ಚಲಿಲ್ಲ. ಹಚ್ಚಿದ್ದರೂ ಮನಸ್ಸಿನ ಕತ್ತಲೆಯನ್ನು ಹೋಗಲಾಡಿಸಲು ಸೂರ್ಯನೂ ಅಸಮರ್ಥನಾಗಿದ್ದ. ಮನೆ ಮಸಣವಾಗಿತ್ತು. ಆ ಮನೆಯಲ್ಲಿ ಭಾನು ಶಾಶ್ವತವಾಗಿ ಇಲ್ಲವಾಗಿದ್ದಳು. ಚಿಕ್ಕಮ್ಮ ಜೋರಾಗಿಯೇ ಅಳುತ್ತಿದ್ದಳು. ಕಣ್ಣೊರೆಸಿಕೊಂಡು ಹತ್ತಿರ ಹೋಗಿ ಕುಳಿತೆ. ಮತ್ತೆ ಚಿಕ್ಕಮ್ಮ ನನ್ನ ಕೈ ಹಿಡಿದುಕೊಂಡು ಅಳಲಾರಂಭಿಸಿದಳು. ತಡೆಯಲಾರದೆ ನಾನೂ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದೆ.

"ಮಗೂ...! ಕೇಶವಾ! ಭಾನು ಬದುಕಿಲ್ಲವೆ?"

"ಚಿಕ್ಕಮ್ಮಾ!...ನನ್ನನ್ನು ಕ್ಷಮಿಸು ಚಿಕ್ಕಮ್ಮಾ! ಭಾನು ಇಂತಹ ಸಾಹಸ – ಮಾಡುತ್ತಾಳೆಂದು ನಾನೆಂದೂ ಕನಸು ಮನಸಿನಲ್ಲಿಯೂ ತಿಳಿದಿರಲಿಲ್ಲ ಚಿಕ್ಕಮ್ಮಾ. ನನ್ನ ವಿದ್ಯಾಭ್ಯಾಸ ಮುಗಿದು ಕೆಲಸ ಸಿಕ್ಕಿದ ಕೂಡಲೇ ಭಾನುವನ್ನು ಕರೆದುಕೊಂಡು ಹೋಗಿ ಇರಿಸಿಕೊಳ್ಳೋಣವೆಂದು ಕೊಂಡಿದ್ದೆ. ಅಷ್ಟರಲ್ಲಿಯೇ..."

ಭಾನುವಿನ ಮಗ ತಪ್ಪು ಹೆಜ್ಜೆ ಹಾಕುತ್ತಾ ಬಂದ. ಅವನನ್ನಪ್ಪಿಕೊಂಡು,

"ಕಂದಾ! ನಿಮ್ಮಮ್ಮ ನಿನ್ನನ್ನೂ ತಬ್ಬಲಿ ಮಾಡಿ ಹೋದಳಲ್ಲೋ!" ಎಂದು ಮತ್ತೂ ಜೋರಾಗಿ ಅಳಲಾರಂಭಿಸಿದಳು ಚಿಕ್ಕಮ್ಮ. ಆಗ ಏನಾದರೂ ಸಮಾಧಾನ ಹೇಳುವುದು ನನ್ನ ಜವಾಬ್ದಾರಿ ಎನ್ನಿಸಿತು.

"ಚಿಕ್ಕಮ್ಮ! ಮಗುವಿನ ಯೋಚನೆ ನೀನಿರಿಸಿಕೊಳ್ಳಬೇಡಮ್ಮಾ. ಅವನ ಜವಾಬ್ದಾರಿ

ನನ್ನದು. ಅವನನ್ನು ಸಾಕಿ ಸಲಹುತ್ತೇನೆ. ತುಂಬಾ ವಿದ್ಯೆ ಕಲಿಸುತ್ತೇನೆ. ತಾಯಿ ತಂದೆಯರಿಲ್ಲದ ಲೋಪವನ್ನು ಮರೆಸುತ್ತೇನೆ. ನನ್ನನ್ನು ನಂಬು ಚಿಕ್ಕಮ್ಮ!" ಎಂದೆ.

"ನಿನಗೆ ಗೊತ್ತಿಲ್ಲ ಕೇಶು! ಮನೆಯಲ್ಲಿ ಹೆಂಗಸಿನ ಪ್ರೀತಿ ಅತ್ಯವಶ್ಯಕವಪ್ಪ! ನನ್ನ ಕಂದ ನನಗೆ ಭಾರವಲ್ಲ. ನನ್ನ ಹೆಣ ಬೀಳುವವರೆಗೂ ಅದನ್ನು ಹೊಟ್ಟೆಯಲ್ಲಿರಿಸಿಕೊಂಡು ಕಾಪಾಡಿಕೊಳ್ಳುತ್ತೇನೆ. ಆಮೇಲೆ ಅವನ ಗತಿ..."

ಎನ್ನುತ್ತಾ ದೊಡ್ಡದಾಗಿ ದನಿ ಎತ್ತಿ ಅಳಲಾರಂಭಿಸಿದಳು. ಚಿಕ್ಕಮ್ಮನ ಹೆದರಿಕೆ ನನಗೂ ಅರ್ಥವಾಯ್ತು. ಹೌದು, ಆ ಭಾವನೆ ಎಂಥವರಿಗಾದರೂ ಹೊಳೆಯುವುದೇ. ಆದರೆ ಭಾನುವಿನ ಮಗನನ್ನು ಅವಳಂತೆಯೇ ಪ್ರೇಮಿಸಬಲ್ಲ ವ್ಯಕ್ತಿ ಇಲ್ಲದಿರಲಿಲ್ಲ. ಅವಳು ಸುಶೀಲ! ಸುಶೀಲ ನನ್ನವಳಾದಂದು ಮಗುವಿನ ವಿಷಯದಲ್ಲಿ ಯಾವ ಭಯದ ಅವಶ್ಯಕತೆಯೂ ಇರಲಿಲ್ಲ.

"ಚಿಕ್ಕಮ್ಮ! ಈಗ ಅಗತ್ಯ ತೋರಿದುದರಿಂದ ಹೇಳುತ್ತಿದ್ದೇನೆ. ನಾನು ಸುಶೀಲಳನ್ನು ಮದುವೆ ಮಾಡಿಕೊಳ್ಳುತ್ತೇನೆ. ನನ್ನ ಈ ತೀರ್ಮಾನಕ್ಕೆ ಎದುರಿಲ್ಲ. ಸುಶೀಲಳ ಮೇಲೆ ನಿನಗೆ ನಂಬಿಕೆ ಇದೆಯೆ? ಹೇಳು ಚಿಕ್ಕಮ್ಮ!"

"ಮಗೂ....ಕೇಶೂ!"

– ಎಂದಾಗ ಚಿಕ್ಕಮ್ಮನ ಕಣ್ಣು ಆ ದುಃಖದ ಸಮಯದಲ್ಲಿಯೂ ಆಶ್ಚರ್ಯದಿಂದ ಅತ್ಯಗಲವಾಗಿತ್ತು. "ಸುಶೀಲಾ! ಭಾನುವಿನ ವಿಷಯ ಕೇಳಿ ಇನ್ನೆಷ್ಟು ಅಳುತ್ತಾಳೋ? ಅದು ನನಗೆ ಗೊತ್ತು ಕೇಶು! ಭಾನು ಹೊಸದಾಗಿ ಸಂಸಾರಕ್ಕೆ ಹೋದಂದು ಬಿಕ್ಕಿ ಬಿಕ್ಕಿ ಅತ್ತಿದ್ದಳು, ಅನ್ನ ಬಿಟ್ಟಿದ್ದಳು. ಅವಳ ಮಡಿಲಲ್ಲೇ ಭಾನುವಿನ ಮಗನಿದ್ದರೆ ನನಗ್ಯಾವ ಚಿಂತೆಯೂ ಇಲ್ಲ. ಆದರೆ ಈ ಹಸುಗಂದನಿಗೆ ಇದೇನು ಹಣೆಯಲ್ಲಿ ಬರೆದೆಯೋ ಭಗವಂತಾ!"

ಮತ್ತೆ ಚಿಕ್ಕಮ್ಮನ ಅಳುವಿನ ಉಬ್ಬರ ಬಂತು.

ಒಂದು ರೀತಿಯಲ್ಲಿ ನನ್ನ ಮನಸ್ಸು ಶಾಂತಗೊಂಡಿತು. ಎದ್ದು ಹೊರಗೆ ಬಂದೆ, ಕತ್ತಲೆಯಲ್ಲಿ ಸುಶೀಲ ಮೆಟ್ಟಿಲು ಹತ್ತಿ ಬಂದು ಎದುರಾದಳು.

"ಸುಶೀಲಾ...!"

ಅಪ್ರಯತ್ನವಾಗಿ ಕರೆದೆ. ಮುಂದಿರಿಸಿದ್ದ ಅಡಿಯನ್ನು ಹಾಗೇ ನಿಲ್ಲಿಸಿ ನಿಂತಳು.

"ಭಾನೂ ನಿನಗೂ ಕಾಗದ ಬರೆದಿದ್ದಾಳೆ"

ಎಂದು ಜೇಬಿನಿಂದ ಕಾಗದ ತೆಗೆದುಕೊಟ್ಟೆ.

"ಭಾನೂ...ಭಾನೂ...ನಿಜವಾಗಿಯೂ ಹೋಗಿ ಬಿಟ್ಟಳೇ ಭಾವಾ....?" ಎಂದು ಕೇಳಿದಾಗ ಅವಳ ಧ್ವನಿ ಅತ್ಯಂತ ಭಾರವಾಗಿತ್ತು. "ನನಗೆ ಯಾವಾಗಲೂ ಏನು ಹೇಳಲಿಲ್ಲ ಅವಳು!"

ಎನ್ನುತ್ತಿರುವಂತೆಯೇ ಅತ್ತು ಬಿಟ್ಟಳು.

"ಅದು ನಮ್ಮ ದುರದೃಷ್ಟ ಸುಶೀಲಾ! ಭಾನು ತೀರಿಹೋದಳೆಂದು ತಿಳಿಯಬೇಡ. ಎಲ್ಲಿಯೋ ಶಾಂತಿಯಿಂದಿದ್ದಾಳೆ!" ಕಣ್ಣೊರೆಸಿಕೊಳ್ಳುತ್ತಾ ಹೇಳಿದೆ.

"ನೀನು ಹತ್ತಿರವಿದ್ದು ಇಷ್ಟರವರೆಗೂ ಬಿಟ್ಟುಬಿಟ್ಟೆ ಭಾವಾ!"

"ಹೌದು ಸುಶೀಲಾ! ನಾನು ಅವಳಿಂದ ಪ್ರಮಾಣ ಮಾಡಿಸಿಕೊಳ್ಳಬೇಕಾಗಿತ್ತು. ಅಷ್ಟು ದೂರ ಯೋಚಿಸಲಿಲ್ಲ. ನನ್ನನ್ನು ಕ್ಷಮಿಸಿ ಬಿಡು ಸುಶೀ? ನೀನು ನಿರ್ವಹಿಸ ಬೇಕಾಗಿರುವ ಕರ್ತವ್ಯ ತುಂಬಾ ಗುರುತರವಾದುದು – ಮತ್ತೊಂದಿದೆ – ಈ ಘಳಿಗೆಯಿಂದ ಉದಯ ನಿನ್ನ ಮಗ. ಆ ಜವಾಬ್ದಾರಿ ನಮ್ಮಿಬ್ಬರ ಮೇಲಿದೆ."

"ಭಾವಾ...!"

ಏನೂ ಅರ್ಥವಾಗದಂತೆ ನನ್ನ ಮುಖ ನೋಡಿದಳು.

"ಹೌದು ಸುಶೀ! ಮೊದಲು ಒಳಗೆ ಹೋಗಿ ಚಿಕ್ಕಮ್ಮನನ್ನು ಸುಧಾರಿಸು."

ಎಂದು ಹೇಳಿ ಮೆಟ್ಟಲಿಳಿದು ಹೋಗಿ ಅಂಗಳದಲ್ಲಿದ್ದ ಸಪೋಟ ಮರದ ಕೆಳಗೆ ಕುಳಿತುಕೊಂಡೆ. ಭಾನುವಿನೊಂದಿಗೆ ಚಿಕ್ಕಂದಿನಲ್ಲಿ ಆಟವಾಡಿದ್ದ ಆ ಬಂಡೆಯ ಪರಿಸರಗಳು ಹಾಗೇ ಇವೆ. ಎದ್ದು ಹೋಗಿ ಆ ಬಂಡೆಯನ್ನು ಕೈಯಿಂದ ಸವರಿದೆ. 'ಭಾನು ಸತ್ತು ಹೋದಳು' ಎಂದೆ! ಬಾಗಿದ್ದ ಸಪೋಟಾ ಗಿಡದ ರೆಂಬೆಯನ್ನು ಕೈಯಿಂದ ಸವರಿ.

"ಭಾನೂ ನಿನಗೂ ಗೊತ್ತಿಲ್ಲವೇ? ನಿನ್ನೆ ರಾತ್ರಿ ಸತ್ತು ಹೋದಳೆ!" ಎಂದೆ.

ಬಾವಿಯ ಕಟ್ಟೆಯ ಮೇಲೆ ಕುಳಿತು,

"ಭಾನು ನಿನಗೂ ಗೊತ್ತಿಲ್ಲವೆ! ಈಗ ಅವಳಿಲ್ಲ. ಸಮುದ್ರದಲ್ಲಿ ಧುಮುಕಿ – ಪಾಪ! ಸತ್ತುಹೋದಳು" ಎಂದೆ.

ನನಗೆ ಕಣ್ಣು ಕತ್ತಲಾದಂತಾಗುತ್ತದೆ. ಪ್ರತಿಯೊಂದು ಗಿಡಕ್ಕೂ, ಪ್ರತಿ ಕಲ್ಲಿಗೂ, ಪ್ರತಿಯೊಂದಕ್ಕೂ ಭಾನು ಸತ್ತು ಹೋದಳೆಂದು ಹೇಳಬೇಕೆನಿಸುತ್ತಿತ್ತು. ನನಗೆ ಅಳುವೇ ಬರುತ್ತಿರಲಿಲ್ಲ. ಕಂಬನಿ ಆವಿಯಾಗಿ ಹೋಗಿತ್ತು. ಮನಸ್ಸಿನಲ್ಲಿ ದುಃಖ ಗಡ್ಡೆ ಕಟ್ಟಿತ್ತು. ಒಂದು ವೇಳೆ.... ನನಗೆ ಬುದ್ಧಿ ಏನಾದರೂ ಚಲಿಸಿದೆಯೋ! ಹುಚ್ಚು ಹಿಡಿಯುತ್ತಿದೆಯೆ? ಹಾಗಿಲ್ಲವಾದರೆ ಅಳುವೇಕೆ ಬರುತ್ತಿಲ್ಲ? ಬಹಳ ಹೊತ್ತು ಆ ಬಂಡೆಯ ಮೇಲೆ ಕುಳಿತಿದ್ದೆ. ಭಾನು ಬರೆದಿದ್ದ ಕಾಗದವನ್ನು ಇನ್ನೂ ಓದಿರಲಿಲ್ಲ. ಅಲ್ಲಿಯವರೆಗೆ ಓದುವ ಮನಸ್ಸು ಆಗಿರಲಿಲ್ಲ. ಅವಕಾಶವೂ ದೊರೆತಿರಲಿಲ್ಲ. ಹಿಂದಿನ ರಾತ್ರಿ ಭಾನು ಬದುಕಿದ್ದಳು. ಸತ್ತು ಇನ್ನೂ ಇಪ್ಪತ್ನಾಲ್ಕು ಗಂಟೆಗಳೂ ಆಗಿರಲಿಲ್ಲ. ಕಾಗದವೇನು ಬರೆದಿದ್ದಾಳೆ? ಒಳಗೆ ಹೋಗಿ ವಸಾರೆಯಲ್ಲಿ ಕುಳಿತು ಕಾಗದವನ್ನು ಬಿಡಿಸಿದೆ.

* * *

ಅಣ್ಣಯ್ಯ!

"ನೆನೆಸದೆಯೇ ನಿನಗೆ ಈ ಕಾಗದ ಬರೆಯಬೇಕಾಯ್ತು. ನಾನು ಮಾಡುತ್ತಿರುವ ಕೆಲಸಕ್ಕೆ ನೀನೆಷ್ಟು ದುಃಖಿಸುತ್ತಿ ಎಂಬುದನ್ನು ಊಹಿಸಬಲ್ಲೆ. ಆದರೆ ನನಗೆ ಗತ್ಯಂತರವಿಲ್ಲ. ಇಂತಹ ದುರ್ದಿನ ಎಂದೂ ಬರಕೂಡದೆಂದೂ, ಎಷ್ಟು ದುಃಖವನ್ನಾದರೂ ತಡೆದು ಪ್ರಾಣದಿಂದಿರಬೇಕೆಂದೂ, ನನ್ನ ಉದಯನನ್ನು ನಾನೇ ಬೆಳೆಸಿ ಪ್ರಯೋಜಕನನ್ನಾಗಿಸ

ಬೇಕೆಂದೂ ಏನೇನೋ ಎಣಿಸಿಕೊಂಡಿದ್ದೆ. ಎಷ್ಟೋ ಸಾರಿ ಇಂತಹ ಅಪಘಾತಕ್ಕೆ ಎಳೆಯುತ್ತಿದ್ದ ಮನಸ್ಸನ್ನೇ ಹದದಲ್ಲಿರಿಸಿಕೊಳ್ಳುತ್ತಿದ್ದೆ. ಆವೇಶಗೊಳ್ಳುತ್ತಿದ್ದ ಹೃದಯವನ್ನು ಎಚ್ಚರಿಸುತ್ತಿದ್ದೆ. ಆದರೆ, ಅಣ್ಣಯ್ಯ! ನಾನು ಬಯಸಿದ್ದು ಬದುಕಲೇ ವಿನಹ, ನಟಿಸಲಿಲ್ಲ. ಒಂದು ಘಳಿಗೆಯೂ ಶಾಂತಿಯಿಲ್ಲದ ಈ ಮನಸ್ಸನ್ನೂ, ಒಂದು ನಿಮಿಷವೂ ಸುಖಪಡದ ಈ ತನುವನ್ನೂ ಎಷ್ಟೋ ಬಾರಿ, ಎಷ್ಟೋ ದಿನಗಳು, ಎಷ್ಟೋ ವಾರಗಳೂ- ಎಷ್ಟು ವರ್ಷ ಅದುಮಲಿ? ತೃಣದಷ್ಟು ಬೆಲೆಯಿಲ್ಲದ ಈ ಶರೀರವನ್ನು ಯಾರಿಗೋಸ್ಕರ ಕಾಪಾಡಬೇಕು?

ಈ ಮನೆಯಲ್ಲಿರುವ ಇಬ್ಬರು ವ್ಯಕ್ತಿಗಳೂ ಒಬ್ಬರಿಗೊಬ್ಬರು ಏನೂ ಆಗಬೇಕಾಗಿಲ್ಲ. ಬಂಧುಗಳಲ್ಲಿ, ಗೆಳೆಯರಲ್ಲಿ, ಪರಿಚಯಸ್ಥರೂ ಅಲ್ಲ. ಸಹ ಪ್ರಯಾಣಿಕರೂ ಅಲ್ಲ. ಶತ್ರುಗಳು! ಒಬ್ಬರನ್ನೊಬ್ಬರು ದ್ವೇಷಿಸಿಕೊಂಡು, ಒಬ್ಬರ ನೆರಳು ಕಂಡರೆ ಮತ್ತೊಬ್ಬರು ಅಸಹ್ಯಪಟ್ಟುಕೊಂಡು, ಒಬ್ಬರನ್ನೊಬ್ಬರು ದೂರಮಾಡಿಕೊಳ್ಳುವ ದೌರ್ಭಾಗ್ಯರು. ಕಲ್ಯಾಣ ವೇದಿಕೆ ಎನ್ನುವ ಆ ಬಲಿಪೀಠವನ್ನೇರುವ ಮೊದಲು ಒಬ್ಬರಿಗೊಬ್ಬರು ಎಷ್ಟು ದೂರವಿದ್ದೆವೋ, ಈಗ ಅದಕ್ಕಿಂತಲೂ ಸಾವಿರ ಪಾಲು! ಅಂದಿನ ಆಸೆ ಆಕಾಂಕ್ಷೆಗಳನ್ನು, ಊಹೆಗಳನ್ನು ಸರ್ವವನ್ನೂ ನಾಶಪಡಿಸಿಕೊಂಡು, ಕಲೆಗಾಗಿ ಕಲೆ ಎನ್ನುವಂತೆ, ಬಾಳಿಗಾಗಿಯೇ ಬಾಳುತ್ತಿರುವ ದುರದೃಷ್ಟಶಾಲಿಗಳು.

ಇಬ್ಬರು ವ್ಯಕ್ತಿಗಳನ್ನು – ಎರಡು ಶರೀರಗಳನ್ನು ಒಂದು ಮಾಡುವಂತಹ ಮಾನಸಿಕ ಬಂಧನ ಕಡಿದು ಹೋಯ್ತು. ನವಜೀವನದಲ್ಲಿ ಚಿಗುರಿ ಸಾಗಿದ ಅನುರಾಗಲತೆ ಪ್ರೇಮಜಲವಿಲ್ಲದೆ ಪ್ರಾಣಬಿಟ್ಟಿತು. ಬಾಡಿ ಬಿದ್ದು ಹೋಯ್ತು. ಇನ್ನು ಈ ಇಬ್ಬರು ಒಬ್ಬರಿಗೊಬ್ಬರು ಏನೂ ಅಲ್ಲ. ಎರಡು ಕಲ್ಲುಗಳನ್ನು ಒಂದೆಡೆ ಹಾಕಿದರೆ ಒಂದಕ್ಕೊಂದಕ್ಕೆ ಬಂದು ದೂರ ಬೀಳುವುದೊಂದುಳಿದು ಇನ್ನೇನೂ ಇಲ್ಲ. ಹಿರಿ ಸುಳಿಯಲ್ಲಿ ಸಿಕ್ಕಿದ ಈ ಸಂಸಾರ ನಾವೆ ತಲೆ ಕೆಳಗಾಗದಿರದು.

ಒಂದು ಸಾರಿ ನೀನು ಹೇಳಿದ್ದೆ – 'ನಿನ್ನ ಮಗನೇ ನಿನಗೆ ಆಶಾಜ್ಯೋತಿ ಭಾನು!' ಎಂದು. ಆದರೆ ಅದನ್ನೂ ನಾನು ಸಹಿಸಲಾರದಾದೆ. ನನ್ನ ಉದ್ದೇಶವನ್ನು ನಿನಗೆ ಹೇಳಬೇಕೆನ್ನಿಸಿತ್ತು. 'ನನಗಿನ್ನೂ ನಿಮ್ಮ ಭಾವನ ಮೇಲೆ ಆಸೆಯಿದೆ' ಎಂದು. ಆದರೆ ನೀನೆಲ್ಲಿ ನಗುತ್ತೀಯೋ ಎಂದು ನಾಚಿಕೆಪಟ್ಟೆ. ವಾಸ್ತವವಾಗಿ ನಾನವರನ್ನು ಎಷ್ಟು ದ್ವೇಷಿಸಿದರೂ, ಎಷ್ಟು ವಿಮರ್ಶಿಸಿದರೂ ನನ್ನ ಹೃದಯದಲ್ಲಿ ಯಾವುದೋ ಮೂಲೆಯಲ್ಲಿ ಏಕೋ ಒಂದು ಆಶಾರೇಖೆ ಹೊಳೆಯುತ್ತಿತ್ತು ಎಂದೋ ಒಂದುದಿನ ಅವರಲ್ಲಿ ಪರಿವರ್ತನೆಯುಂಟಾಗುತ್ತದೆಂದುಕೊಂಡಿದ್ದೆ – ತನಗೂ ಒಬ್ಬ ಹೆಂಡತಿ ಇದ್ದಾಳೆಂದೂ, ಮಗನಿದ್ದಾನೆಂದೂ ನೆನಪು ಬರುತ್ತದೆ; ಆ ಸುದಿನ ಬಂದೇ ಬರುತ್ತದೆ ಎಂದುಕೊಂಡಿದ್ದೆ.

ಪ್ರಪಂಚ ವಾಡಿಕೆಯಲ್ಲಿ ದಾರಿ ತಪ್ಪಿದವರು ಕೆಲ ದಿನಗಳ ನಂತರ ತಾವು ನಡೆಯುತ್ತಿರುವುದು ತಪ್ಪು ದಾರಿ ಎಂದರಿತುಕೊಂಡು, ಸರಿಯಾದ ದಾರಿಗೆ ಬರುತ್ತಾರೆ. ಮನುಷ್ಯ ತಾನು ಮಾಡಿದ ತಪ್ಪನ್ನು ತಿಳಿದುಕೊಳ್ಳುವ ಮೊದಲೇ ಅವನ ಬಾಳು ಎಂದೂ

ಸಾಮಾನ್ಯವಾಗಿ ಸಮಾಪ್ತವಾಗದು. ಹಾಗಾಗದಂದು ಅದು ಪ್ರಕೃತಿ ನಿಯಮಕ್ಕೇ ವ್ಯತಿರಿಕ್ತವಾಗುತ್ತದೆ. ಅಲ್ಲದೆ ತಪ್ಪು ಮಾಡುವುದು ಮನುಷ್ಯಮಾತ್ರದ ಅವನ ಸ್ವಭಾವ ಜನ್ಯ ಗುಣವಲ್ಲವೆ? ನನ್ನ ಸಹನೆ ನಶಿಸಿ ನಾಶವಾಗುವವರೆಗೂ ನಿಮ್ಮ ಭಾವನಲ್ಲಿ ಬದಲಾವಣೆಯುಂಟಾಗಲಿಲ್ಲ. ಆದರೆ ... ಖಂಡಿತ ಪರಿವರ್ತನೆಯಾಗುತ್ತದೆ, ಎಂದೋ ಒಂದು ದಿನ! ಅನುಭವಿಸಲಾಗಲಾರದಂದು ಈ ಬಾಳಿನಲ್ಲಿ ನಾನು ಸರಿಪಡಿಸಿಕೊಳ್ಳಲಾರದ ದೊಡ್ಡ ತಪ್ಪೊಂದಿದೆ. ಗಂಡನಾದವನು, ಕುಂಟನಾಗಲೀ, ಕುರುಡನಾಗಲೀ, ಅನಾಮಿಕ ನಾಗಲೀ, ಅಸಮರ್ಥನಾಗಲೀ, ದೌರ್ಭಾಗ್ಯನಾಗಲೀ, ದುಷ್ಟನಾಗಲೀ, ಎಂತಹವನಾಗಲೀ, ಹೆಂಡತಿಯಾದವಳು ಅವನನ್ನೇ ಪ್ರೇಮಿಸಿ ಗೌರವಿಸಬೇಕೆಂದೂ, ಅವನು ನಡೆದ ದಾರಿಯಲ್ಲಿ ಅವನ ನೆರಳಿನಂತೆಯೇ ಹಿಂಬಾಲಿಸಬೇಕೆಂದೂ ನಮ್ಮ ಶಾಸ್ತ್ರಗ್ರಂಥಗಳು ಸಾರುತ್ತಿವೆ. ಆದರೆ ಶಾಸ್ತ್ರ ಸಾರುವದು ನನಗೆ ಸರಿಬರದು. ಏಕೆಂದರೆ ನನ್ನ ಕೂಗನ್ನು ಶಾಸ್ತ್ರಗಳು ಕೇಳುವುದಿಲ್ಲವಲ್ಲ! ನಾನು ನನ್ನ ಗಂಡನನ್ನು ಪ್ರೇಮಿಸಲಾಗದುದೂ ಅವರಿಗಾಗಿ ನನ್ನ ಸರ್ವಸ್ವವನ್ನೂ ಧಾರೆ ಎರೆದು ಬದಲಾಗದುದು ಮಹಾಪರಾಧವೇ! ಯಮಧರ್ಮರಾಜ ನನಗೇನು ಶಿಕ್ಷೆ ಬೇಕಾದರೂ ವಿಧಿಸಿಕೊಳ್ಳಲಿ ಬಿಡು.

ಅತ್ತೆಯ ಹೋಲಿಕೆ ನನಗೆ ಪೂರಾಯಿದೆ. ಬರೀ ರೂಪ ಒಂದರಲ್ಲಿ ಮಾತ್ರವಲ್ಲದೆ, ಬಾಳಿಗೂ ಅದೇ ಹೋಲಿಕೆ ಬಂತು. ತೃಪ್ತಿರಹಿತವಾದ ಈ ಬಾಳನ್ನು ನಾನು ಬಾಳಲಾರೆ! ಅದರಿಂದ ನನ್ನ ಗುರಿಯೂ ಸಾಧಿಸದು. ನನ್ನ ಏಕೈಕ ಗುರಿಯೂ ತಪ್ಪಿದಾಗ ನನ್ನ ಇರುವಿಕೆಯೂ ನಿರರ್ಥಕವಲ್ಲವೆ? ಸಂತೋಷಕ್ಕೆ ಬರವಾಗಿರುವ ಈ ಮನೆಯಲ್ಲಿ, ಅನುರಾಗವೆಂದರೇ ಅರಿಯದ ತಾಯಿ ತಂದೆಯರ ನಡುವೆ ಬೆಳೆಯುವಂತಹ ಮಗ ಎಂತಹ ಸಹೃದಯಿಯಾಗಬಲ್ಲ? ಪ್ರಯೋಜಕ ಹೇಗಾಗುತ್ತಾನೆ? ಆದುದರಿಂದಲೇ ನನ್ನ ಮಗ ಮತ್ತೊಂದೆಡೆ, ಶಾಂತಿ ನಿಲಯದಲ್ಲಿ – ಪ್ರೇಮ ಸದನದಲ್ಲಿ ಬೆಳೆಯುತ್ತಾನೆ. ನಾನು ಕಣ್ಮರೆಯಾಗುತ್ತೇನೆ. ಇದೇ ಗುರಿಯಾದರೆ ನಾನು ಸಾಯುವ ಅಗತ್ಯವಿಲ್ಲವೆನ್ನುತ್ತೀಯಾ? ಅದು ನನ್ನ ಮೇಲಿರುವ ನಿನ್ನ ಅಪಾರ ವಾತ್ಸಲ್ಯ – ಅಷ್ಟೇ! ಒಬ್ಬ ಹೆಣ್ಣು ಧೈರ್ಯವಾಗಿ, ಒಂಟಿಯಾಗಿ ಬಾಳುವ ಅವಕಾಶವೀಯಲು, ಯೋಗ್ಯತೆಯನ್ನು ಪಡೆಯಲು ನಮ್ಮ ಸಮಾಜ ಅವಕಾಶ ಮಾಡಿಕೊಟ್ಟಿಲ್ಲ. ನಾವಿನ್ನೂ ಅಷ್ಟು ಪುರೋಗಮಿಸಿಲ್ಲ. ಆದರೂ ಸಮಾಜದ ಸ್ಥಾಯಿ ನನಗೆಂದೂ ಅವಶ್ಯಕವಿಲ್ಲ. ನಾನೆಂದಾದರೂ ಇದೇ ಮಾಡುವುದು. ಇದು ಆವೇಶವೇ ಆದರೆ ಇದೇ ನನಗೆ ಮುಕ್ತಿಯನ್ನೀಯುತ್ತದೆ.

ಬದುಕಿರಬೇಕಾದರೆ, ನನಗೆ ಅಂತ್ಯರಹಿತವಾದ, ನಿರಂತರವಾದ ನಿತ್ಯವಾದ ಪ್ರೇಮ ಬೇಕು. ಒಬ್ಬರಲ್ಲೊಬ್ಬರು ಐಕ್ಯವಾಗುವಂತಹ, ಒಬ್ಬರಿಗಾಗಿ ಮತ್ತೊಬ್ಬರು ಪ್ರಾಣವನ್ನೂ ಧಾರೆ ಎರೆಯುವಂತಹ, ಒಬ್ಬರಿಗಾಗಿಯೇ ಒಬ್ಬರು ಜೀವಿಸಿರುವಂತಹ ಪ್ರೇಮವಾಹಿನಿ ಜೀವವಾಹಿನಿಯಾಗಿ ಹರಿಯಬೇಕು. ಅದೇ ನಿಜವಾದ ಬಾಳು! ಪ್ರಾಣದಿಂದಿರುವುದಾದರೆ ನನಗೆ ಅಂತಹ ಬಾಳೇ ಬೇಕಣ್ಣ.

ಪರಿಸ್ಥಿತಿಗಳು ವಕ್ರ ಗತಿಯಲ್ಲಿ ಪ್ರತಿಕೂಲಿಸಿದಾಗ ಸಹಿಸಿಕೊಳ್ಳುವಂತಹ ಸಹನೆ ನನ್ನಲ್ಲಿಲ್ಲ. ನನ್ನಲ್ಲಿ ಮೊದಲಿನಿಂದಲೂ ಇರುವ ಲೋಪ ಅದೇ! ಭಗವಂತ ನನ್ನನ್ನು 'ಸಹನೆಯಿಲ್ಲದ ಹೆಣ್ಣಾಗು' ಎಂದು ಶಪಿಸಿದ್ದಾನೆ. ಕಾರಣ ಆ ಭಗವಂತನೂ ಗಂಡಸೇ ಅಲ್ಲವೆ? ಒಂದು ಹೆಣ್ಣಿಗಾಗಿ ಯಾವ ಗಂಡು ತಾನೇ ಪ್ರೇಮದಾನ ಮಾಡುತ್ತಾನೆ?

ನೋಡಣ್ಣ! ನನ್ನ ಕಂದ! ತಂದೆಯ ಆದರ ಏನೆಂದರೇ ತಿಳಿಯದ ನನ್ನ ಮಗ! – ತಾಯಿಯನ್ನೂ ಕೂಡ ಕಳೆದುಕೊಳ್ಳುತ್ತಿರುವುದನ್ನರಿಯದೆ ನಿದ್ರಿಸುತ್ತಿದ್ದಾನೆ. ಅವನು ಇನ್ನೆಂದೂ ಬಾಳಿನಲ್ಲಿ ತಾಯಿಯನ್ನು ನೋಡುವುದಿಲ್ಲವಲ್ಲ! ನಾನು ಹೋದ ನಂತರ ಅವನು ಎದ್ದು ಅತ್ತರೆ, ಅವರಪ್ಪನಿಗೆ 'ನಿದ್ರಾಭಂಗ'ವಾಗಿ ಸಿಟ್ಟಿನಿಂದೆದ್ದು ಹೊಡೆದರೆ... ಕೋಣೆಗೆ ಹೊರಗಿನಿಂದ ಬಾಗಿಲು ಹಾಕಿಕೊಂಡರೆ... ಆ ಕತ್ತಲೆಯಲ್ಲವನು ಅಮ್ಮಾ...! ಅಮ್ಮಾ...! ಎಂದು ಹೆದರಿಕೆಯಿಂದ ವಿಲಪಿಸುತ್ತಿದ್ದರೆ... ದೇವರೇ! ತಾಯ ಕರುಳನ್ನು ಇಷ್ಟೊಂದು ದಯಾರಹಿತವನ್ನಾಗಿ ಮಾಡುತ್ತೀಯಾ? ತಾಯ ಕರುಳಿನಲ್ಲಿ ಕಾಠಿಣ್ಯತೆಯನ್ನು ತುಂಬುತ್ತೀಯಾ? ನನ್ನ ಕಂದನನ್ನು ನೀನು ಲಾಲಿಸಿ ಸಮಾಧಾನಪಡಿಸುತ್ತೀಯಾ? ನನ್ನ ಕಣ್ಣು ತುಂಬಿ ಬಂದು ಅಕ್ಷರಗಳೇ ಮುಂಜುಮಂಜಾಗುತ್ತಿವೆ.

ಅಣ್ಣಯ್ಯಾ! ಪರವಾಗಿಲ್ಲ! ನಿನಗೆ ಈ ವಿಷಯ ತಿಳಿಯುತ್ತಲೇ ನೀನು ಬರುತ್ತೀ, ಮಗುವನ್ನು ಕರೆದುಕೊಂಡು ಹೋಗುತ್ತೀ, ಅಮ್ಮನಿಗೆ ಒಪ್ಪಿಸುತ್ತೀ, ಆದರೆ ... ಕೇಶು! ಆ ಜವಾಬ್ದಾರಿ ಅಮ್ಮನದಲ್ಲ. ನಿನ್ನದು! ನಾನು ನನ್ನ ಕಂದನನ್ನು ನಿನಗೊಪ್ಪಿಸುತ್ತಿದ್ದೇನೆ. ನನ್ನ ಹೃದಯವನ್ನು, ನನ್ನ ಕರುಳಿನ ಕುಡಿಯನ್ನು, ನನ್ನ ಮಗ ಉದಯನ್ನನು ನಿನಗೆ ಒಪ್ಪಿಸುತ್ತಿದ್ದೇನೆ. ನೀನೇ ಅವನಿಗೆ ತಾಯಿ, ತಂದೆ, ದೇವರು, ಸರ್ವಸ್ವ! ನನ್ನಲ್ಲಿ ಬಲವಾಗಿರುವ ಈ ನಂಬಿಕೆಗೆಂದೂ ದ್ರೋಹ ಮಾಡುವುದಿಲ್ಲವಲ್ಲ!

ಮಗುವಿನ ವಿದ್ಯಾಭ್ಯಾಸದ ವಿಷಯದಲ್ಲಿ ನನ್ನದೊಂದು ಸಣ್ಣ ಕೋರಿಕೆ! ಅವನಿಗೆ ವೈದ್ಯಕೀಯವನ್ನು ಕಲಿಸು. ವಿದೇಶಗಳಿಗೆ ಕಳಿಸು. ಅದು ನನ್ನ ಬಯಕೆ! ಆದರೆ ಅವನು ವೈದ್ಯನಾಗಲು ವಿಮುಖತೆ ತೋರಿಸಿದರೆ ಅವನನ್ನು ಬಲವಂತಪಡಿಸಬೇಡ. ಅವನ ಇಷ್ಟದಂತೆ –ಅವನು ಅಭಿಮಾನಿಸುವ ವಿದ್ಯೆಯನ್ನೇ ಕಲಿಸು. ಅವನಿಗೆ ಬಟ್ಟೆ ಹೊಲಿಯಲು ಇಷ್ಟವಾದರೆ ದರ್ಜಿಯ ಹತ್ತಿರ ಕಲಿಸು! ಮಡಿಕೆ ಮಾಡುವುದು ಇಷ್ಟವಾದರೆ ಕುಂಬಾರನ ನ್ನಾಗಿ ಮಾಡು! ತಪ್ಪಿಲ್ಲ. ಆದರೆ ಅವನು ಕಲಿಯುವ ವಿದ್ಯೆಯಲ್ಲಿ ಪರಿಣಿತನಾಗಬೇಕು – ಅದು ಮುಖ್ಯ!

ನಂತರ, ನಿನ್ನ ಮದುವೆಯ ವಿಷಯ. ನೀನು ಸುಶೀಲಳನ್ನೇ ಮದುವೆಯಾಗು! ಸದಾ ಕಾಲವೂ ನಿನ್ನನ್ನೇ ನೆನಸಿಕೊಳ್ಳುವ ವ್ಯಕ್ತಿ ಒಂದಿದೆ ಎಂದರೆ ಅದು ನಿನ್ನ ಸುಯೋಗವಲ್ಲವೆ? ಬುದ್ಧಿ ತಿಳಿದಂದಿನಿಂದಲೂ, ನಿನ್ನನ್ನು ಅಭಿಮಾನಿಸುತ್ತಾ, ನಿನ್ನನ್ನೇ ಆರಾಧಿಸುತ್ತಾ ಕಾಲ ಕಳೆಯುತ್ತಿರುವ ವ್ಯಕ್ತಿಗೆ ನೀನು ಚಿರಋಣಿಯಾಗಿರಬೇಕು. ಅದನ್ನು ತೀರಿಸಲಾರದಂದು ನೀನು ಕೃತಘ್ನನಾಗುತ್ತೀಯೆ.

ದೊಡ್ಡಪ್ಪನ ಮೂರ್ಖತೆ ನನಗೆ ತಿಳಿಯದುದಲ್ಲ. ಅದಕ್ಕೇ ನಿನಗೆ ಇಷ್ಟೊಂದು ತಿಳಿಯ ಹೇಳುತ್ತಿರುವುದು, ಬಾಳಿನ ಗುರಿ ಕೇವಲ ದ್ರವ್ಯಾರ್ಜನೆ ಮಾತ್ರವಲ್ಲವೆಂದೂ, ಪರಸ್ಪರ ಬಯಸುವ ಎರಡು ಹೃದಯಗಳನ್ನು ಒಂದುಗೂಡಿಸುವುದು ಪುಣ್ಯ. ಬಿಡಿಸುವುದರಲ್ಲಿ ಪಾಪ ಉಂಟಾಗುತ್ತದೆಂದೂ ಎಂದಾದರೂ ದೊಡ್ಡಪ್ಪನಿಗೆ ಗೊತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಆದರೂ ನೀನು ಗಂಡಸು, ಸ್ವತಂತ್ರ – ಯೋಚಿಸಿ ನೋಡು... ತಾಯಿ ತಂದೆಯವರಿಗೆ ಮಕ್ಕಳೆಂದೂ ವಿಧೇಯರಾಗಿರಬೇಕು. ನಿಜ – ಅದು ತಮ್ಮ ಬಾಳನ್ನೇ ಬಲಿಕೊಡುವಂತಹ ವಿಧೇಯತೆಯಲ್ಲ. ದೊಡ್ಡವರಾದರೂ ಸ್ವಾರ್ಥಕ್ಕೆ ದಾಸರಾದಾಗ ಕಿರಿಯರು ಯೋಗ್ಯಾಯೋಗ್ಯತೆಗಳನ್ನು ವಿವೇಚಿಸಬೇಕು. ಒಳಿತು ಕೆಡಕುಗಳನ್ನು ತುಲನೆಮಾಡಿ ನಿರ್ಧರಿಸಬೇಕು. ಹಿರಿಯರಿಗೆ ವಿಧೇಯರಾಗಿರಬೇಕೆಂದಾಕ್ಷಣ ಪ್ರಾಣದಾನ ಮಾಡಬೇಕು ಎಂದೂ ಎಲ್ಲೂ ಇಲ್ಲ. ಸುಶೀಲಳೊಂದಿಗೆ ನೀನು, ನಿನ್ನೊಂದಿಗೆ ಸುಶೀಲ ಸೇರಿದರೆ, ಹಾಲಿನೊಂದಿಗೆ ಜೇನಿನ ಸಂಗಮವಾದಂತಾಗುತ್ತದೆ. ನಿಮ್ಮ ಬಾಳು ಪರಿಪೂರ್ಣವಾಗಿ, ನಿತ್ಯ ಮಂಗಳವಾಗುತ್ತದೆ. ನಂದನವನವಾಗುತ್ತದೆ. ಪ್ರೇಮ ಸರಸಿಯಲ್ಲಿನ ಬಾಳ ನೌಕೆಯ ಸಂಚಾರವಾಗುತ್ತದೆ. ಪ್ರೇಮ ಜಲದ ಸ್ಪಟಿಕ ಸರೋವರವಾಗುತ್ತದೆ. ನಿಮ್ಮಂತಹ ತಾಯಿ ತಂದೆಯರು!... ನನ್ನ ಉದಯ ಅದೃಷ್ಟವಂತ! ನನ್ನ ಕಣ್ಣು ತುಂಬಿ ಬರುತ್ತಿದೆ. ಅವನಿನ್ನೂ ನಿದ್ರಿಸುತ್ತಿದ್ದಾನೆ. ಪಕ್ಕದಲ್ಲಿ ನಾನು ಮಲಗಿದ್ದೇನೆಂದು ಹಾಯಾಗಿ ನಿದ್ರಿಸುತ್ತಿದ್ದಾನೆ. ನನ್ನ ಕೈ ಅದುರುತ್ತಿದೆ. ಲೇಖನಿ ಮುಂದೋಡದೆ ಸತ್ಯಾಗ್ರಹ ಮಾಡುತ್ತಿದೆ. ಇನ್ನು ಮುಕ್ತಾಯ ಮಾಡಲೇ..?

ನಾನು ಈ ಬಾಳಿನಿಂದ, ದುಃಖದಿಂದ, ಕಣ್ಣೀರಿನಿಂದ, ಅಶಾಂತಿಯಿಂದ, ಆಲೋಚನೆಯಿಂದ, ಆವೇದನೆಯಿಂದ, ಶಾಶ್ವತವಾದ ಮುಕ್ತಿಯನ್ನು ಪಡೆಯುತ್ತಿದ್ದೇನೆ. ಇದು ಎಂತಹ ಸುದಿನ! ಅಣ್ಣಾ! ಉರುಳುರುಳಿ ನಗಬೇಕೆನ್ನಿಸುತ್ತಿದೆ. ಬಾಳಿನಲ್ಲಿ ನಾನು ಸೋತು ಹೋದೆ. ಇದು ಭಂಗವಲ್ಲ! ಪರಾಜಯ! ಪ್ರತಿ ಹೆಣ್ಣು ಒಬ್ಬ ಭಾನುಮತಿಯಾಗದಿರಬಹುದು. ಆದರೂ ಇಂದಿನ ಸಮಾಜದಲ್ಲಿ ಸಾವಿರಾರು ಮಂದಿ ಭಾನುಮತಿಯರಿದ್ದಾರೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ತೀವ್ರ ಕ್ರಮವಾದ ಬದಲಾವಣೆಗಳಾಗುತ್ತಿರುವ ದೆಸೆ ಇದು. ಈ ಪರಿಣಾಮ ಕ್ರಮದಲ್ಲಿ, ಒಂದೆಡೆ ಪುರೋಗಮನ! ಮತ್ತೊಂದೆಡೆ ತಿರೋಗಮನ! ಎಚ್ಚರಗೊಳ್ಳುತ್ತಿರುವ ಸ್ತ್ರೀ ಜಾತಿಯ ಚೈತನ್ಯ ಕರುಡಗಟ್ಟಿದ ಸಮಾಜದೊಂದಿಗೆ ಘರ್ಷಣೆಗೊಳಗಾಗಿದೆ, ತಲ ತಲಾಂತರಗಳಿಂದ ಸ್ಥಿರವಾಗಿರುವ ಪುರುಷನ ಅಧಿಕೃತೆಯ ಕೆಳಗೆ ಸ್ತ್ರೀಯ ಚೈತನ್ಯ ನುಚ್ಚುನೂರಾಗುತ್ತಿದೆ. ಆದರೂ ಈ ದಂಗೆ ನಿನಗಾಗಿ ನನಗಾಗಿ ನಿಲ್ಲದು. ಇದೊಂದು ಏರು ಪ್ರವಾಹದಂತೆ. ಪ್ರವಾಹಕ್ಕೆ ಎದುರಾಗಿ ಈಜಬಯಸುವವರು ಕೊಚ್ಚಿಕೊಂಡು ಹೋಗುತ್ತಾರೆ. ಆ ದಿನಕ್ಕಾಗಿಯೇ ಕೆಲಮಂದಿ ಭಾನುಮತಿಯರು ಬಲಿಯಾಗಬೇಕು.

ನಂತರ ನನ್ನ ಮಗುವಿಗೊಂದು ಹುಚ್ಚು ಹುಚ್ಚು ಕಾಗದ ಬರೆದಿದ್ದೇನೆ. ಅದನ್ನು

ಜೋಪಾನವಾಗಿರಿಸಿ, ನನ್ನ ಮಗ ದೊಡ್ಡವನಾಗಿ, ಓದುವ ಚೈತನ್ಯ ಅವನಿಗೆ ಬಂದಾಗ ಕೊಡುವುದನ್ನು ಮರೆಯಬೇಡ.

ಇನ್ನು ನಾನು ಹೊರಡುತ್ತೇನೆ... ಮಗು ನಿದ್ರೆಯಿಂದೆದ್ದರೆ ಏನೂ ಮಾಡಲಾಗದು...

ನೀನು ಪ್ರೀತಿಯಿಂದ ನನಗೆ ಕೊಟ್ಟ ಗಡಿಯಾರವನ್ನು ನನ್ನೊಂದಿಗೇ ತೆಗೆದುಕೊಂಡು ಹೋಗುತ್ತಿದ್ದೇನೆ. ಅದು ನನ್ನ ಶರೀರದ ಒಂದು ಭಾಗವೇ... ನನ್ನೊಂದಿಗೆ ಅದೂ ಅನೇಕ ಅಪಹಾಸ್ಯಕ್ಕೊಳಗಾಗಿದೆ.

ಶಾಶ್ವತವಾಗಿ ನಿನ್ನನ್ನೂ ನನ್ನ ಕಂದನನ್ನೂ ಸರ್ವಸ್ವವನ್ನೂ ಕಳೆದುಕೊಳ್ಳುತ್ತಿರುವ ,

ಭಾನುಮತಿ."

*　　　*　　　*

ಕಾಗದವನ್ನು ಮಡಿಚಿ ಜೇಬಿನಲ್ಲಿಟ್ಟುಕೊಂಡು ಬಿಕ್ಕಿ ಬಿಕ್ಕಿ ಅತ್ತು ಬಿಟ್ಟೆ. ನನ್ನ ಮನಸ್ಸು ಎಚ್ಚರಿಸುತ್ತಿತ್ತು. ಭಾನುವಿನ ಕೋರಿಕೆ ಬರೀ ಕೋರಿಕೆಯಲ್ಲ? ಅಪ್ಪಣೆ! ಶಾಸನ! ಅದನ್ನು ಮೀರಕೂಡದು.

ಭಾನು ನನಗಿಂತಲೂ ಚಿಕ್ಕವಳು. ನನ್ನೊಂದಿಗೆ ಕಲಿತು ಓದಿದವಳು. ಆಟವಾಡಿದವಳು. ನಾನು ಒಂದೇ ರೀತಿಯಲ್ಲಿದ್ದೇನೆ. ಭಾನು ಗೃಹಿಣಿಯಾದಳು, ಪತ್ನಿಯಾದಳು, ತಾಯಿಯಾದಳು. ಕೊನೆಗೆ ಅವ್ಯವು ಆದಳು. ನನ್ನ ಬಾಳಿನಲ್ಲಿ ಯಾವ ರೀತಿಯ ವೈವಿಧ್ಯತೆಯೂ ಇಲ್ಲ. ಭಾನು ಸುಖಿಸಿದಳು, ದುಃಖಿಸಿದಳು, ವಿರಕ್ತಿಗೊಂಡಿದ್ದಳು. ಸಮಸ್ತವನ್ನೂ ವಾಂಛಿಸಿದ್ದಳು. ಸರ್ವಸ್ವವನ್ನೂ ಕಳೆದುಕೊಂಡಳು.

ನಾನು ಬದುಕಿಯೇ ಇದ್ದೇನೆ. ಭಾನು ಸತ್ತೇಹೋದಳು; ಹಾಗೇ ಎಷ್ಟು ಹೊತ್ತು ಕುಳಿತಿದ್ದೆನೋ ನನಗೇ ಗೊತ್ತಿಲ್ಲ. ಅಕ್ಕ ನನ್ನನ್ನು ಹುಡುಕುತ್ತಾ ಬಂದು,

"ಭಾನೂ ಮಗ ಊಟ ಮಾಡದೆ ಅಳುತ್ತಿದ್ದಾನೆ ನೋಡೋ ಕೇಶವ!" ಎಂದಳು.

ಕೂಡಲೆ ಎದ್ದು ಹೋದೆ.

ಉದಯ ಬಾಗಿಲ ಹತ್ತಿರ ನಿಂತುಕೊಂಡು,

"ಅಮ್ಮಾ... ಅಮ್ಮಾ!" ಎಂದು ಜೋರಾಗಿ ಅಳುತ್ತಿದ್ದ. ಅವನನ್ನು ನೋಡಿ ನನಗೆ ದುಃಖ ತುಂಬಿ ಬಂತು.

"ಬಾಮ್ಮ... ಮರಿ!" ಎಂದು ಎತ್ತಿಕೊಂಡು ಹೆಗಲ ಮೇಲೆ ಹಾಕಿಕೊಂಡೆ.

"ಮಾವಯ್ಯಾ... ಅಮ್ಮಾ....!"

"ಬರುತ್ತಾಳೆ ಕಂದಾ! ಊರಿಗೆ...ಹೋಗಿದ್ದಾಳೆ. ರೈಲಿನಲ್ಲಿ ಬಂದು ಬಿಡುತ್ತಾಳೆ. ನೀನು... ಊಟ ಮಾಡುತ್ತೀಯಾ? ನಾನೇ ತಿನ್ನಿಸುತ್ತೇನೆ."

"ಊಹುಂ! ಅಮ್ಮಾ... ನಮ್ಮಮ್ಮ..."

"ನೋಡಪ್ಪ, ಅಮ್ಮ ಬರುವ ಹೊತ್ತಿಗೆ ನೀನು ಊಟ ಮಾಡಿ ಬಿಟ್ಟಿದ್ರೆ ಚೆನ್ನಾಗಿರತ್ತಪ್ಪ. ಅಮ್ಮಾ ಬೊಂಬೆಗಳನ್ನೆಲ್ಲಾ ತರುತ್ತಾಳೆ. ಬಿಸ್ಕತ್ತು, ಬನ್ನು ಎಲ್ಲಾ ತರುತ್ತಾಳೆ. ಬೊಂಬೆ ಇಟ್ಟುಕೊಂಡು ಆಡೋಣ."

"ನಮ್ಮಮ್ಮ ಎಲ್ಲೋಗಿದಾಳೆ?"

"ಊರಿಗೆ ಹೋಗದ್ದಾಳೆ ಮರಿ! ಆಗ ನೀನು ನಿದ್ರೆ ಮಾಡುತ್ತಿದ್ದೆ."

"ಊ.... ಊ... ನನ್ನ ಏಕೆ ಕರಕೊಂಡೋಗ್ಲಿಲ್ಲ?"

ಎನ್ನುತ್ತಾ ಮತ್ತೆ ಅಳಲಾರಂಭಿಸಿದ. ನನ್ನ ಮನಸ್ಸು ಕತ್ತರಿಯ ಅಲಗುಗಳ ಮಧ್ಯೆ ಸಿಕ್ಕಿಕೊಂಡ ಹಾಗಿತ್ತು. ಅವನನ್ನು ಹಾಗೆಯೇ ಎದೆಗವಚಿಕೊಂಡೆ.

"ಅಮ್ಮ ಬಂದು ಬಿಡುತ್ತಾಳೆ ಕಂದ, ಅಲ್ಲೀವರೆಗೂ ನನ್ನೇ ನೋಡಿಕೊಂಡಿರು ಎಂದು ಹೇಳಿದ್ದಾಳೆ! ಹೌದಪ್ಪ! ಈಗ ಅನ್ನ ತಿಂತೀಯಾ?"

"ಹುಂ, ಹಾಗಾರೆ ನೀನು ತಿಂತೀಯಾ?"

"ನಾವಿಬ್ರೂ ಒಂದೇ ಎಲೇಲಿ ಊಟ ಮಾಡೋಣ ಬಾ!"

"ಅಮ್ಮ ಎಲ್ಲಿ ಊತ ಮಾತಾಲೆ?"

"ಅಮ್ಮ... ಅಮ್ಮ... ಊರಿಗೆ ಹೋಗಿದ್ದಾಳಲ್ಲ! ಅಲ್ಲಿ ಅವರು ಎಲ್ಲಾ ಬಡಿಸುತ್ತಾರೆ."

"ಮೊಸ್ರು(ಮೊಸರು) ಹಾತಾರ?(ಹಾಕುತ್ತಾರೆಯೆ?)"

"ಹುಂ... ಮೊಸರು... ತುಪ್ಪ... ಎಲ್ಲ ಹಾಕುತ್ತಾರೆ. ನೀನೂ ಮೊಸರು ಹಾಕಿಸಿಕೊಂಡು ತಿನ್ನು ಬಾ ಮತ್ತೆ."

ಒಂದು ಗಂಟೆಯ ಹೊತ್ತಿಗೆ ಎಷ್ಟೋ ಪ್ರಶ್ನೆಗಳನ್ನು ಹಾಕಿ, ಉತ್ತರ ಪಡೆದು, ಅಮ್ಮ ಆಮೇಲೆ ಬರುತ್ತಾಳೆಂದು ನಂಬಿಕೆ ಇರಿಸಿಕೊಂಡು ಆಗ ಊಟ ಮಾಡಲು ಒಪ್ಪಿಕೊಂಡ. ಅನ್ನವನ್ನು ಕಲಸಿ ಮುಂದಿಡುವ ಹೊತ್ತಿಗೆ ಹತ್ತು ಗಂಟೆಯಾಗುತ್ತಿತ್ತು. ಸಾಯಂಕಾಲ ಎಲ್ಲರೂ ಚಿಂತೆಯ ಭಾರದಿಂದ ಕುಳಿತಿದ್ದರು.ಎಂಟು ಗಂಟೆಯ ಹೊತ್ತಿಗೆ ನೆರೆಮನೆಯ ಮುದುಕಿ ಬಂದು ಕೊಂಚ ಅನ್ನ ಹಾಕಿದಳು. ಅಕ್ಕ ಎದ್ದು ಮಕ್ಕಳಿಗೆಲ್ಲಾ ಅನ್ನ ಕಲಿಸಿ ಇಟ್ಟಳು.

ನಾನೂ, ಮಗುವಿನ ಸಮಾಧಾನಕ್ಕಾಗಿ ಒಂದೆರಡು ತುತ್ತು ತಿನ್ನಬೇಕಾಗಿ ಬಂತು. ಮಗುವಿಗೆ ಊಟ ಮಾಡಿಸಿ ಹಾಗೆಯೇ ಹೆಗಲ ಮೇಲೇ ಮಲಗಿಸಿ ನಿದ್ರೆ ಮಾಡಿಸಿ, ಅವನು ನಿದ್ರಿಸಿದ ನಂತರ ಎದ್ದು ಕೋಣೆಗೆ ಹೋದೆ.

ಅರ್ಧ ರಾತ್ರಿಯ ಸಮಯ... ಮನೆ ಎಲ್ಲಾ ನಿಶ್ಶಬ್ದದಿಂದ ತುಂಬಿತ್ತು. ಎತ್ತೆತ್ತಲೂ ಏನೋ ಅವ್ಯಕ್ತ ಭಯ ಅಣಕಿಸುತ್ತಿತ್ತು. ಚಿಕ್ಕಮ್ಮ ಇದ್ದಕ್ಕಿದ್ದಂತೆ ಎದ್ದು ಎದ್ದು ಅಳುತ್ತಾ ಕುಳಿತು ಬಿಡುತ್ತಿದ್ದಳು. ನಾನು ಕೋಣೆಗೆ ಹೋಗಿ, ಭಾನು ಮಗನಿಗೆ ಬರೆದಿದ್ದ ಕಾಗದವನ್ನು ಬಿಡಿಸಿದೆ. ಅವಳ ಮಾತು ಕೇಳಬೇಕೆಂದರೆ ತುಂಬಾ ಆಸೆಯಾಗುತ್ತಿತ್ತು. ಕಾಗದದ ಮುಖಾಂತರ ವಾದರೂ ಅವಳೊಂದಿಗೆ ಮಾತನಾಡಬೇಕೆನ್ನಿಸಿತು. ಕಾಗದದಲ್ಲಿ ಅನೇಕ ಕಡೆ ಅಕ್ಷರಗಳು ಚೆದುರಿಹೋಗಿತ್ತು.

* * *

ಅಪ್ಪಾ!

ಉದಯಾ! ನನ್ನ ಕಂದಮ್ಮಾ! ನಿನ್ನನ್ನು ಏನೆಂದು ಕರೆಯಲಿ ದೇವರು! ಮೂರು ವರ್ಷಗಳ ನಿನ್ನನ್ನು ಸರಿಯಾಗಿ ಮಾತನಾಡಲೂಬಾರದ ನಿನ್ನನ್ನು, ಇಪ್ಪತ್ತೈದರ ಹರೆಯದ ಹುಡುಗನನ್ನಾಗಿ, ಎಲ್ಲವನ್ನೂ ತಿಳಿದ ಪೂರ್ಣ ಪುರುಷನೆಂದು ಊಹಿಸಿಕೊಳ್ಳುತ್ತಾ, ಕಾಗದ

ಬರೆಯಬೇಕೆಂದರೆ ನನಗೇನೂ ತೋಚುತ್ತಿಲ್ಲ. ಮಗೂ! ನಿನಗೆ ನಾನು ಈ ಕೊನೆಯ ಘಳಿಗೆಯಲ್ಲಿ ಏನೋ ಹೇಳಬೇಕು, ಇನ್ನೇನೋ ಬೋಧಿಸಬೇಕು. ಎಷ್ಟೋ ವಿಷಯಗಳನ್ನು ನಿನಗೆ ಅರ್ಥವಾಗುವಂತೆ ವಿಶದಪಡಿಸಬೇಕೆಂದೂ ತಪ್ಪಿಸಿಹೋಗುತ್ತಿದ್ದೇನೆ. ಈಗ ನಾನು ನಿನ್ನ ಪಕ್ಕದಲ್ಲಿಯೇ ಕುಳಿತಿದ್ದೇನೆ. ನೀನು ಗಾಢ ನಿದ್ರೆಯಲ್ಲಿದ್ದೀ, ನಡು ನಡುವೆ ನೀನು ನಗುತ್ತಿದ್ದೀ. ನಿನ್ನನ್ನು ಮುದ್ದಾಡಬೇಕೆಂದು ಆತ್ಮ ಆತುರಪಡುತ್ತಿದೆ. ಆದರೆ ನಾನು ಈಗ ನಿನ್ನನ್ನು ಮುದ್ದಾಡಬಾರದು. ನಿನ್ನದು ಹೂವಿನಂತಹ ಮನಸ್ಸು. ಪ್ರತಿ ಸಣ್ಣ ಸಪ್ಪಳಕ್ಕೂ ಎಚ್ಚರಗೊಳ್ಳುತ್ತೀ. ಈಗ ನೀನು ಎಚ್ಚರಗೊಂಡರೆ ನಾನೇನಾದರೂ ಮಾಡಬಲ್ಲನೇ? ನೀನು ಮಾಡಲು ಬಿಡತ್ತೀಯಾಮ್ಮಾ?

ಕಂದಾ! ನಿನಗೆ ... ಅಮ್ಮ... ಇಲ್ಲದಂತೆ... ಮಾಡುತ್ತಿದ್ದೇನೆ. ನೀನು ನಿದ್ರೆಯಿಂದೆದ್ದು ಅಳುತ್ತೀ. ಏನು ಅರಿಯದೆ ಅಳುತ್ತೀ.. ಎಲ್ಲರ ಮುಖವನ್ನೂ ಅಮ್ಮನಿಗಾಗಿ ಹುಡುಕುತ್ತೀ. ಅಮ್ಮ ಎಲ್ಲೂ ಕಾಣದಿದ್ದರೆ, ದಿನಗಟ್ಟಳೆ ಅಮ್ಮ ಮಾಯವಾದರೆ ನಿನ್ನ ಹಸು ಹೃದಯ ಒದ್ದಾಡುತ್ತದೆ. ಬಾಯರಿಯದ ನೀನು ಬಾಯಿ ಬಿಟ್ಟು ಹೇಳಿಕೊಳ್ಳಲಾರದ ವೇದನೆಯಿಂದ ಅಳುತ್ತೀ. ನಿನ್ನ ಎಳೆಯ ಮನಸ್ಸನ್ನು ಬಹಳವಾಗಿ ನೋಯಿಸುತ್ತಿದ್ದೇನೆಂದು ನನಗೆ ಗೊತ್ತು. ನನ್ನನ್ನು ಕ್ಷಮಿಸುತ್ತೀಯಾ ಚಿನ್ನಮ್ಮ? ನೀನೇ ಯೋಚಿಸು. ಕಾಲಿಗೆ ಮುಳ್ಳು ಚುಚ್ಚಿದರೇ ಒದ್ದಾಡುತ್ತೀವಲ್ಲ ನೋವು ಎಂದು! ಇಂತಹ ಸುಕುಮಾರವಾದ ಶರೀರವನ್ನು ನಾವಾಗಿ ತ್ಯಜಿಸಬೇಕೆಂದರೆ, ಕೈಯಾರೆ ಬೆಂಕಿ ಹಾಕಿಕೊಳ್ಳಬೇಕೆಂದರೆ, ನಡೆದು ಹೋಗಿ ಸಾಗರದಲೆಗಳಲ್ಲಿ ಐಕ್ಯವಾಗಲು, ತನ್ನ ಕೈಯಾರೆ ತನ್ನ ಕೊರಳಿಗೆ ಉರುಲು ಹಾಕಿಕೊಳ್ಳಲು, ತನ್ನ ಬಾಳನ್ನು ತಾನೇ ಅಸಹ್ಯಿಸಿಕೊಳ್ಳಲು ಕಾರಣಗಳೆಷ್ಟು ಬಲವಾದುವೋ ಯೋಚಿಸು! ಯೋಚಿಸಬಲ್ಲೆಯಾದರೆ ನೀನು ನನ್ನನ್ನು ಕ್ಷಮಿಸಬಲ್ಲೆ ಕಂದ? ಕ್ಷಮಿಸುತ್ತೀ!

ನೀನು ನನ್ನ ಗರ್ಭದಲ್ಲಿದ್ದೀ ಎಂದು ತಿಳಿದ ಘಳಿಗೆಯಲ್ಲಿ ನನಗೆ ಏನೇನೋ ಆಯ್ತು! ನನ್ನನ್ನು ಮಾತ್ರ ಮೂರ್ತಿಯನ್ನಾಗಿ ಮಾಡಿದ ನನ್ನ ಚಿರಂಜೀವಿ! ನೀನು ಹುಟ್ಟಿದ ದಿನ ನಾನು ಎಲ್ಲವನ್ನೂ ಮರೆತೆ! ಕಣ್ಣು ತೆರೆಯದೆ ನಿನ್ನನ್ನು ಎದೆಗವಚಿಕೊಂಡು ಸಂತೋಷದಿಂದ ತಬ್ಬಿಬ್ಬಾಗಿ ಹೋದೆ. ನೀನು ಸೂರ್ಯನೊಂದಿಗೇ ಉದಯಿಸಿದೆ. ಅದಕ್ಕೇ ನಿನಗೆ 'ಉದಯ' ಎಂದು ಹೆಸರಿಸಿದೆ. ಬಾಳಿನಲ್ಲಿ ನಾನು ಸ್ವತಂತ್ರಿಸಿ ಮಾಡಿದ ಕೆಲಸ ಇದೊಂದೇ! ಅದಕ್ಕೇ ಕಾರಣವಿದೆ. ಒಬ್ಬ ವ್ಯಕ್ತಿ ಒಂದು ಕೆಲಸ ಮಾಡುವಾಗ ಬೇಕಾದವರು ಆತಂಕಪಡಿಸಲಿಲ್ಲ ವೆಂದರೆ ಇಷ್ಟು ಪೂರ್ತಿಯಾಗಿ ಎಂದಿಲ್ಲದಿರಬಹುದು. ಇಲ್ಲವೇ, ಆ ಕೆಲಸವನ್ನು ಗಮನಿಸದೇ ಇರಬಹುದು. ನಿನ್ನ ಹೆಸರಿನ ವಿಷಯದಲ್ಲಿ ಏನಾಯ್ತೋ ನೀನೇ ಊಹಿಸಿಕೋ.

ನಿನ್ನ ಮೇಲೆ ನಾನು ಏನೇನೋ ಆಸೆಗಳನ್ನಿರಿಸಿಕೊಂಡಿದ್ದೇನೆ. ನನ್ನ ಸಂತೋಷ ಸದನಕ್ಕೆ ನೀನೇ ಬುನಾದಿಯನ್ನು ಹಾಕುತ್ತೀ ಎಂದೂ, ಈ ಕತ್ತಲೆಯ ಬಾಳಿಗೆ ಬೆಳಕು ತೋರಿಸುತ್ತೀ ಎಂದೂ, ನನ್ನ ಕಣ್ಣೀರನ್ನು ನಿನ್ನ ಪುಟಾಣಿ ಕೈಗಳಿಂದ ಒರೆಸುತ್ತೀ ಎಂದೂ... ಇನ್ನೂ..ಇನ್ನೂ ನಾನು ಬದುಕಿದ್ದರೆ ನೀನು ಎಲ್ಲವನ್ನೂ ನೀನು ಮಾಡುತ್ತಿದ್ದೆ. ಆದರೆ ಕಂದಾ! ದುರದೃಷ್ಟ

ನನ್ನನ್ನು ಬದುಕಗೊಡುತ್ತಿಲ್ಲ. ಈಗ ಅದಕ್ಕಾಗಿ ನಾನು ಚಿಂತಿಸುತ್ತಿಲ್ಲ. ನನ್ನ ಚಿಂತೆ, ನನ್ನ ದುಃಖ, ನನ್ನ ಅಭಿಮಾನ, ನನ್ನ ಆವೇಶ ಎಲ್ಲವೂ ಗತದಲ್ಲಿ ಪೂರ್ತಿಯಾದುವು.

ಆದರೆ ಈ ಕೊನೆಯ ಘಳಿಗೆಯಲ್ಲಿ ನನ್ನಲ್ಲಿ ಉಳಿದಿರುವ ಒಂದೇ ಒಂದು ಬಯಕೆಯನ್ನು ನಿನ್ನಲ್ಲಿ ಹೇಳಿಕೊಳ್ಳುತ್ತಿದ್ದೇನೆ. ಅದನ್ನು ತೀರಿಸಬೇಕಾದವನು ನೀನೆ! ನೀನು ಬೆಳೆದು ದೊಡ್ಡವನಾಗಿ ಅಭಿವೃದ್ಧಿಗೆ ಬರಬೇಕು. ಆದರ್ಶಪ್ರಾಯ ವ್ಯಕ್ತಿಯಾಗಬೇಕು. ನಿನ್ನ ಗಂಡು ಲೋಕದಲ್ಲಿ, ಈ ಕುರುಡು ಕತ್ತಲೆಯ ಸಮಾಜದಲ್ಲಿ ಮಾಣಿಕ್ಯವಾಗಿ ಬೆಳೆಯಬೇಕು. ಅನ್ಯಾಯಗಳನ್ನು ನೋಡಿ ಅಸಹ್ಯಪಡುವ, ಅಕ್ರಮಗಳನ್ನು ನೋಡಿ ಆವೇಶ ಪಡುವ, ದೌರ್ಭಾಗ್ಯರನ್ನು ನೋಡಿ ಕಣ್ಣೀರು ಕರೆಯುವ, ನೀಚತ್ವವನ್ನು ನೋಡಿ ತಲೆ ತಗ್ಗಿಸುವಂತಹ ಪವಿತ್ರ ಮೂರ್ತಿಯಾಗಬೇಕು. ಆ ದಿನ ಬರಬೇಕು. ಅದನ್ನು ನೀನೇ ತರಬೇಕು. ಕೇಳಿದೆಯಾ ಪುಟ್ಟು! ಇದೊಂದು ಅತಿ ಸಣ್ಣ ಕೋರಿಕೆ ಎಂದುಕೊಳ್ಳುತ್ತೀಯಾ? ಮಾವಯ್ಯನ ರಕ್ಷಣೆಯಲ್ಲಿ ನೀನು... ನೀನು ಎಂದಿಗೂ ಹಾಗೇ ಬೆಳೆಸಲ್ಪಡುತ್ತೀಯಲ್ಲವೆ?

ನೀನು ಎಲ್ಲಕ್ಕಿಂತಲೂ ಮುಖ್ಯ ತಿಳಿಯುವಂತಹ ವಿಷಯ ಒಂದಿದೆ. ಈ ವಿಶಾಲ ಪ್ರಪಂಚದ ಸೃಷ್ಟಿಕರ್ತ ಭಗವಂತನಾಗಲೀ, ಮತ್ಯಾವ ಶಕ್ತಿಯಾಗಲೀ, ಯಾವುದಾದರೂ – ಈ ಪ್ರಕೃತಿಯಲ್ಲಿನ ಸರ್ವಜೀವಿಗಳೂ ಸಮಾನರು. ಆನೆ ಎಷ್ಟು ದೊಡ್ಡದೋ, ಇರುವೆ ಅಷ್ಟು ಚಿಕ್ಕದು. ಆದರೆ ಅದರದರ ವೈಶಿಷ್ಟ್ಯತೆ ಅದಕ್ಕಿದೆ. ಅದರದರ ಚಿಂತೆ ಅದಕ್ಕೆ ಇದೆ. ಇರುವೆ ನಿಕೃಷ್ಟವೂ ಅಲ್ಲ, ಆನೆ ಉತ್ಕೃಷ್ಟವೂ ಅಲ್ಲ. ಅದನ್ನು ನೀನು ಅರಿತುಕೊಂಡು ನೀನು ಒಪ್ಪಿಕೊಳ್ಳಬೇಕು.

ಎಲ್ಲಕ್ಕಿಂತಲೂ ಮಿಗಿಲಾದವನು ಉತ್ಕೃಷ್ಟನಾದವನು ಮಾನವ. ಯೋಚಿಸಬಲ್ಲ, ಅರ್ಥಮಾಡಿಕೊಳ್ಳಬಲ್ಲ, ಆಚರಿಸಬಲ್ಲ. ಈ ಒಂದು ಪ್ರತ್ಯೇಕತೆ ಪಶು ಪಕ್ಷಾದಿಗಳಲ್ಲಾಗಲೀ, ಕ್ರಿಮಿ ಕೀಟಾದಿಗಳಲ್ಲಾಗಲೀ, ಮತ್ಯಾವ ಪ್ರಾಣಿಯಲ್ಲೂ ಇಲ್ಲ. ಅದುದರಿಂದಲೇ ಮಾನವ ಮಾನವನಾಗಿಯೇ ಇರಬೇಕು. ಯಾವ ಒಂದು ಪ್ರಾಣಿಗೂ ಸಂಕ್ರಮಿಸದ ಆ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಬೇಕು. ಪಶುಗಳನ್ನು ನೋಡು! ತಿಂಡಿಗಾಗಿ ತನ್ನ ಕರುವಿನೊಂದಿಗೇ ತಾಯಿ ಗುದ್ದಾಡುತ್ತದೆ. ತಾಯಿಯೊಂದಿಗೇ ಮರಿ ಸುಖಿಸುತ್ತದೆ. ಅದು ಅವುಗಳ ತಪ್ಪಲ್ಲ; ಅವುಗಳಿಗೆ ಆ ಪರಿಜ್ಞಾನವನ್ನು ಭಗವಂತಾ ಪ್ರಸಾದಿಸಲಿಲ್ಲ. ಆದರೆ ಎಲ್ಲವನ್ನೂ ಬಲ್ಲ ಮಾನವ ಅಧಿಕಾರವನ್ನು ಆರಾಧಿಸಿದರೆ, ಅಕ್ರಮಗಳಿಗೆ ದಾಸನಾದರೆ, ನೈಜತೆಗೆ ತಲೆ ಬಾಗಿದರೆ ಅದು ಪಶುತ್ವವಲ್ಲವೆನ್ನುತ್ತೀಯಾ? ನೀನು ಮಾನವನಾಗಿ ಜನ್ಮಿಸಿದ್ದೀ. ಮಾನವನಾಗಿಯೇ ಜೀವಿಸು. ಮಾನವನಾಗಿಯೇ ಮರಣಹೊಂದು.

ನೀನು ಒಬ್ಬ ಆದರ್ಶಪ್ರಾಯವಾದ ಬಲವಾದ ವ್ಯಕ್ತಿತ್ವವನ್ನು ಏರ್ಪಡಿಸಿಕೊಂಡಂದು ಎದುರಾಳಿಯ ವ್ಯಕ್ತಿತ್ವನ್ನು ಕಾಪಾಡಬಲ್ಲೆ. ಇತರ ವ್ಯಕ್ತಿಯನ್ನು ಅರ್ಥ ಮಾಡಿಕೊಳ್ಳಬಲ್ಲೆ.

ನನ್ನ ಬಗೆಗೆ ನಿಮ್ಮ ಮಾವನಿಂದ ನೀನು ಬಹಳ ತಿಳಿದಿದ್ದೀ. ನಾನು ಪ್ರಸ್ತುತ ಸಾಮಾಜಿಕ ಬಾಳುವೆಗೆ ಉಪಯೋಗವಿಲ್ಲ. ಅಕ್ರಮವಾದ ಈ ಪುರುಷನ ಅಧಿಕಾರಕ್ಕೆ ತಲೆ ತಗ್ಗಿಸಲಾರೆ.

ಈ ಅಸಹಾಯ ಅಬಲ ಸ್ತ್ರೀಯ ಬಾಳನ್ನು ಆಮೋದಿಸಲಾರೆ. ಆದುರಿಂದಲೇ ನಾನು ನಿಷ್ಕ್ರಮಿಸುತ್ತಿದ್ದೇನೆ.

ಮತ್ತೆ ಕೆಲವು ತಲೆಗಳನಂತರ, ಹೆಂಗಸನ್ನು ಗಂಡಸು ಗೌರವಿಸುವಂತಾದಾಗ, ಹೆಂಡತಿಯನ್ನು ಗಂಡ ಪ್ರೇಮಿಸುವಂತಾದಾಗ ಈ ಶರೀರಗಳಲ್ಲಿ ಅಧಿಕಾರ ದಾಹ ಅಂತ್ಯವಾದಾಗ, ಪ್ರತಿ ಸನಾತನ ರಕ್ತ ಬಿಂದುವೂ ಇಂಗಿ ಗಾಳಿಯಲ್ಲಿ ಲೀನವಾದಂದು ನೀನು – ನಾನು, ಹೆಚ್ಚು – ಕಡಿಮೆ ಎನ್ನುವ ಅಂತರ ಅಂತ್ಯವಾದಂದು, ಪ್ರತಿ ಗೃಹವೂ, ಶಾಂತಿ ನಿಲಯಗಳಾದಂದು, ಪ್ರತಿ ಸ್ತ್ರೀ ಹೃದಯವೂ ಸಂತಸ ಸದನವಾದಾಗ, ಮನುಷ್ಯ ಮನುಷ್ಯನಾಗಿಯೇ ಬಾಳುವಂತಾದಾಗ, ಆಗ ನನಗೆ ಸ್ತ್ರೀಯಾಗಿ ಜನ್ಮಿಸುವ ಅಭಿಲಾಷೆಯಿದೆ. ಅಂತಹ ಪರಿಣಾಮಕ್ಕೆ ನಿನ್ನಂತಹ ಹಸುಗಂದಗಳು ಲಕ್ಷಾದಿ ಮಂದಿ ಶ್ರಮಿಸಬೇಕು. ಅಗತ್ಯವಾದರೆ ಕಿರು ನಗೆಯಿಂದಲೇ ಬಲಿಯಾಗಬೇಕು.

ಮಗೂ! ನನ್ನಪ್ಪ! ಬಾಳನ್ನು ಅನುಭವಿಸಲೆಂದೇ ಪ್ರಸಾದಿಸಲ್ಪಟ್ಟಿದೆಯಾಗಲೀ, ಹೀಗೆ ಕೈಯಾರೆ ನಾಶ ಮಾಡಿಕೊಳ್ಳಲಲ್ಲ. ಆದರೆ ಬಾಳನ್ನು ಅನುಭವಿಸಬೇಕೆಂದರೆ, ಬದಕಿರುವುದೊಂದೇ ಮುಖ್ಯವಲ್ಲ, ಈ ಶರೀರವನ್ನು ನಡೆಸುವ ಹೃದಯ ಹಾಳಾಗಕೂಡದು.

ಅಮ್ಮನನ್ನು ನೀನು ಅರ್ಥ ಮಾಡಿಕೊಳ್ಳಲು ಒಂದು ವಿಷಯ ಹೇಳುತ್ತೇನೆ. ನಾನು ಚಿಕ್ಕವಳಾಗಿದ್ದಾಗ ನನಗೆ ಜಡೆಹಾಕಲು ನಮ್ಮಮ್ಮ ಬಂಗಾರದ ಕುಚ್ಚು ತಂದು ಕಿಟಕಿಯಲ್ಲಿರಿಸಿದಳು. ಅಷ್ಟರಲ್ಲಿಯೇ ನನ್ನ ತಂಗಿ ಅತ್ತಿದ್ದರಿಂದ ಹಾಲು ಕೊಡಲೆಂದು ಎದ್ದುಹೋದಳು. ನಾನು ತಲೆಗೆದರಿಕೊಂಡೇ ಆಟವಾಡಲು ಓಡಿಹೋದೆ. ನಂತರ ನೆನಪು ಬಂತು, ಬಂದು ನೋಡಿದರೆ ಕಿಟಕಿಯಲ್ಲಿ ಕುಚ್ಚುಗಳಿಲ್ಲ. ಅಮ್ಮ ಹೆದರಿ ಕುಳಿತಳು. ಅಪ್ಪನಿಗೆ ಹೇಳಿದಾಗ ನಕ್ಕು ಸುಮ್ಮನಾದರು. ಅಂದಿನಿಂದ ಅಮ್ಮ ಎಂದೂ ಅಷ್ಟು ಆಲಸ್ಯದಿಂದಿರಲಿಲ್ಲ. ಅಂತಹ ಅನುರಾಗದ ಮಡಿಲಲ್ಲಿ ಬೆಳೆದ ನಾನು ನವಜೀವನದಲ್ಲಿ ಅಡಿ ಇರಿಸಿದ ನಾಲ್ಕೂ ವರ್ಷಗಳೂ ಬದುಕಿಯೇ ಇದ್ದೇನೆ. ದುಃಖದಿಂದ, ಕಣ್ಣೀರಿನಿಂದ, ಭಯದಿಂದ, ನಿರಾಶೆಯಿಂದ, ವಿರಕ್ತಿಯಿಂದ ಜೀವಚ್ಛವವಾಗಿ ಇಂದಿನವರೆಗೂ ಉಸಿರು ಎಳೆಯುತ್ತಲೇ ಇದ್ದೇನೆ.

ನಾನು ಇಲ್ಲವೆಂದು ನೀನು ವ್ಯಥೆಪಡಬೇಡ. ಮತ್ತೊಬ್ಬ ಸ್ತ್ರೀಯನ್ನು ಬದುಕಲೇ ಪ್ರಯತ್ನಿಸು. ನಾನು ದುಃಖಿಸಿದೆನೆಂದು ಚಿಂತಿಸಬೇಡ. ಮತ್ತೊಬ್ಬ ವ್ಯಕ್ತಿಯ ಕಣ್ಣೀರಿಗೆ ಮಾತ್ರ ಕಾರಣನಾಗಬೇಡ. ನಾನು ಖೈದಿಯಂತೆ ಬಾಳಿದೆನೆಂದು ಆವೇಶಪಡಬೇಡ. ಮತ್ತೊಬ್ಬ ವ್ಯಕ್ತಿಯ ಸ್ವಾತಂತ್ರವನ್ನು ನೀನು ಅಪಹರಿಸಬೇಡ. ನಾನು ಭಯದಿಂದಲೇ ಬಾಳಿದೆನೆಂದು ಲಜ್ಜೆಪಡಬೇಡ; ಮತ್ತೊಬ್ಬ ವ್ಯಕ್ತಿಯನ್ನು ಬಾಳಿನಲ್ಲಿ ಭಯಪಡದಂತೆ ನೋಡಿಕೋ, ಆಗಲೇ ನೀನು ಮಾನವನಾಗುವುದು.

ಇಂದಿನ ಸ್ತ್ರೀ ಪಡೆಯಲಾಗದ ನ್ಯಾಯವನ್ನು – ಅಂದಿನ ಸ್ತ್ರೀ ಅನುಭವಿಸಲವಕಾಶ ಕೊಡು. ಇಂದಿನ ಕಾಲು ದಾರಿಯನ್ನು ಅಂದಿನ ರಾಜಮಾರ್ಗವನ್ನಾಗಿ ಪರಿವರ್ತಿಸು. ಆಗಲೇ ನೀನು ಸಂಸ್ಕಾರಯುತನಾಗುವುದು.

ಅಪ್ಪ!.. ಉದಯ ಮರೀ! ನಿನಗೆ ನನ್ನ ಮನಸ್ಸಿನ ಅಂತರ್ಗತವನ್ನೆಲ್ಲಾ ಹೇಳಿದ್ದೇನೆ. ಇನ್ನು ಮುಗಿಸುತ್ತೇನೆ ಕಂದ! ನೀನೇಕೆ ಈ ರಾತ್ರಿ ಇಷ್ಟು ಗಾಢನಿದ್ರೆಯಲ್ಲಿದ್ದೀ? ನನ್ನ ಈ ದುಸ್ಸಾಹಸವನ್ನು ನೀನು ಅನುಮೋದಿಸುತ್ತೀಯಾಮ್ಮಾ? ನಿನ್ನನ್ನು ಬಿಟ್ಟು ಹೋಗಲು ಈ ಮನಸ್ಸು ಅಂಗೀಕರಿಸುತ್ತಿಲ್ಲ ಕಂದಾ! ಆದರೆ ಗತ್ಯಂತರವಿಲ್ಲ ಮಗು... ನನ್ನ ನಿರ್ಗಮನಕ್ಕೆ ಅನುಮತಿಕೊಡು... ನೀನು ಮಾವನೊಂದಿಗೆ ಹಾಯಾಗಿ ಆಡಿಕೋ!... ಹಾಗಾದರೆ ಹೋಗಲೇ?

ನನ್ನ ಚಿನ್ನಪ್ಪ... ನಿನಗೆ ನನ್ನ ಪ್ರೇಮದಾಶೀರ್ವಾದಗಳು. ತಾಯಿಯಾಗಿ ನಿನಗೆ ನನ್ನದೊಂದು ಅಪ್ಪಣೆ ಕೊಡುತ್ತಿದ್ದೇನೆ. ನಿನಗೆ ಜನ್ಮವಿತ್ತ ನಿನ್ನ ತಂದೆಯನ್ನೆಂದೂ ದ್ವೇಷಿಸಬೇಡ. ನನ್ನ ಮಾತು ನಡೆಸುತ್ತೀಯೆ. ನನಗೆ ಗೊತ್ತು –

– ಪ್ರೇಮದಿಂದ
ನಿನ್ನ ಅಮ್ಮ!

* * *

ಭಾನೂ! ...ಅಮ್ಮಾ! ...ಭಾನೂ! ....ಈ ದುಃಖವನ್ನು ನಾನು ತಡೆಯಲಾರೆ, ನಿನ್ನ ಸಾಹಸವನ್ನು ನಾನು ಕ್ಷಮಿಸುವುದಿಲ್ಲ. ನಿನಗೋಸ್ಕರ ಪರಿಸತಪಿಸುವ ಮಗುವಿಗೆ ಇಷ್ಟು ಅನ್ಯಾಯ ಮಾಡುತ್ತೀಯಾ? ಸ್ವಾರ್ಥಕ್ಕಿಂತ ತ್ಯಾಗ ಎಷ್ಟು ಘನವಾದುದೋ ಯೋಚಿಸಿದ್ದೀಯಾ? ನಿನ್ನ ಸ್ವಾರ್ಥಕ್ಕಾಗಿ ನಿನ್ನನ್ನು ಪ್ರೀತಿಸುವವರನ್ನು ಸರ್ವನಾಶ ಮಾಡುತ್ತೀಯಾ? ನೀನು ಸುಖಕ್ಕೆ ದೂರವಾಗಿಯಾದರೂ – ನನಗೋಸ್ಕರ, ಈ ಅಣ್ಣನಿಗೋಸ್ಕರ ಬದುಕಿರಬಾರದಾಗಿತ್ತೇ ಭಾನು? ಅಗ ನನ್ನದು ಸ್ವಾರ್ಥವೆನ್ನುತ್ತೀಯಾ? ನಿನ್ನ ಮಗುವನ್ನು ನೀನೇ ಸಾಕಲಾರದಾದೆಯಾ? ಅದಕ್ಕೆ ನಾನಿದ್ದೇನೆನ್ನುತ್ತೀಯಾ? ಇದು ನಿನಗೆ ನ್ಯಾಯವಲ್ಲ ಭಾನೂ! ನ್ಯಾಯವಲ್ಲಮ್ಮ! ನೀನು ಕಟ್ಟಿದ್ದೆಲ್ಲಾ ಮರಳಿನ ಮನೆಯೇ ಆದರೆ, ಅವು ಅನುಭವಕ್ಕೆ ಅಯೋಗ್ಯವಾದುದಾದರೆ ಅಪರಾಧ ಯಾರದೆನ್ನುತ್ತೀ? ಅದು ನಿನ್ನ ದುರದೃಷ್ಟವೆಂದು ನೀನು ಏಕೆ ತಿಳಿದುಕೊಳ್ಳುವುದಿಲ್ಲ ಭಾನೂ! ಈಗ ನಾನು ಎಷ್ಟು ಹೇಳಿದರೆ ತಾನೇ ನಿನಗೆ ಕೇಳಿಸುತ್ತದೆ? ಎಷ್ಟು ದುಃಖಿಸಿದರೆ ತಾನೇ ನಿನಗೆ ದಯೆ ಬರುತ್ತದಮ್ಮ...!

"ಕೇಶೂ! ಅಳುತ್ತಿದ್ದೀಯಾ?"

"ಹುಂ.... ಆ.. ಇಲ್ಲಕ್ಕ! ಭಾನು ನೋಡಿದೆಯಾ! ಎಂತಹ.."

"ಹೌದು, ಎಂತಹ ಕೆಲಸ ಮಾಡಿದಳು? ಕಾಗದಗಳಲ್ಲಿ ಎನು ಬರೆದಿದ್ದಾಳೆ?"

"ಕಾರಣವೇನೂ ಬರೆದಿಲ್ಲ. ಬರೆಯದಂಥದೇನೋ ನಡೆದಿರಬೇಕು. ಇಲ್ಲವಾದರೆ ನನಗೆ ಖಂಡಿತಾ ಬರೆಯುತ್ತಿದ್ದಳು."

ಅಕ್ಕ ಭ್ರಮೆಗೊಂಡವಳಂತೆ ನಿಂತಿದ್ದಳು.

"ಮಗು ಮಲಗಿದೆಯೆ?"

"ಹೊರಳಾಡುತ್ತಿದ್ದ, ತಟ್ಟಿ ಮಲಗಿಸಿ ಬಂದೆ. ನೀನೂ ಮಲಗಬಾರದೇನಮ್ಮ?"

"ಕುಳಿತರೂ, ಮಲಗಿದರೂ ಒಂದೇನಕ್ಕ! ಕಣ್ಣು ರೆಪ್ಪೆಯೊಂದಾಗದು. ಮನಸ್ಸೆಲ್ಲಾ ಅಲ್ಲೋಲಕಲ್ಲೋಲವಾಗಿದೆ."

"ಭಾನುವಿಗೆ ಯಾವ ಅದೃಷ್ಟವಿಲ್ಲವಾದರೂ, ನಿನ್ನಂತಹ ಅಣ್ಣನಿರುವುದೇ ಸಾಕು, ಅದಕ್ಕಾಗಿಯಾದರೂ ಬದುಕಿರಬೇಕಾಗಿತ್ತು."

"ಅಕ್ಕ! ನಮ್ಮ ದುಃಖದಿಂದ ನಾವು ಏನೇನೋ ಅಂದುಕೊಳ್ಳುತ್ತೇವಾಗಲೀ, ಭಾನುವಿನಂಥವಳಿಗೆ ಬೇರೆ ದಾರಿಯಿಲ್ಲ. ಅದು ನನಗೆ ಗೊತ್ತು."

ಮಾತನಾಡುತ್ತಾ ಕುಳಿತಿದ್ದು, ನಂತರ ತನ್ನ ಮಗು ಎದ್ದಿತೆಂದು ಎದ್ದು ಹೋದಳು ಅಕ್ಕ. ನಾನೆದ್ದು ಹೋಗಿ ಉದಯನ ಪಕ್ಕದಲ್ಲಿ ಮಲಗಿಕೊಂಡೆ. ಮನೆಯೆಲ್ಲಾ ಮೌನವಾಗಿದ್ದರೂ, ಯಾರಿಗೂ ನಿದ್ದೆ ಮಾತ್ರ ಇಲ್ಲವಾಗಿತ್ತು.

ಬೆಳಗಾಯ್ತು. ಮಗು ಮತ್ತೆ ಅಳಲಾರಂಭಿಸಿದ. ಮತ್ತೆ ಏನೋ ಹೇಳಿ ಮರುಳು ಮಾಡಲೆತ್ನಿಸಿದೆ. ಅವನು ನಂಬಲಿಲ್ಲ. ಅವನಿಗೆ ಊಹೆ ಜಾಸ್ತಿ.

"ನಮ್ಮಮ್ಮ... ಬರುತ್ತಾಳೇಂದೀ... ಮಾಮಯ್ಯ! ... ನಮ್ಮಮ್ಮ.. ಅಮ್ಮಾ.. ಅಮ್ಮಾ... ಅಮ್ಮ ಎಲ್ಲಿ ಮಾಮಯ್ಯ? ಎಂದು ಹಿಡಿದು ನಿಲ್ಲಿಸಿ ಕೇಳಿದ."

ನನಗೆ ದುಃಖ ಉಮ್ಮಳಿಸಿ ಬಂತು.

"ಬರುತ್ತಾಳೆ ಮರಿ! ನೆಂಟರು ನಿನ್ನೆ ಬಿಡಲಿಲ್ಲವೇನೋ! ಎರಡು ದಿನದಲ್ಲಿ ಬಂದು ಬಿಡುತ್ತಾಳೆ. ಅಲ್ಲೀವರೆಗೂ ನಿನ್ನೂ ನನ್ನನ್ನೂ ಆಡಿಕೋ ಎಂದು ಹೇಳಿದ್ದಾಳೆ.

"ಊಹೂಂ! ನಂಗೆ ಆಟ ಬೇಡ! ... ನನ್ನ ನಮ್ಮಮ್ಮನ ಹತ್ತಿರ ಕರೆದುಕೊಂಡು ಹೋಗು ಮಾಮಯ್ಯ..!"

ಎನ್ನುತ್ತಿರುವಂತೆ ಮಗು ಜೋರಾಗಿ ಅಳಲಾರಂಭಿಸಿದ.

ನಾನೇನೂ ಉತ್ತರ ಕೊಡಲೂ ಅಸಮರ್ಥನಾಗಿದ್ದೆ. ಅವನ ಜಟಿಲ ಪ್ರಶ್ನೆಗಳು ನನಗೆ ಉಸಿರು ಹಿಡಿದಂತೆ ಮಾಡಿದ್ದುವು. ಓರಿಗೆಯ ಹುಡುಗರ ಗುಂಪಿಗೆ ಸೇರಲಿಲ್ಲ. ನನ್ನನ್ನು ಬಿಟ್ಟು ಎಲ್ಲಿಗೂ ಹೋಗದೆ, ಯಾವಾಗಲೂ 'ಅಮ್ಮ!' ಎಂದು ದೀನಾತಿ ದೀನನಾಗಿ ಅಳುತ್ತಲೇ ಇರುತ್ತಿದ್ದ. ಅಂದು ಅವನು ಸರಿಯಾಗಿ ಊಟ ಮಾಡಲಿಲ್ಲ. ರಾತ್ರಿ ನನ್ನ ಪಕ್ಕದಲ್ಲಿಯೇ ಮಲಗಿಸಿಕೊಂಡೆ. ಅತ್ತು ಅತ್ತು ನಿದ್ರಿಸಿದ. ನಿದ್ದೆಯಲ್ಲೂ ಕೂಡ ನಡು–ನಡುವೆ 'ಅಮ್ಮ!' 'ಅಮ್ಮ!' ಎನ್ನುತ್ತಿದ್ದ. ಇದ್ದಕ್ಕಿದ್ದಂತೆ ಎದ್ದು ಕುಳಿತು ಅಳಲಾರಂಭಿಸುತ್ತಿದ್ದ. ಅವನನ್ನು ಹೇಗೆ ಸಮಾಧಾನಪಡಿಸುವುದೆಂದು ಯಾರಿಗೂ ತೋಚುತ್ತಿರಲಿಲ್ಲ. ಚಿಕ್ಕಮ್ಮ ಮುಟ್ಟ ಬಂದರೆ ಕಿಟಾರನೆ ಕಿರುಚಿಕೊಳ್ಳುತ್ತಿದ್ದ.

"ಬೇಡಮ್ಮ, ಯಾರ ಹತ್ತಿರವೂ ಹೋಗಬೇಡ. ನಾನೇ ಎತ್ತಿಕೊಳ್ಳುತ್ತೇನೆ! ನನ್ನಪ್ಪ ಅಳಬಾರದು ಮರೀ!" ಎನ್ನುತ್ತಾ ಹೆಗಲ ಮೇಲೆ ಹಾಕಿಕೊಂಡೆ.

ಪಾಪ, ಉದಯ ಹುಟ್ಟಿದಂದಿನಿಂದಲೂ ಒಂದು ಘಳಿಗೆಯೂ ತಾಯಿಯನ್ನು ಬಿಟ್ಟಿರುತ್ತಿರಲಿಲ್ಲ. ತಂದೆ ಮನೆಯಲ್ಲಿದ್ದರೂ ತಾಯಿಯೊಂದಿಗೇ ಸಲಿಗೆ. ಈಗ ಅವನಿಗೆ ಅರಿವು

ಬರುವ ಸಮಯದಲ್ಲಿ ತಾಯಿಯನ್ನೂ ಹೇಗೆ ಬಿಟ್ಟಿರುತ್ತಾನೆ? ಮರೆಯುತ್ತಾನೆ? ನನ್ನ ಹೃದಯದ ವೇಗ ಅತಿ ಜಾಸ್ತಿಯಾಯ್ತು. ಅವನು ತಾಯಿಯೆಂದು ಹಂಬಲಿಸಿ ಕೂಗಿದರೆ? ಹುಡುಗುತನವೆಂದೂ ಅವನೇ ಮರೆತು ಹೋಗುತ್ತಾನೆಂದೂ ತಿಳಿದುಕೊಂಡೆನಾಗಲೀ, ಅವನು ಮತ್ತೆ ನಿದ್ರೆಯಿಂದೆದ್ದು ಅತ್ತರೆ ಏನು ಮಾಡುವುದು? ಮೆಲ್ಲಗೆ ಹಾಸಿಗೆಯ ಮೇಲೆ ಮಲಗಿಸಿದೆ.

ಮತ್ತೆರಡು ದಿನಗಳೂ ಉರುಳಿದುವು. ಉದಯನಿಗೆ ತಾಯ ಹಂಬಲ ಜಾಸ್ತಿಯಾಯ್ತು. ಸರಿಯಾಗಿ ಊಟ ಮಾಡುವುದನ್ನೇ ಬಿಟ್ಟು ಬಿಟ್ಟ "ಅಮ್ಮಾ! ಅಮ್ಮಾ!" ಎಂದು ಯಾವಾಗಲೂ ವಿರಾಮವಿಲ್ಲದಂತೆ ಅಳುತ್ತಿದ್ದ. ಅಮ್ಮನನ್ನು ಕರೆದುಕೊಂಡು ಬಾ ಎಂದು ಹಟ ಹಿಡಿಯುತ್ತಿದ್ದ. ಹಾಗಿಲ್ಲವಾದರೆ ಅಮ್ಮನ ಹತ್ತಿರ ತನ್ನನ್ನೇ ಕರೆದುಕೊಂಡು ಹೋಗು ಎನ್ನುತ್ತಿದ್ದ.

ಚಿಕ್ಕಮ್ಮನ ಅಳುವಿನಿಂದ ಮತ್ತೂ ಭಯಗೊಂಡಿದ್ದ. ನಿದ್ರೆಯಲ್ಲಿ ಬೆಚ್ಚಿ ಬೀಳುವುದು, ಎದ್ದು ಕುಳಿತು ಅಳಲಾರಂಭಿಸುವುದು, ಎಲ್ಲರ ಮುಖದಲ್ಲಿ ಏನೋ ಹುಡುಕಲೆತ್ನಿಸಿ, ಸಿಗದೆ ಅಳುವುದು ಮಾಡುತ್ತಿದ್ದ ಅವನನ್ನು ನೋಡಿ ನನಗೇನೋ ಹೆದರಿಕೆಯಾಗುತ್ತಿತ್ತು. ಅಕ್ಕ ಚಿಕ್ಕಮ್ಮ ಅವನನ್ನು ಸಮಾಧಾನಪಡಿಸಲು ಪ್ರಯತ್ನಿಸುತ್ತಿದ್ದರು. ಅದರೆ ಅವನು ಯಾರ ಹತ್ತಿರವೂ ತಾನೂ ಸುಳಿಯುತ್ತಿರಲಿಲ್ಲ. ತನ್ನ ಹತ್ತಿರವೂ ಯಾರನ್ನೂ ಸೇರಿಸುತ್ತಿರಲಿಲ್ಲ. ಅಂದು ರಾತ್ರಿ ಅವನಿಗೆ ಜ್ವರ ಬಂತು. ಕೂಡಲೇ ಹೋಗಿ ಡಾಕ್ಟರನ್ನು ಕರೆದುಕೊಂಡು ಬಂದೆ. ಡಾಕ್ಟರ್ ಏನೋ ಇಂಜಕ್ಶನ್ ಕೊಟ್ಟು ಹೋದರು.

ಬೆಳಗಾಗುವ ಹೊತ್ತಿಗೆ ಜ್ವರ ಕಡಿಮೆಯಾಯ್ತು. ಅವನಿನ್ನೂ ನಿದ್ರಿಸುತ್ತಿದ್ದ.

ನಾನು ಮುಖ ತೊಳೆದುಕೊಂಡು ಬಂದು ಹತ್ತಿರ ಕುಳಿತೆ.

"ಉದಯಾ!.. " ನಿಧಾನವಾಗಿ ಮೆಲ್ಲಗೆ ಪ್ರೀತಿಯಿಂದ ಕರೆದೆ.

ಮೆಲ್ಲಗೆ ಕಣ್ತೆರೆದ.

"ಅಮ್ಮಾ ಕಳ್ಸು! ಎಚ್ಚರವಾಗಿದ್ದೀಯಾ?"

"ಅಮ್ಮ! ...ಎಲ್ಲಿ?"

ಅಯ್ಯೋ ಎಂತಹ ತಪ್ಪು ಕೆಲಸ ಮಾಡಿದೆ? ಆ ಪದ ಅವನ ನೆನಪಿಗೇ ಬರಕೂಡದು.

"ಮಾವಯ್ಯಾ!"

"ಉದಯಾ! ಕಾಫಿ ಕುಡಿತೀಯಾ? ಸ್ವಲ್ಪ!"

"ಉಹುಂ! ನಮ್ಮಮ್ಮ ಯಾವತ್ತೂ ಕಾಫಿ ಕೊಲಲ್ಲ!"

"ಹಾಲು ಕುಡೀತೀಯಾ?"

"ನಂಗೆ ಬ್ಯಾಲಾ!"

"ನೀನು ತುಂಟಾ ಒಳ್ಳೆಯೋನಪ್ಪ! ಸ್ವಲ್ಪ ಕುಡಿ, ತರಲಾ?"

"ಅಮ್ಮನ ಹತ್ಲ ಕಕ್ಕೊಂಡೋಗಲ್ವ?"

ಆಗಲಿ ಎಂದರೆ ಹಾಲು ಕುಡಿದ ನಂತರ ಹೊರಡು ಎನ್ನುತ್ತಾನೆ. ಉಹುಂ, ಎಂದರೆ ಹಾಲನ್ನೇ ಕುಡಿಯುವುದಿಲ್ಲವೆನ್ನುತ್ತಾನೆ. ನಾನು ಮಾತನಾಡದೇ ಕುಳಿತೆ. ಅವನು ಅಳಲಾರಂಭಿಸಿದ. ಅವನನ್ನು ನೋಡುತ್ತಿದ್ದರೆ ನನ್ನ ಹೊಟ್ಟೆಯುರಿದು ಹೋಗುತ್ತಿತ್ತು. ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ತಾಯಿಯನ್ನು ಕಳೆದುಕೊಂಡ ಅವನೆಷ್ಟು ದುರದೃಷ್ಟವಂತನೋ ಎಂದುಕೊಳ್ಳುತ್ತಿದ್ದೆ. ಅವನಿಗೆ ಕೋಪ ಬಂದು ನನ್ನಿಂದ ನಾಲ್ಕಡಿ ದೂರ ಹೋಗಿ ನಿಂತುಕೊಂಡ. ಅವನು ಅಳುತ್ತಿದ್ದುದನ್ನು ನೋಡುತ್ತಿದ್ದರೆ, ಅವನಿಗೆ ಯಾರೂ ದಿಕ್ಕಿಲ್ಲವೆನ್ನುವಂತೆಯೇ, ಅನಾಥನಾದಂತೆ, ಏಕಾಂಗಿಯಾಗಿ ವಿಲಪಿಸುತ್ತಿರುವಂತೆಯೂ ತೋರುತ್ತಿತ್ತು. ಇದೊಂದು ಹೊಸ ವ್ಯಥೆಯಿಂದ ಚಿಕ್ಕಮ್ಮ ಇನ್ನೂ ಕುಮುಲುತ್ತಿದ್ದಳು. ನಾನು ಅವನನ್ನು ಬಲವಾಗಿ ಹತ್ತಿರವೆಳೆದುಕೊಂಡೆ. ಅಸಹಾಯಕನಂತೆ ಬಂದು ನನ್ನ ತೊಡೆಯ ಮೇಲೆ ಬಿಕ್ಕುತ್ತಾ ಮಲಗಿದ.

* * *

ಉದಯನಿಗೆ ವಿಪರೀತ ಜ್ವರ ಬಂದಿತ್ತು. ಮೈ ಮೇಲೆ ಪ್ರಜ್ಞೆಯೇ ಇರಲಿಲ್ಲ. ಮಧ್ಯೆ ಮಧ್ಯೆ "ಅಮ್ಮಾ! ಅಮ್ಮಾ!" ಎಂದು ಕನವರಿಸುತ್ತಿದ್ದ. ಪಕ್ಕದ ಕೋಣೆಯಲ್ಲಿ ಡಾಕ್ಟರ್ ಇಂಜಕ್ಷನ್ ಕೊಡಲು ಸಿರಂಜು ಸಿದ್ಧಪಡಿಸುತ್ತಿದ್ದರು. ಮನೆಯಲ್ಲಿ ಎಲ್ಲರೂ ಮೌನದಿಂದ ಉದಯನ ಹತ್ತಿರವೇ ಇದ್ದರು. ಎಲ್ಲರ ಮುಖದಲ್ಲೂ ಏನೋ ಆಂದೋಳನೆ, ಏನೋ ಅವ್ಯಕ್ತ ಭಯ ವ್ಯಕ್ತವಾಗುತ್ತಿತ್ತು. ನಾನು ಎದ್ದು ಹೋದೆ. ಡಾಕ್ಟರ್ ಸಿರಂಜ್ ಕೈಲಿ ಹಿಡಿದುಕೊಂಡು ಬರುತ್ತಿದ್ದರು.

"ಡಾಕ್ಟರ್..." ಎನ್ನುತ್ತ ಕೈಹಿಡಿದುಕೊಂಡೆ. ಭಯದಿಂದಾಗಿ ನನ್ನ ಶರೀರ ಕಂಪಿಸುತ್ತಿತ್ತು. ಮಾತೇ ನನ್ನ ಬಾಯಿಂದ ಸರಿಯಾಗಿ ಹೊರಬರುತ್ತಿರಲಿಲ್ಲ. "ಉದಯನನ್ನು... ಬದುಕಿಸು... ಬದುಕಿಸುವುದಾಗಿ ವಾಗ್ದಾನ ಮಾಡಿ ಡಾಕ್ಟರ್!..."

"ಕೇಶವರಾವ್! ಭಯಪಡಬೇಡಿ, ನಾನು ಅತ್ಯುತ್ತಮವಾದ ಔಷಧಿಗಳನ್ನೇ ಕೊಡುತ್ತಿದ್ದೇನೆ. ನನ್ನ ಶಕ್ತಿ ಮೀರಿ ಪ್ರಯತ್ನಿಸುತ್ತೇನೆ."

"ಹಾಗಲ್ಲ ಡಾಕ್ಟರ್! ಉದಯ ಬದುಕುತ್ತಾನೆಂದು ಹೇಳಲಾರಿರಾ? ಅವನನ್ನು ಯಾವುದಾದರೂ ಸಿಟಿಗೆ ಕರೆದುಕೊಂಡು ಹೋಗಬೇಕೇ?"

"ಕೇಶವ್! ದುಡುಕುತ್ತಿದ್ದೀರಿ. ಉದಯನಿಗೆ ತಾಯಿಯ ಧ್ಯಾನ ಒಂದುಳಿದು ಇನ್ನೇನೂ ಇಲ್ಲ. ನನ್ನನ್ನು ವೈದ್ಯನನ್ನಾಗಲ್ಲದೆ, ನಿಮ್ಮ ಸೋದರನೆಂದು ಭಾವಿಸಿ, ಒಂದು ಹಸುಗೂಸಿಗೆ ಅನ್ಯಾಯ ಮಾಡುತ್ತೇನೆಯೇ?"

"ಕ್ಷಮಿಸಿ ಡಾಕ್ಟರ್! ನನ್ನ ಅಳಲಿನಾಳವನ್ನು ನೀವು ಅಳೆಯಲಾರಿರಿ. ನನ್ನ ತಂಗಿ ತನ್ನ ಮಗನನ್ನು ನನಗರ್ಪಿಸಿ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ಅವನನ್ನು ನಾನು ಉಳಿಸಿ ಕೊಳ್ಳದಾದರೆ, ಡಾಕ್ಟರ್... ನಾನು ಹೇಳಲಾರೆ ಅವನನ್ನು ಬದುಕಿಸಿಯೇ ತೀರಬೇಕು."

ಡಾಕ್ಟರ್ ನನ್ನನ್ನು ತಳ್ಳಿಕೊಂಡೇ ಹೊರಗೆ ಹೋದರು. ನಾನು ಹಿಂದೆಯೇ ಓಡಿದೆ. ಇಂಜಕ್ಷನ್ ನೋವಿನಿಂದ ಕಿಟಾರನೆ ಕಿರುಚಿದ ಉದಯ. ಕಣ್ಣುಮುಚ್ಚಿಕೊಂಡು ಬಹಳ ಹೊತ್ತು ಅಳುತ್ತಿದ್ದ.

ಕ್ರಮೇಣ ಹಗಲು ಕಳೆಯುತ್ತಿತ್ತು. ನಾಲ್ಕು ಕಡೆಯಿಂದಲೂ ಕತ್ತಲು ಕವಿಯುತ್ತಿತ್ತು.ಚಿಕ್ಕಮ್ಮ ನಾನು ಉದಯನ ಮಂಚದ ಹತ್ತಿರವೇ ಕುಳಿತಿದ್ದೆವು. ನನಗೆ ನಾಲ್ಕೈದು ದಿನಗಳಿಂದಲೂ ನಿದ್ರೆ ಬಂದಿರಲಿಲ್ಲ. ಹಾಗೇ ಉದಯನ ಪಕ್ಕದಲ್ಲಿ ಉರುಳಿಕೊಂಡೆ, ಕಣ್ಣುಬಿಡಲಾರದಂತೆ ಭಾರವಾಗಿ ನಿದ್ರೆ ಬಂತು.

* * *

ಹಜಾರವೆಲ್ಲಾ ಕತ್ತಲಮಯವಾಗಿತ್ತು. ಚಿಕ್ಕಮ್ಮ ಎದ್ದು ದೀಪವನ್ನೂ ಹಚ್ಚಿರಲಿಲ್ಲ. ಕತ್ತಲೆಯಲ್ಲಿಯೇ ಯಾರೋ ಮೆಟ್ಟಲೇರಿ ಬರುತ್ತಿದ್ದರು. ನಡಿಗೆಯನ್ನು ನೋಡಿದರೆ ಭಾನುವಿನ ಹೋಲಿಕೆಯಿತ್ತು. ಹತ್ತಿರವೇ ಬಂದ ವ್ಯಕ್ತಿ ಭಾನು!

"ಭಾನೂ!" ಎಂದು ಗಟ್ಟಿಯಾಗಿ ಕೂಗಿದೆ. ಚಿಕ್ಕಮ್ಮ ಎಚ್ಚರತಪ್ಪಿ ಉರುಳಿದಳು. ಭಾನೂ ಮತ್ತೂ ಹತ್ತಿರ ಬಂದು ನಕ್ಕಳು.

"ಕೋಪ ಬಂತಲ್ಲವೇ ನಿನಗೆ? ಬಂದು ಬಿಟ್ಟೆನಲ್ಲ? ನಾನು ಅಲೆಗಳಲ್ಲಿ ಹೊಡೆದುಕೊಂಡು ಹೋಗುತ್ತಿದ್ದಾಗ ಬೆಸ್ತರವನೊಬ್ಬ ಬದುಕಿಸಿದ. ಎರಡು ದಿನ ನನಗೆ ಎಚ್ಚರಿಕೆಯೇ ಬರಲಿಲ್ಲ."

ಏನೇನೋ ಹೇಳುತ್ತಿದ್ದಳು. ನಾನು ಹುಚ್ಚನಂತೆ ಮುಖ ನೋಡುತ್ತಿದ್ದೆ.

"ಅಯ್ಯೋ, ಉದಯನಿಗೆ ಜ್ವರ ಬಂದಿದೆಯೆ? ಕಂದಾ! ನನ್ನಮ್ಮ! ಬಂದೆ.... ಅಮ್ಮನ್ನ ನೋಡು ಕಂದ!"

ಎನ್ನುತ್ತಾ ಉದಯನನ್ನೆತ್ತಿಕೊಂಡು ಎದೆಗವಚಿಕೊಂಡಳು. ಉದಯನನ್ನೆತ್ತಿಕೊಂಡು ಗಾಳಿಯಲ್ಲಿ ಹಾಗೇ ತೇಲುತ್ತಾ....

"ಭಾನೂ!"

* * *

"ಕೇಶವಾ, ಕೇಶವಾ?"

ಯಾರೋ ಉರುಳಿಸಿ ಎಬ್ಬಿಸಿದರು. ಉದಯ ಪಕ್ಕದಲ್ಲಿಯೇ ಇದ್ದ. ದಿಗ್ಗನೆದ್ದು ಕುಳಿತೆ. ನನ್ನ ಶರೀರ ಗಡಗಡನೆ ನಡುಗುತ್ತಿತ್ತು. ಚಿಕ್ಕಮ್ಮ ನನ್ನ ಕೈ ಹಿಡಿದುಕೊಂಡಳು.

"ಚಿಕ್ಕಮ್ಮ! ಭಾನು ಬರಲಿಲ್ಲವೆ?"

"........."

"ಚಿಕ್ಕಮ್ಮ! ಭಾನುವನ್ನು ನೀನೂ ನೋಡಿದೆಯಲ್ಲವೆ?"

"ಕನಸು ಕಂಡೆಯಾ ಕೇಶು? ಭಾನು ತಿರುಗಿ ಬರುತ್ತಾಳೆಯೆ? ಅಂತಹ ಅದೃಷ್ಟವೇ?"

ನಿಧಾನವಾಗಿ ಹೇಳಿದಳು.

"ಕನಸಲ್ಲ ಚಿಕ್ಕಮ್ಮ! ಭಾನು ನಿಜವಾಗಿ ಬಂದಿದ್ದಳು ಚಿಕ್ಕಮ್ಮ! ನನ್ನೆದುರಿಗೇ ಬಂದಿದ್ದಳು ಭಾನು. ಒಬ್ಬ ಬೆಸ್ತರವನು ಬದುಕಿಸಿದನೆಂದು ಹೇಳಿದಳು."

"ನಿನಗೇ ಕನಸೇ ಆಯ್ತು ಕೇಶು. ಅಯ್ಯೋ ಭಾನು!"

ಎನ್ನುತ್ತಾ ಜೋರಾಗಿ ಅಳಲಾರಂಭಿಸಿದಳು ಚಿಕ್ಕಮ್ಮ.

ಉದಯ ಬೆಚ್ಚಿ ಎಚ್ಚೆತ್ತು ಎದ್ದು ಕುಳಿತ. ಭಯದಿಂದ ನನ್ನನ್ನು ಅಪ್ಪಿಕೊಂಡ. ಬೆನ್ನು ಸವರುತ್ತಾ ಹಾಗೇ ತೊಡೆಯ ಮೇಲೆ ಮಲಗಿಸಿಕೊಂಡೆ. ಹುಲ್ಲು ಕಡ್ಡಿಯಂತಾಗಿ ಹೋಗಿದ್ದ. ಕಣ್ಣು ಗುಂಡಿಯಲ್ಲಿಳಿದು ಅಂತರಾಳದಲ್ಲಿತ್ತು. ತಲೆಗೂದಲು ಚೆಲ್ಲಾಪಿಲ್ಲಿಯಾಗಿ ಚದುರಿಹೋಗಿತ್ತು. ಹೊಟ್ಟೆ ಬೆನ್ನಿಗೆ ಅಂಟಿಕೊಂಡಿತ್ತು. ನನಗೆ ದುಃಖ ಉಕ್ಕಿಬಂತು. ಈಗ ಭಾನು ಇದ್ದಿದ್ದರೆ, ನಿಜವಾಗಿ ಬಂದರೆ, ಉದಯ ಹೀಗಾಗುತ್ತಾನೆಂದು ತಿಳಿದಿದ್ದರೆ... ಭಾನು ಎಂದೂ ಅಂತಹ ಸಾಹಸಕ್ಕೆ ಕೈಹಾಕುತ್ತಿರಲಿಲ್ಲ.

ಬೀದಿಯತ್ತ ಕತ್ತಲಲ್ಲಿ ಶೂನ್ಯತೆಯನ್ನೇ ದಿಟ್ಟಿಸುತ್ತಾ ಕುಳಿತೆ. ಈ ಬಾರಿ ಯಾರೋ ನಿಜವಾಗಿಯೂ ಹಂತವನ್ನೇರಿ ಬರುತ್ತಿದ್ದರು. ನಾನೆದ್ದು ದೀಪ ಹಾಕಿದೆ. ವ್ಯಕ್ತಿಯನ್ನು ನೋಡಿ ಆಶ್ಚರ್ಯಗೊಂಡೆ. ಭಾವ! ಉದಯನ ತಂದೆ! ನಾನು ಹಾಗೆ ಬೆರಗಾಗಿ ನಿಂತಿದ್ದೆ. ಅವನು ಬಂದು ಉದಯನನ್ನು ನನ್ನ ಕೈಯಿಂದ ತೆಗೆದುಕೊಂಡ. ಅವನ ಮುಖವನ್ನೇ ತದೇಕ ದೃಷ್ಟಿಯಿಂದ ನೋಡುತ್ತಿದ್ದಂತೆ ಕಣ್ಣಿನಿಂದ ನೀರು ಧಾರಾಕಾರವಾಗಿ ಜಾರಿ ಹೋಗುತ್ತಿತ್ತು. ಉದಯನನ್ನು ಎದೆಗವಚಿಕೊಂಡ.

ಮಂತ್ರ ಮುಗ್ಧನಂತೆ ನಿಂತುಬಿಟ್ಟೆ.

ಭಾವ ಬದಲಾಯಿಸಿ ಹೋದನೆ! ನಿಜವಾಗಿಯೂ ಬದಲಾಯಿಸಿ ಹೋದನೆ? ಚಿಕ್ಕಮ್ಮನೂ ನನ್ನಂತೆಯೇ ಕಲ್ಲಿನಂತೆ ಕುಳಿತಿದ್ದಳು.

ಒಬ್ಬರೊಂದಿಗೊಬ್ಬರು ಯಾರೂ ಮಾತನಾಡಲಿಲ್ಲ. ಅವನು ಬೆಳೆದ ಗಡ್ಡ, ಕೆದರಿದ ತಲೆಯಿಂದ ಭಿಕಾರಿಯಂತೆ ಕಾಣುತ್ತಿದ್ದ. ಯಾವುದೋ ಸತ್ಯತೆಯನ್ನರಿತಂತೆ ಕುಮುಲುತ್ತಿದ್ದ. ಯಾರನ್ನು ನೋಡಲು ಮುಖವಿಲ್ಲದವನಂತೆ ಮಗನ ಮುಖವನ್ನೇ ನೋಡುತ್ತಿದ್ದ. ಆ ದೃಷ್ಟಿಯಲ್ಲಿ ನಿಜವಾದ, ಪವಿತ್ರವಾದ ಪಶ್ಚಾತ್ತಾಪವಿತ್ತು.

ಅಪ್ರಯತ್ನವಾಗಿ ಕಣ್ತೆರೆದ ಉದಯ. ಕಣ್ಣಗಲ ಮಾಡಿ ತಂದೆಯ ಮುಖ ನೋಡಿ ಕಿಟಾರನೆ ಕಿರುಚಿದ. ತಂದೆಯ ಕೈಯಿಂದ ಚಿಮ್ಮಿ ಗಾದೆಯ ಮೇಲೆ ಬಿದ್ದುಬಿಟ್ಟ. ನಾನು ಓಡಿಹೋಗುವ ಹೊತ್ತಿಗೆ ಮತ್ತೆ ತಂದೆ ಮಗನನ್ನೆತ್ತಿಕೊಳ್ಳ ಬಂದ.

"ಮಗು ಹೆದರಿಕೊಳ್ಳುತ್ತಿದ್ದಾನೆ. ನಾನು ಎತ್ತಿಕೊಳ್ಳುತ್ತೇನೆ" ಎಂದೆ. ಅವನು ತಲೆ ತಗ್ಗಿಸಿಕೊಂಡು ನೆಲದ ಮೇಲೆ ಕುಳಿತುಬಿಟ್ಟ. ಉದಯನಿಗೆ ಪ್ರಜ್ಞೆ ಇರಲಿಲ್ಲ. ಮೈಸವರುತ್ತಾ ತೊಡೆಯ ಮೇಲೆ ಮಲಗಿಸಿಕೊಂಡೆ.

"ಅ...ಮ್ಮಾ ....ಅಮ್ಮ ಅಮ್ಮ... ಅಮ್ಮ" ಎನ್ನುತ್ತಿದ್ದ. ನನಗೇನೂ ತೋಚಲಿಲ್ಲ. ಕೈ ಕೂಡ ಕದಲಿಸದಂತೆ ಮಲಗಿದ್ದ. ಅವನ ಮುಖದ ಮೇಲೆ ಬಾಗಿ ಕಣ್ಣಲ್ಲಿ ನೋಡಿದೆ. ಆ ಕಣ್ಣಿನಲ್ಲಿನ ಜ್ಯೋತಿ ಮಂದವಾಗಿತ್ತು. ಕಣ್ಣು ರೆಪ್ಪೆಗಳೂ ಕದಲಲಾರದಂತಿದ್ದುವು. ಡಾಕ್ಟರ್ ಬಂದರು. ಉದಯನ ಅರೆದೆರೆದ ಕಣ್ಣು ಪೂರ್ತಿಯಾಗಿ ಮುಚ್ಚಿಕೊಂಡಿತು. ಉದಯ ಅಸ್ತಮಿಸಿ ಬಿಟ್ಟ.

ತಂದೆ, ಮಗನ ಕಳೇಬರವನ್ನು ಎದೆಗವಚಿಕೊಂಡು ಮುಗಿಲು ಮುಟ್ಟುವಂತೆ ರೋದಿಸುತ್ತಿದ್ದ. ಆಡಿ ಕುಣಿಯುತ್ತಿದ್ದ ಮಗನನ್ನು, ಚೆಂಡಿನಂತೆ ಪುಟಿಸುತ್ತಿದ್ದ ಮಗನನ್ನು

ಒಮ್ಮೆಯಾದರೂ ಎತ್ತಿಕೊಂಡು, ಕೊನೆಗೆ ಕಣ್ಣೆತ್ತಿಯೂ ನೋಡದ ದುರದೃಷ್ಟಶಾಲಿ – ಭಗವಂತಾ! ನನ್ನನ್ನೂ ಕರೆದುಕೊಂಡು ಹೋಗೋ ತಂದೇ! ತಂಗೀ, ಭಾನೂ! ನನ್ನನ್ನು ಕ್ಷಮಿಸು ತಾಯೀ! ನನ್ನ ತಲೆ ಅತ್ಯಂತ ಭಾರವಾಗಿತ್ತು... ಕಣ್ಣು ಕತ್ತಲು ಕವಿಯುತ್ತಿತ್ತು.... ಉದಯಾ!

ಭಾನು '**ಬೇಡಿ ಬಂದ ಭಾಗ್ಯ** 'ವೇ ಅಷ್ಟೇ! ವ್ಯಕ್ತಿಗೆ ವ್ಯಕ್ತಿಯೇ ಬೆಲೆ ಎಂದು ನಂಬುವುದರಲ್ಲಿ ತಪ್ಪಡಿ ಇರಿಸಿದ್ದಳೇ! ವಿದ್ಯಾಭ್ಯಾಸದ ವಿಷಯದಲ್ಲಿ ಆಸೆ ನಿರಾಸೆಯಾಗಿ ನಂಬಿದಾಗ, ಅದು ಬಾಳಿನಲ್ಲಿನ ಒಂದು ಭಾಗವೇ ವಿನಹ ಬಾಳೇ ಅಲ್ಲವೆಂದು ಸರಿಹೋಗಿಸಿಕೊಂಡು, ನೈಜ ಬಾಳಿನಲ್ಲಿ ಬೇಡಿ ಬಂದ ಭಾಗ್ಯಗಳನ್ನು ಬಯಸುವುದರಲ್ಲಿ ಸೋತಳೇ? ಹೆಂಡತಿಯಾಗಿ, ಗೃಹಿಣಿಯಾಗಿ, ತನಗೊಂದು ವಿಶಿಷ್ಟ ಸ್ಥಾನಬೇಕೆಂದೂ ತನ್ನ ಗಂಡನ ಹೃದಯದಲ್ಲಿ ತನಗೆ ವಿಶಾಲವಾದ ಸ್ಥಳ ಲಭಿಸಬೇಕೆಂದೂ ಆಶಿಸುವುದರಲ್ಲಿ ದುರಾಸೆ ಪಟ್ಟಳೇ? ಸ್ತ್ರೀಯಾಗಿ, ತಾಯಿಯಾಗಿ, ಪವಿತ್ರ ಸ್ಥಾನದಲ್ಲಿರಬೇಕೆಂದೂ, ತನ್ನ ಮಗನನ್ನು ಸ್ವಹಸ್ತಗಳ ಮೇಲೆ ಬೆಳೆಸಿ ಪ್ರಯೋಜಕನನ್ನಾಗಿ ಮಾಡಬೇಕೆಂದೂ ತಪಿಸುವುದರಲ್ಲಿ ದುಡುಕಿದಳೇ!

ಎಷ್ಟು ಯೋಚಿಸಿದರೂ ಇವು ಯಾವುವೂ ನಿಜವಲ್ಲವೆನಿಸಿತು. ಹಾಗಾದರೆ ಭಾನುವಿಗೇಕೆ ಎಲ್ಲೆಲ್ಲೂ ಪರಾಜಯವೆದುರಾಯ್ತು? ಎಲ್ಲ ವಿಷಯಗಳಲ್ಲೂ ಶೋಕ ದೇವತೆಗೇ ಏಕೆ ಸ್ವಾಗತ ನೀಡಿದಳು? ಭಾನು ಬಯಸಿದುವೆಲ್ಲಾ ಬೇಡಿ ಬರದ ಭಾಗ್ಯವಾಗಲೀ, ಜನ್ಮಸುಕೃತವೆಂದೂ, ಕರ್ಮಫಲವೆಂದೂ ಏಕೆ ಸಮರ್ಥಿಸಿಕೊಳ್ಳಬೇಕಾಯ್ತು?

ಕಾರಣ ತೋರಿತು.

ಭಾನು ಭಾರತ ದೇಶದಲ್ಲಿ ಒಂದು ಹೆಣ್ಣಾಗಿ ಅವತರಿಸಿದ್ದುದು ಅವಳು '**ಬೇಡಿ ಬಂದ ಭಾಗ್ಯ** 'ವೇ ಅಷ್ಟು.

– ಶಾಂತಿ –

Laser typeset at Saravu Graphic Impressions , New Delhi and
Printed at The Central Electric Press, New Delhi